# ಪಂಚಕಜ್ಜಾಯ





೧೩ನೆಯ

## ಕರ್ಣಾಟಕ ಸಾಹಿತ್ಯಸಮ್ಮೇಲನ

ಮಂಗಳೂರು










1927

# ಅನುಕ್ರಮಣಿಕೆ






ಮಂಗಳೂರಿನ

ಕೆನರಿಸ್ ಮಿಶ್ಯನ್ ಪ್ರೆಸ್ ಮತ್ತು ಬುಕ್ ಡಿಪೋ,
ಕೊಡಿಯಾಲಬೈಲ್ ಪ್ರೆಸ್,
ಧರ್ಮಪ್ರಕಾಶ ಪ್ರೆಸ್,
ಶಾರದಾ ಪ್ರೆಸ್,
ಸದಾನಂದ ಕೊಒಪರೆಟಿವ್ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್:
ಕೆನರಾ ಪ್ರಿಂಟಿಂಗ್ ವರ್ಕ್ಸ್,
ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್: ಮತ್ತು
ಉಡುಪಿಯ ಪ್ರಭಾಕರ ಪ್ರೆಸ್ಸ್

ಈ ಮುದ್ರಾಲಯಗಳಲ್ಲಿ ಈ ಗ್ರಂಥದ ಭಾಗಗಳು ಮುದ್ರಣಗೊಂಡುವು.

## ತುಳುನಾಡ ರಾಣಿ.



ಕೊಡಲಿರಾಮನ ಸಿಡಿಲಿಗಳುಕಿಹಿಂದೋಡಿ ।
ಕಡಲಾರೆ, - ನೀನಲೆಗಳನ್ನೊಡೆದು ಮೂಡಿ, — ॥

ಪಡೆದ ಶಾಸನದಾದೆ ತುಳುನಾಡ ರಾಣಿ! ।
ಬೆಡಗಿಂದ ಧರೆಗಾದೆ ಕೊರಳ ಕಟ್ಟಾಣಿ! ॥

# ತುಳುನಾಡ ರಾಣಿ.

(ಚೌಪದಿ)

ಕೊಡಲಿ ರಾಮನ ಸಿಡಿಲಿಗಳುಕಿ ಹಿಂದೋಡಿ |
ಕಡಲಾರೆ,—ನೀನಲೆಗಳನ್ನೊಡೆದು ಮೂಡಿ,— ||
ಪಡೆದ ಶಾಸನದಾದೆ ತುಳುನಾಡ ರಾಣಿ; |
ಬೆಡಗಿಂದ ಧರೆಗಾದೆ ಕೊರಳಕಟ್ಟಾಣಿ. || ೧ ||

ಗಟ್ಟಗಳ ಮೆಟ್ಟಲಿನ ಅಟ್ಟಳಿಗೆ ಏರಿ |
ಸಾಟಿ ಇರದೊಡ್ಡೋಲಗದ ಸೊಬಗು ಮೀರಿ; ||
ಅಟ್ಟಹಾಸದ ಕಡಲು ಕಾಲ್ ತೊಳೆಯುತಿರಲು, |
ಒಟ್ಟೈಸಿದಾ ಪುಣ್ಯರಜ ಎನಿಸೆ ಮಳಲು. || ೨ ||

ಮಳೆಮುಗಿಲ ವೇಣಿಯಲಿ, ಮಳೆಬಿಲ್ಲ ಹಾರಂ, |
ತಿಳಿಯ ಬೆಳದಿಂಗಳಿನ ಕವಚ ಸಿಂಗಾರಂ, ||
ಹೊಲದ ಹಸುರುಡಿಗೆ, ನೇತ್ರಾವತಿಯ ಮಾಲೆ— |
ಮಲೆಗಾಳಿ ಸಾರುತಿಹುದಿಂದು ತವಲೀಲೆ. || ೩ ||

ದುಡುಕಿದಾ ಸೂರೆಗರ ಹಾವಳಿಗೆ ನೊಂದೆ! |
ಕಡಲಣುಗೆ! ಬಡವಾದೆ ಕಾವರಿಲ್ಲೆಂದೆ! ||
ಪಡುಗಡಲ ದಾಟಿ ಸೋದರಿಯೊದಗೆ ಮುನ್ನಾ |
ಕೆಡುಗಾಲ ಅಡಗಿ ಬೀಸಿತು ಶಾಂತಿ ಪವನಾ. || ೪ ||

ತಲೆದೂಗೆ ತೆಂಗು, ನೇಗಿಲು ನಗಲು, ಹೊಳೆಯು |
ಸುಳಿದೋಡೆ, ತಲೆ ಎತ್ತಿ ಕಂಗೊಳಿಸೆ ಬೆಳೆಯು, ||
ಮಳಿಗೆ ತಕ್ಕಡಿ ಕುಣಿಯೆ, ಶಂಖ ದೇಗುಲದಿ |
ನೊಳಗೆ, ಮನೆ ಮಕ್ಕಳಿಂದುಲಿಯೆ ಗದ್ದಲದಿ— || ೫ ||

ಮೆರೆಯಲಿಂತಾಂಗ್ಲೇಯರೊಡೆತನದಿ ನಾಡು! |
ಪರಮೇಶನೊಲುಮೆಯಿಂ; ಶಾಂತಿಗಿದು ಬೀಡು, ||
ಬರಲೆಮಗೆ ಜನ್ಮ ನಿನ್ನುದರದಲಿ, ತಾಯೆ! |
ದೊರೆಯಲೆಮಗನುದಿನವು ನಿನ್ನಡಿಯ ಸೇವೆ! || ೬ ||

ಎಂ. ಎನ್. ಕಾಮತ್.

# ಮುನ್ನುಡಿ.

"ಅಹುದಹುದು ಮತ್ತೇನು? ಮರಹಿಂಗೆ ಹಿರಿದು ಕಿರಿದುಂಟಲ್ಲದೆ,
ಅರುವಿಂಗೆ ಹಿರಿದು ಕಿರಿದುಂಟೇ ಹೇಳಯ್ಯ"

(ವಚನಕಾರರು)

ಕರ್ಣಾಟಕ ಸಾಹಿತ್ಯ ಪರಿಷತ್ತಿನವರು ದಕ್ಷಿಣ ಕನ್ನಡ ಜಿಲ್ಲೆಯವರಾದ ನಮ್ಮ ಆಮಂತ್ರಣವನ್ನು ಸ್ವೀಕರಿಸಿ, ನಿಖಿಲ ಕರ್ಣಾಟಕ ಸಾಹಿತ್ಯ ಸಮ್ಮೇಲನವನ್ನು ಈ ವರ್ಷ ಮಂಗಳೂರಲ್ಲಿ ಜರಗಿಸಿದ್ದಕ್ಕಾಗಿ ನಾವು ಅವರನ್ನು ಹೃತ್ಪೂರ್ವಕವಾಗಿ ವಂದಿಸುತ್ತೇವೆ. ಕನ್ನಡ ಭಾಷೆಯನ್ನು ಆಡುವ ಜನರು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಇದ್ದು ತಮ್ಮ ತಮ್ಮ ನಾಡುಗಳು ಕನ್ನಡದ ಕೇಂದ್ರಸ್ಥಾನವೆಂದು ಪ್ರತಿಪಾದಿಸುತಿದ್ದರೂ, 'ಕನ್ನಡ, ಕನ್ನಡ' ಎಂಬುದನ್ನು ಉಳಿಸಿಕೊಂಡು, ಆ ಹೆಸರಿನಿಂದಲೇ ಕರೆಯಲ್ಪಡುವ ಜಿಲ್ಲೆಗಳು ಎರಡೇ—ಮುಂಬಯಿಯ ಉತ್ತರ ಕನ್ನಡ, ಮದ್ರಾಸಿನ ದಕ್ಷಿಣ ಕನ್ನಡ. ಅನಾದಿ ಕಾಲದಿಂದ ಬಂದಿದ್ದುದು ಎರಡಾಗಿ ಹೋಗುವಂತೆ ಕನ್ನಡ ಜಿಲ್ಲೆಯು ಕಾರಣಾಂತರಗಳಿಂದ ಎರಡು ತುಂಡುಗಳಾಗಿ ಬೇರೆ ಬೇರೆ ಪ್ರಾಂತ್ಯಗಳನ್ನು ಸೇರಿಕೊಂಡಿದ್ದರೂ ಅವುಗಳ ಹೆಸರುಗಳಲ್ಲಿರುವ ಕನ್ನಡ ಅಳಿಯುವಂತಿಲ್ಲ. ದಕ್ಷಿಣ ಕನ್ನಡದಲ್ಲಂತೂ ಸುವರ್ಣಗಿರಿ ನದಿಯಿಂದ ದಕ್ಷಿಣಕ್ಕೆ ಮತ್ತು ಪಯಸ್ವಿನಿ ನದಿಯಿಂದ ಉತ್ತರಕ್ಕೆ ಜನಸಾಮಾನ್ಯರು ಆಡುವ ಮಾತು ತುಳು; ಪಯಸ್ವಿನಿಯ ತೆಂಕಣಕ್ಕೆ ಪ್ರಚಾರದಲ್ಲಿರುವುದು ಮಲೆಯಾಳ; ಹೀಗಿದ್ದರೂ ಪ್ರಾಥಮಿಕ ಶಾಲೆಗಳಿಂದ ವಿಶ್ವವಿದ್ಯಾಲಯದ ವರೆಗೂ ಗ್ರಾಮಚಾವಡಿಯಿಂದ ಜಿಲ್ಲಾ ಕೋರ್ಟಿನ ವರೆಗೂ ಈ ಜಿಲ್ಲೆಯು ಕನ್ನಡವನ್ನೆ ದೇಶಭಾಷೆಯನ್ನಾಗಿ ಇಟ್ಟುಕೊಂಡಿದೆ. ಸರಕಾರದ ಉದ್ಯೋಗಸ್ಥರಲ್ಲಿ ಅನೇಕಾನೇಕ ಜನರ ಮಾತು ಕೊಂಕಣಿ, ಅಂಥವರಿಗೆ ಕನ್ನಡವು ತೀರಾ ಹೊಸಭಾಷೆ; ಹೀಗಿದ್ದರೂ ಕನ್ನಡ ಭಾಷೆ ಸೇವೆಗಾಗಿ ನಿಲ್ಲುವವರು ಈ ಜಿಲ್ಲೆಯುಲ್ಲಿಯೂ ಇದ್ದಾರೆಂಬುದಕ್ಕೆ ಸಾಕ್ಷಿಯಾಗಿ ಅವರ ಲೇಖನಗಳನ್ನು ಪ್ರಚಾರಗೊಳಿಸುವುದೇ ಈ ಪುಸ್ತಕದ ಉದ್ದೇಶವು. ಇದರಲ್ಲಿಯ ಲೇಖಗಳು ವಿವಿಧ ವಿಷಯಗಳ ಮೇಲಿದ್ದು, ಭಾಷಾಸರಣಿಯುಲ್ಲಿಯೂ ವಿಸ್ತರಣ ಕ್ರಮದಲ್ಲಿಯೂ ಬಂದು ಬಗೆಯ ವೈಶಿಷ್ಟ್ಯವನ್ನು ತೋರಿಸುತ್ತಿವೆಂಬುದು ಪುಸ್ತಕ ದಿಗ್ದರ್ಶನದಿಂದಲೆ ಗೊತ್ತಾಗುವುದು. ಈ ರೀತಿಯಾಗಿ ಈ ಸಾಹಿತ್ಯ ಸಮ್ಮೇಲನಕ್ಕೆ ಬರೆದ ಲೇಖನಗಳ ಸಮುದಾಯಕ್ಕೆ 'ಪಂಚಕಜ್ಜಾಯ' ಎಂಬ ಹೆಸರಿಟ್ಟಿರುತ್ತದೆ.

ಈ ಇಪ್ಪತ್ತನೆಯ ಶತಮಾನದ ಮೊದಲನೆಯ ಕಾಲಾವಧಿಯಲ್ಲಿ ಕನ್ನಡ ಮಾತನ್ನೆ ಆಡುವ ಇತರ ಪ್ರಾಂತಗಳ ಸಂಪರ್ಕಜನ್ಯವಾದ ಸಂಸ್ಕೃತಿಯ ಲಾಭವೂ ಅನ್ಯ ಸರಕಾರದ ಆಶ್ರಯವೂ

ನಮ್ಮ ನಾಡಿನ ಪ್ರೋತ್ಸಾಹವೂ ಕನ್ನಡದ ಗ್ರಂಥರಚನೆಗೆ ಯಾವ ತರದ ಅವಕಾಶವನ್ನು ಕಲ್ಪಿಸ ದಿದ್ದರೂ, ಮಂಗಳೂರಿನ ಸಾಹಿತ್ಯ ಸಮ್ಮೇಲನಕ್ಕೆ ಸಮರ್ಪಿಸಿದ ಈ ಪಂಚಕಜ್ಜಾಯದಲ್ಲಿ ವಾಙ್ಮಯಾ ಭಿರುಚಿಗೆ ಬೇಕಾದ ಜೇನು, ಬೆಲ್ಲ, ಕೊಬರಿ, ಹೆಸರು, ಎಳ್ಳು, ಇವುಗಳಲ್ಲಿ ಯಾವುದು ಇದೆ ಯಾವುದು ಇಲ್ಲ ಎಂಬದನ್ನು ನಿಷ್ಕರ್ಷಿಸುವುದಕ್ಕೆ ವಾಚಕರಿಗೆ ಬಿಟ್ಟಿದ್ದೇವೆ.

ಈ ಪುಸ್ತಕದಲ್ಲಿ ಲೇಖಗಳನ್ನು ಬರೆದವರು ಮಾತ್ರವೇ ಈ ಜಿಲ್ಲೆಯೊಳಗಣ ಲೇಖಕವೃಂದ ವೆಂದು ತಿಳಿಯಲಾಗದು. ಹಳ್ಳಿಮೂಲೆಗಳಲ್ಲಿ ಈ ಕನ್ನಡದ ದೀವಿಗೆಯನ್ನು ಹಚ್ಚಿಕೊಂಡು ಬೆಳ ಕನ್ನು ಕೊಡುವ ಲೇಖಕರು ಹಲವರು ಇದ್ದಾರೆ. ಅಂಥವರ ಲೇಖನಗಳನ್ನು ಸಂಗ್ರಹಿಸಲಿಕ್ಕೂ ಬಂದ ಲೇಖನಗಳಲ್ಲಿ ಕೆಲವನ್ನು ಸ್ಥಳಾಭಾವದಿಂದ ಪ್ರಕಟಿಸಲಿಕ್ಕೂ ಸಾಧ್ಯವಾಗಲಿಲ್ಲ. ಇದ ಕ್ಕಾಗಿ ನಾವು ವಿಷಾದಿಸುತ್ತೇವೆ. ಲೇಖನಗಳನ್ನು ಕಳುಹಿಸಿಕೊಟ್ಟವರಿಗೆಲ್ಲ ನಮ್ಮ ಅಭಿವಂದನೆ ಗಳು.

ಪುಸ್ತಕ ಪ್ರಕಟಣೆಯಲ್ಲಿ ಪರಿಶ್ರಮವುಳ್ಳ ಎಂಟು ಮುದ್ರಾಲಯಗಳಿಗೆ ಈ ಗ್ರಂಥದ ಮುದ್ರಣ ಕಾರ್ಯವನ್ನು ಹಂಚಿಕೊಟ್ಟು, ಈ ಮೂಲಕ ದಕ್ಷಿಣ ಕನ್ನಡದಲ್ಲಿ ನಡೆಯುವ ಮುದ್ರಣದ ಪ್ರದ ರ್ಶನವನ್ನು ಮಾಡಲು ಅನುಕೂಲಿಸಿಕೊಟ್ಟದಕ್ಕಾಗಿಯೂ ಸಕಾಲದಲ್ಲಿ ಸಾಂಗವಾಗಿ ಮುದ್ದಾಗಿ ಮುದ್ರಿಸಿಕೊಟ್ಟದಕ್ಕಾಗಿಯೂ ನಾವು ಆ ಮುದ್ರಾಲಯಗಳ ಅಧಿಕಾರಿವರ್ಗವನ್ನು ಮನಃಪೂರ್ವಕ ವಾಗಿ ವಂದಿಸುತ್ತೇವೆ.

ಇತಿ

ಮಂಗಳೂರು
19ನೆ ಮೇ 1927
ಪ್ರಭವ ಸಂ। ವೈಶಾಖ ಬಹುಳ
ಗುರುವಾರ

ಉಳ್ಳಾಲ ಮಂಗೇಶರಾವ್,
ಯಮ್. ಯನ್. ಕಾಮತ್,
ಮುಳಿಯದ ತಿಮ್ಮಪ್ಪಯ್ಯ,
ಪೇಜಾವರ ಸೀತಾರಾಮಾಚಾರ್ಯ,
ಹುರ್ಳಿ ಭೀಮರಾವ್,
ಕರ್ನಾಟಕ ಸಾಹಿತ್ಯ ಸಮ್ಮೇಲನದ ಸ್ವಾಗತ ಸಮಿತಿಯ ಸಂಪಾದಕ ಮಂಡಲ.



S. C. P. Works, Ltd. Mangalore.

# ಸಾಹಿತ್ಯಸಮ್ಮೇಲನವಿಚಾರ.

## ರವೀಂದ್ರಸಾಹಿತ್ಯದಿಂದ ಸೂಚಿತವಾದ ಅನುಭವ.

ಅರುವತ್ತು ಸಂವತ್ಸರಗಳ ಆದೊಂದು ಹೊಸ ಪರ್ಯಾಯವು ಪ್ರಾರಂಭಗೊಂಡ ಶುಭಮುಹೂರ್ತ ದಲ್ಲಿಯೇ, ಮಂಗಳೂರಿಗೆ ಕರ್ಣಾಟಕ ಸಾಹಿತ್ಯ ಪರಿಷದದವರು ಸಾಹಿತ್ಯಸಮ್ಮೇಲನವನ್ನು ಕರೆವಂತೆ ಪ್ರೇರಣೆ ಯುಂಟಾದುದರಿಂದ, ಕಾಲಚಕ್ರದೊಡನೆಯೆ ಭಾಗ್ಯಚಕ್ರವೂ ನಮ್ಮ ಚಿಕ್ಕ ಜಿಲ್ಲೆಯ ಸಾಹಿತ್ಯದ ಉನ್ನತಿಯ ಮಟ್ಟಿಗೆ, ಮೇಲ್ಮೊಗವಾಗಿ ಉರುಳತೊಡಗುವ ಉತ್ತಮ ಲಕ್ಷಣವೇ ಕಾಣುತ್ತಿರುವುದೆನ್ನಬೇಕು; ಅದು ಕಾರಣವೆ, ಈ ಸಮ್ಮೇಲನವು ನಮ್ಮಲ್ಲಿ ಭಾಷಾಭ್ಯುದಯವನ್ನು ಕೈಗೂಡಿಸಿಕೊಡಲು ಅನುಕೂಲಿಸುವು ದೆಂದೇ ಪರಿಭಾವಿಸತಕ್ಕುದಾಗಿದೆ.

ಭಾಷಾಸೇವಕರೊಳಗೆ ಅನ್ಯೋನ್ಯಮೈತ್ರಿಯನ್ನು ಕಲ್ಪಿಸಿಕೊಡುವುದೂ, ಸಾಹಿತ್ಯದ ಉನ್ನತಿಯನ್ನು ಸಾಧಿಸುವುದೂ, ಅಂತು ಇವೆರಡೇ ಮುಖ್ಯೋದ್ದೇಶಗಳು ಸಾಹಿತ್ಯಸಮ್ಮೇಲನಗಳಿಗಿವೆ ಎಂದು ಎಲ್ಲರೂ ಬಲ್ಲರು. ಸಮ್ಮೇಲನದ ಎರಡುಮೂರು ದಿನಗಳಲ್ಲಿ ಕೆಲಮಂದಿ ಭಾಷಾಸೇವಕರು ಬಂದು ಕಡೆ ಸೇರಿದೊಡನೆಯೆ, ಸಮಸ್ತ ಸಾಹಿತ್ಯಕಾರರೊಳಗೆ 'ಗಲಶ್ಚ ಕಂಠಶ್ಚ' ಬಾಂಧವ್ಯವುಂಟಾಗುವುದೆಂದಾಗಲಿ, ಕನ್ನಡ ಭಾಷಾಗ್ರಂಥಗಳು ಎತ್ತರಕ್ಕೆ ರಾಶಿಬಿದ್ದು, ಪರಶುರಾಮಕ್ಷೇತ್ರದಲ್ಲಿ ಸಹ್ಯಾದ್ರಿಯಿಂದೀಚೆಗೆ ಮತ್ತೊಂದು ಗ್ರಂಥಸಹ್ಯಾದ್ರಿಯನ್ನೇ ನಿರ್ಮಾಣಗೊಳಿಸುವುವೆಂದಾಗಲಿ ನಂಬಲಾಗುವುದಿಲ್ಲ; ಸಾಹಿತ್ಯಕ್ಷೇತ್ರವು ಮಾನವಹೃದಯದ ಈರ್ಷ್ಯಾ-ಕಲಹಗಳ ರಂಗಭೂಮಿಯಾಗಿರುವಂತೆಯೆ, ಶಾಂತಿಪ್ರೇಮಾದಿಗಳ ಲೀಲಾಭೂಮಿಯೂ ಆಗಿರುವುದರಿಂದ, ಸಂಘಶಕ್ತಿಯೇ ಮುಖ್ಯಶಕ್ತಿಯಾಗಿರುವ ಈ ಯುಗದಲ್ಲಿ, ಸಮ್ಮೇಲನಕ್ಕೆ ಸಂಬಂಧಪಟ್ಟವರೆಲ್ಲರೂ ಸಾಹಸ ಪಟ್ಟು ಸಾಧಿಸಿದರೆ, ಯಶೋಲಾಭವಾಗುವುದೆನ್ನುವುದಕ್ಕೆ ಸಂಶಯಪಡಲು ಕಾರಣವೇನೂ ಕಾಣುವುದಿಲ್ಲ.

ಕರ್ಣಾಟಕದ ಸುತ್ತಲಿನವರೆಲ್ಲ ವಿಶೇಷೋದ್ಯಮದಲ್ಲಿ ನಿರತರಾಗಿದ್ದು, ಅವರ ಸಾಹಸಗಳ ಫಲವಾಗಿ, ಕರ್ಣಾಟಕದ ವಿಸ್ತಾರಸಂಪತ್ತಿಗೆ ಹಾನಿತಟ್ಟದಿರದೆಂದು ಕನ್ನಡಿಗರು ತಿಳಿದುಕೊಂಡ ಬಳಿಕವೂ, ನಾಡಿ ನವರಲ್ಲಿ ಒಕ್ಕಟ್ಟಿನ ಅದೊಂದು ಸೂತ್ರವಾಗಿರುವ ಭಾಷೆಯನ್ನೂ ಅದರ ಸಾಹಿತ್ಯವನ್ನೂ ನಾವು ದೃಢೀ ಕರಿಸುವುದರಲ್ಲಿ ಹಿಂದೆಗೆಯಬಾರದೆಂದು ನಮ್ಮಲ್ಲಿ ಈಗಲಾದರೂ ಉತ್ಸಾಹವೂ ವಿಶ್ವಾಸವೂ ಹುಟ್ಟದೆ ಇರಬಹುದೇ? ಕರ್ಣಾಟಕದ ಛಿನ್ನಾಭಿನ್ನವಾದ ಪ್ರದೇಶಗಳ ವಾತಾವರಣದಲ್ಲಿ, ಉತ್ಕಲೋದ್ಯಮ, ಕೇರಳೋದ್ಯಮ, ಆಂಧ್ರೋದ್ಯಮ, ಇನ್ನು ತಮಿಳೋದ್ಯಮಗಳ ಹವೆಯು ಚಳವಳಿಸಿ ಸುಳಿದಿರುವ ಪ್ರಯುಕ್ತ, ವಂಗಭಂಗದ ಕಾಲದಲ್ಲಿ ಬಂಗಾಲದಲ್ಲುಂಟಾದ ಆಂದೋಲನದಂತೆ, ನಮ್ಮಲ್ಲಿಯೂ ರಾಷ್ಟ್ರೀಯ ಏಕೀಕರಣ, ವಿದ್ಯಾಪೀಠಸ್ಥಾಪನೆ ಮೊದಲಾದ ಚಟುವಟಿಕೆಯು ತಳಮುಳಿಸ ತೊಡಗಿದೆ. ಈ ತಳಮುಳವಾದರೂ ಒಂದು ಬಗೆಯಲ್ಲಿ ಆನಂದಕರವೇ ಆಗಿದೆ ಎನ್ನಬೇಕು. ಈ ದೆಸೆಯಿಂದಲೇ ಹಳೆಯ ಶಿಲಾಲಿಪಿಗಳನ್ನೋದಿ ಕೊಳ್ಳಲು, ಶಾಸನಗಳನ್ನು ಹುಡುಕಿಕೊಳ್ಳಲು, ಹಳೆಯ ದಫ್ತರುಗಳನ್ನು ತೆಗೆದಿಟ್ಟುನೋಡಲು ನಮ್ಮಲ್ಲಿ ಕುತೂಹಲವುಂಟಾಗಿರುವ ಹಾಗೆಯೇ, ಹೊಸತರದ ಚಿಕ್ಕ ಚಿಕ್ಕ ಪುಸ್ತಕಗಳು, ಸುಂದರ ಮುದ್ರಣದ ಗ್ರಂಥಗಳು, ಪರಿಶೋಧಿತ ಕಾವ್ಯಾದಿಗಳು, ಪ್ರಕಟಗೊಳ್ಳುತಿರುವುದೂ ತಲೆದೋರುತಿದ್ದು, ಗತವೈಭವದ ಸ್ಮರಣೆಯನ್ನೂ ಆಗಾಗ ತಂದುಕೊಂಡು, ನವವಿಭವದ ಸಿಂಗಾರಕ್ಕೆ ಮನಸ್ಸು ಸೋಲುವುದಕ್ಕೆ ತವಕ ಗೊಳ್ಳುತ್ತಿದೆ. ಇದು ಕರ್ಣಾಟಕೋದ್ಯಮದ ವಾಸ್ತವಿಕ ಲಕ್ಷಣವಾಗಿರಲಿ, ಅಲ್ಲದಿರಲಿ, ಭಾಷಾಸೇವೆಯು ಹಾಗೂ ದೇಶಪ್ರೇಮದ ನಟನೆಯೆಂದಾದರೂ ಎನ್ನುವುದಕ್ಕೆ ಆತಂಕವಿದೆಯೇ? ಇಂಥ ನಟನೆಯು ಬಹು

ಕಾಲ ನಡೆಯುತ್ತ ಬರುವುದಾದರೆ, ಅದೊಂದು ರೂಢಿಯಂತಾಗಿ, ಅದರಿಂದುಂಟಾಗಬಹುದಾದ ಅನುಭವ ದಿಂದ ಯಥಾರ್ಥವಾದ ಭಾವೀ ಉನ್ನತಿಗೆ ಸಹಾಯವಾಗದೆ ಇರಬಲ್ಲುದೇ?

ಕಾವೇರಿಯಿಂದ ಗೋದಾವರಿಯ ವರೆಗೆ ನಮ್ಮ ನಾಡು ನೀಡಿಕೊಂಡಿದ್ದಿತೆಂದೇ ಹಾಡಿ ಹಾಡಿ ಅದರಂಥ ಬೇರೆ ಒಂದು ಪಲ್ಲವಿಯಿಲ್ಲವೆಂದು ಆಡುವುದರಲ್ಲೆ ನಾವು ಕಾಲ ಕಳೆದು ಬೇರೇನೂ ಮಾಡದೆ, ಆ ಮಹಾವಾಕ್ಯದ ಸೂಚಿತಾರ್ಥವನ್ನೆ ನಾವು ಮರೆತುಕೊಳ್ಳುವಂತಾಗಿರಲು, ಗೋದಾವರಿಯು ಆಂಧ್ರ ವಿದ್ಯಾಪೀಠದ ಒಳಗೆ ಹರಿದು ಹೋಗುತ್ತಾ ನೆರೆಯೇರಿ ಬಳ್ಳಾರಿಯ ಕರ್ಣಾಟಕತ್ವವನ್ನು ಕೊಚ್ಚಿಕೊಂಡು ಹೋಗುವಂತಾದ ಅಸಾಧ್ಯ ಘಟನೆಯನ್ನೂ, ಕಾವೇರಿಯು ತಮಿಳು ನಾಡಿನ ಗಂಗಾಮಾತೆಯೆನಿಸಿಕೊಳ್ಳುವ ರಭಸದಲ್ಲಿ ಸೇಲಂ ಕೊಯಮುತ್ತೂರುಗಳ ಕರ್ಣಾಟಕತ್ವವನ್ನು ಮುಳುಗಿಸಲು ಮುಂದರಿಯುವುದನ್ನೂ, ಕಣ್ಣಾರೆ ಕಂಡು, ನಮ್ಮೂರ ಕನ್ನಡಿತಿಯಾದ ನೇತ್ರಾವತಿಯು ಬಂಧುವಿಯೋಗದಲ್ಲಿ ನಿರುಪಾಯವಾಗಿರಬೇಕಾ ಗಿದೆ ಎಂಬದರಿಂದ ಕಂಬನಿಗರೆದೇ ಇರುತ್ತಿರಬೇಕಾದ ವಿಚಾರವನ್ನು ದಕ್ಷಿಣ ಕನ್ನಡದವರಾದ ನಾವು ಎಣಿಸಿಯೆಣಿಸಿ ಸ್ವಪ್ನಚಕಿತರಂತೆ ಇರುವೆವಾದರೂ, 'ಯಾವುದೊಂದು ವಿಧದಿಂದ ಒಂದಾಗೋಣ, ಒಂದಾಗದೆ ಮುಂದಿಲ್ಲ' ಎಂದು ಆತ್ಮರಕ್ಷಣೆಯ ಸಲುವಾಗಿ, ಚದರಿಬಿದ್ದ ಭಾಷಾಬಂಧುಗಳೆಲ್ಲರೂ ಕೇಳುವಂತೆ ಈ ಸಮ್ಮೇಲನವನ್ನು ಇಲ್ಲಿಗೆ ಕರೆಯಿಸಿದೆವೆಂದು ಹೇಳುವುದಕ್ಕೆ ಏತಕ್ಕೆ ಹಿಂತೆಗೆಯಬೇಕು?

ಈ ಭಾಷೋದ್ಧಾರಕ್ಕಾಗಿಯಾಗಲಿ ದೇಶೋದ್ಧಾರಕ್ಕಾಗಿಯಾಗಲಿ ನಡೆದ ಯಾವತ್ತು ಯಜ್ಞಯಾಗಾದಿ ಗಳನ್ನು ಮಾಡುವಾಗ, ತಮ್ಮ ಆರಾಧನೆಯೆಲ್ಲವೂ ಸಪ್ತಸಾಗರಗಳಾಚೆಯ ಶ್ವೇತಶಿಲಾವಿಗ್ರಹಕ್ಕೆ ಸಮ ರ್ಪಣೆ ಹೊಂದುವಂತೆ, ನಾವು ಇದು ವರೆಗೆ ಪ್ರಯತ್ನಿಸಿ, ಪಶ್ಚಿಮಾಭಿಮುಖವಾಗಿ ಕುಳಿತಿದ್ದುದು ಸಾಕಾ ಗಿಲ್ಲವೇ? ಉದಯದ ಸೂಚನೆಯು ಪೂರ್ವದಿಂದಲೇ ಅಲ್ಲದೆ ಪಡುವಲಿಂದ ಹೇಗಾಗಬೇಕು? ಪೂರ್ವ ಸ್ಮರಣೆಯು ನಮ್ಮಲ್ಲಿ ಚಿರಕಾಲದ ತನಕ ಜಾಗೃತವಾಗಿರಲಿ ಎಂದು ಈಗಲಾದರೂ ನಾವು ಕಣ್ತೆರೆದಿರುವುದು ಕಲ್ಯಾಣಕರವು. ಜಂಝಾವಾತನನ್ನು ಮಾತ್ರ ಪ್ರಚಂಡವಾಗಿ ಬೀಸುವ ಅರಬ್ಬೀಸಮುದ್ರದ ಅಲೆಗಳ ಅಟ್ಟಹಾಸದ ಮಾತು ಇನ್ನು ಸಾಕು; ಕೊಡಗು, ಮೈಸೂರು, ಮುಂಬಯಿ ಕರ್ಣಾಟಕ, ಮೊದಲಾಗಿ ಅಲ್ಲಲ್ಲಿಗೆ ಬಿದ್ದಿರುವ ನಮ್ಮ ಕರ್ಣಾಟಕದ ದೇಶದ ಅಂಗಾಂಗಗಳಲ್ಲೆಲ್ಲ, ಭಾಷಾಸಂಬಂಧವೊಂದೇ ರಕ್ತ ಸಂಬಂಧದಂತೆ ಹರಿಯುತ್ತಿರುವುದನ್ನು ನಾವು ತಿಳಿದುಕೊಂಡು, ಏಕಭಾಷಾಬಾಂಧವ್ಯದಿಂದ ಪರಸ್ಪರ ಸೋದರತೆಯನ್ನು ಪ್ರತ್ಯಕ್ಷವಾಗಿ ಆಚರಣೆಗೆ ತಂದುಕೊಳ್ಳಲು ಅಗತ್ಯವಾದ ಜಾಗೃತಿಯನ್ನು ಪಡೆದೆವಾದರೆ, ನೆಲಸಮವಾಗಿರುವ ದೂಳಲ್ಲಿ ನರಳುವ ಕಾಲುಬೆರಳಿನ ವೇದನೆಯನ್ನಾದರೂ ಉನ್ನತವಾಗಿ ಎದ್ದುನಿಂತಿರುವ ತಲೆಯು ತಿಳಿದುಕೊಳ್ಳುವಂತೆ—ಒಂದು ದೇಶಭಾಗದ ವ್ಯಥೆಯು ಮತ್ತೊಂದು ದೇಶಭಾಗಕ್ಕೆ ಹೇಗೆ ತಿಳಿದು ಬಾರದೆ ಇರಬಹುದು? ಅಲ್ಲಿಯ 'ಬೋಲಿ'ಯು ಇಲ್ಲಿಯ 'ಗಾಲಿ'ಯಂತೆ ಏತಕ್ಕೆ ಇರಬೇಕು? ಒಬ್ಬರ ವಿನೋದದಿಂದ ಮತ್ತೊಬ್ಬರಿಗೇಕೆ ವಿರೋಧವುಂಟಾಗಬೇಕು? 'ಲೋಕಾಃ ಸಮಸ್ತಾಃ ಸುಖಿನೋ ಭವಂತು' ಎಂಬ ಆ ಆದರ್ಶ ಆಶಯಕ್ಕೆ ಭಾಷಾಸಂಬಂಧದಿಂದ ಮಿತಿಯಿಲ್ಲದಷ್ಟು ಪ್ರೋತ್ಸಾಹವುಂಟು.

ಭೂತಕಾಲದ ಪಂಪನ ಹಾಗೂ ರನ್ನನ ನುಡಿಯೇ ನಮ್ಮದು; ಪಂಪನ ಹಾಡನ್ನು ನಾವು ಮರೆತಿಲ್ಲ; ರನ್ನನ ರಸಿಕತ್ವವನ್ನು ನಾವೂ ಸ್ವಾದಿಸುತಿದ್ದೇವೆ. ಆ ಹಾಡನ್ನು ಹಾಡದಂತೆ ಆ ಅಮೃತವನ್ನು ಸೇವಿಸದಂತೆ ನಮ್ಮ ಕೊರಳುಗಳನ್ನು ಕತ್ತರಿಸುವುದಕ್ಕೆ ಯಾವ ತಲವಾರವೂ ಎಂದೂ ಬಗೆವ ಹಾಗಿಲ್ಲ. ಗ್ರೀಕನಾಟಕ ದಲ್ಲಿ ಕೂಡ ಕನ್ನಡ ಮಾತುಗಳಿದ್ದುವು ಎಂದು ಕೇಳಿದಾಗ, ಹಿಗ್ಗಿ ಹದಿನಾರಾದೆವು; ಮುಂಬಯಿ ಮದರಾಸು ಪ್ರಾಂತಿಕ ನ್ಯಾಯವಿಧಾಯಕ ಸಭೆಗಳಲ್ಲಿ ಒಬ್ಬೊಬ್ಬ ಮಂತ್ರಿಯು ಕನ್ನಡಿಗನಿರುವನು, ಎಂದೊಡನೆ ಕನ್ನಡದ ಆಕರ್ಷಣಶಕ್ತಿಯು ನಮ್ಮ ಪ್ರಾಣಶಕ್ತಿಯನ್ನು ಉಜ್ವಲಗೊಳಿಸಿತು. ಇದೇನು ಸಾಮಾನ್ಯವಾದ ಉತ್ಸಾಹವೇ? ಅದುಕಾರಣವೆ, ವಿದೇಶೀಯ ಸಾಹಿತ್ಯಮಂದಿರದ ಹೆಬ್ಬಾಗಿಲಲ್ಲಿ ನಿಂತಿದ್ದು

ಇದು ವರೆಗೆ ಲಾಭಕ್ಕಿಂತಲೂ ಅಧಿಕವಾದ ದೈನ್ಯವನ್ನೆ ಗಂಟುಕಟ್ಟಿಕೊಂಡುದು ಸಾಕು. ಇಷ್ಟು ಕಾಲ ಅನುಭವಿಸಿದ ದೈನ್ಯದ ಫಲವಾಗಿ, ಈಗ ನಾವು ಕಂಡುಕೊಂಡಿರುವ 'ಸಿರಿಗನ್ನಡಂ ಗೆಲ್ಗೆ' ಎಂಬೀ ದಿವ್ಯಮಂತ್ರವೇ ನಮ್ಮನ್ನು ಭವಿಷ್ಯತ್ತಿನ ಕೀರ್ತಿಮಂದಿರದ ಕಡೆಗೆ ನಡೆಯಿಸಿಕೊಂಡು ಹೋಗುವುದಲ್ಲದೆ, 'ಸಾಹಿತ್ಯವೇ ಮನುಷ್ಯಜಾತಿಯ ಸಮ್ಮೇಲನಕ್ಕೆ ಸೇತುವು' ಎಂದೂ ಸ್ಪಷ್ಟವಾಗಿ ಬೋಧಿಸುತ್ತಲಿದೆ. ನಾಲ್ಕೂ ಕಡೆಯಿಂದ ನಮ್ಮ ಭಾಷಾಸಾಹಿತ್ಯವನ್ನೂ ಭಾಷಾಪ್ರಾಂತವನ್ನೂ ನುಂಗಬರುವವರನ್ನು ನೋಡುತ್ತ ನರಕಟ್ಟಿದಂತಾಗಿರುವ ನಮಗೆ ಇನ್ನಾದರೂ ಶಾಂತಿಯನ್ನೂ ಆತ್ಮಗೌರವವನ್ನೂ ನಾವೇ ಮಾಡಿಕೊಳ್ಳುವ ಹಾಗೆ ಸಹಕರಿಸುವಂತೆ ಈ ದಿವ್ಯಮಂತ್ರವೇ ಧ್ರುವತಾರೆಯಾಗಿದ್ದು ನಮ್ಮ ಪ್ರಗತಿಯನ್ನು ಸಾಧಿಸಲು ಈ ಸಮ್ಮೇಲನದ ಮುಖಾಂತರ ದಿಕ್ಕು ತೋರಿಸಲಿ! ಇದೇ ಈ ಸಮ್ಮೇಲನದ ಯತ್ನವು.

ಇಬ್ಬರ ರೀತಿ ನಾಲ್ಕು ಬಗೆಯಾಗಿರುವ ಈ ಭಾಷಾಸೇವಕ ಸಮಾಜದಲ್ಲಿ, ಪರಸ್ಪರ ಪ್ರೀತಿಯನ್ನೂ ಈ ಸಮ್ಮೇಲನವು ಹುಟ್ಟಿಸಿದರೆ, ಅದೇ ವಿಶೇಷ ಕಲ್ಯಾಣವು. ಆದರೂ, ಸಾಹಿತ್ಯಕರು ಜಗತ್ತಿನಲ್ಲೆಲ್ಲಿಯೂ ಬೆಕ್ಕಿನ ಜಾತಿಗೆ ಸಂಬಂಧವುಳ್ಳವರಂತೆ, ಬೇರೆ ಬೀಡಾರದವರು. ಸಾಹಿತ್ಯಕರೆಲ್ಲರೂ, ಸಾಹಿತ್ಯಮಂಡಲವನ್ನೇ ಮಾಡಿಕೊಂಡರೂ, ಒಂದೇ ಮಳಿಗೆಯನ್ನಿಟ್ಟು ವ್ಯಾಪಾರ ನಡೆಸಿಲ್ಲ. ಪ್ರತಿಯೊಬ್ಬರ ಕಾರ್ಯಪ್ರಣಾಲಿಯೂ, ಜಪಮಂತ್ರವೂ ಬೇರೆಯೇ. ಸರಸ್ವತಿಯು ಯಾವುದೊಂದೇ ಹಳೆಯ ಮಂತ್ರದ ಜಪದಿಂದ ಪ್ರತ್ಯಕ್ಷವಾಗುವಂತಿಲ್ಲ. ಸಾಹಿತ್ಯದಲ್ಲಿ ಸಾಂಪ್ರದಾಯಿಕತೆಯು ಹಾನಿಕರ. ಮನುಷ್ಯಜಾತಿಯ ಪ್ರಗತಿಯ ಸ್ವಭಾವಲಕ್ಷಣವೇ ಹೀಗೆ. ಈ ಭಿನ್ನತೆಯು ಲೋಕರುಚಿಯನ್ನು ತೃಪ್ತಿಪಡಿಸುತ್ತಿದೆ. ಇದೊಂದು ಅಳಿದು ಹೋಗುವಂತಾದಲ್ಲಿ ಸತ್ಯಯುಗವು ಎಂದೋ ಮೂಡುತಿದ್ದಿತು; ಪರಿಷದಗಳೂ ಸಮ್ಮೇಲನಗಳೂ ಅನಾವಶ್ಯಕವಾಗುತಿದ್ದುವು.

ಇಂಗ್ಲಿಷ ಶಾಲೆಯನ್ನು ನಮ್ಮ ವೇಷಭೂಷಾದಿಗಳೊಡನೆಯೆ, ನಮ್ಮ ನೆರಳನಂತೆಯೆ, ನಮ್ಮ ಬಳಿಯಲ್ಲಿರಿಸಿಕೊಂಡು ಜೀವನಮಾಡುತ್ತ, ಕನ್ನಡಿಗರು ಕನ್ನಡಿಗರಿಗೇ ಬರೆವ ಪತ್ರವ್ಯವಹಾರವನ್ನು ಇಂಗ್ಲಿಷಿನಲ್ಲೆ ಬರೆಯುತ್ತ, ಸ್ವದೇಶದ ಹಿತೈಷಿತೆಯನ್ನು ಇಂಗ್ಲಿಷಭಾಷಾಮೂಲಕವಾಗಿ ಸಾಧಿಸಲು ಮುಂಕೊಂಡು, ಇಂಗ್ಲಿಷಭಾಷಣಗಳನ್ನು ಕೊಡುತ್ತ ಮೆರೆವಷ್ಟು ಮೀರಿಯೂ ನಾವು ಭಾಷಾವಾತ್ಸಲ್ಯವನ್ನು ತ್ಯಜಿಸಿರುವೆವೆಂದೂ ಸಹ ತಿಳಿಯಲಾರದ ಅತಿ ಲಜ್ಜಾಹೀನತೆಯಲ್ಲಿ ನಿಶ್ಚೇಷ್ಟಿತರಾಗಿ ಬಿದ್ದಿರುವೆವು. ವೇದನೆಯ ಅನುಭವವೇ ದೇಹಕ್ಕೆ ತಿಳಿಯಲಾರದ ಅದೊಂದು ರೋಗಾವಸ್ಥೆಯಿದೆ; ಅಂಥ ರೋಗದ ಪರಮಾವಧಿಯ ಕಡೆಗೆ ನಮ್ಮ ಔದಾಸೀನ್ಯವು ಹರಿಯುತ್ತಿದೆ. ಯಾವುದೊಂದು ದೇಶದ ಭಾಷೆ, ಭೂವಿವರಣೆ, ಇತಿಹಾಸ, ಕಾವ್ಯ, ಕಥಾ, ಕಾಹಿನಿ, ಜೀವಜಂತು, ಉದ್ಭಿದ, ಮನುಷ್ಯ, ಧರ್ಮ, ಸಾಹಿತ್ಯ ಇವುಗಳಲ್ಲೊಂದರ ಪರಿಚಯವೂ ಯಥಾರ್ಥವಾಗಿ ಯಾರಲ್ಲಿಲ್ಲವೊ ಅವರು ಆ ದೇಶದವರೆಂದು ಹೇಳುವುದೂ ಹೇಳಿಕೊಳ್ಳುವುದೂ ಹೇಗೆ? ನಮ್ಮ ದೇಶವನ್ನು ಆಕ್ರಮಿಸಿ ಗೆಲ್ಲಬೇಕೆಂಬವರು ಇಷ್ಟೆಲ್ಲದರ ರಹಸ್ಯವನ್ನು ಅಗತ್ಯವಾಗಿಯೂ ತಿಳಿದುಕೊಳ್ಳದೆ ಕೃತಾರ್ಥರಾಗರು; ಹಾಗೆಂದು, ದೇಶೀಯರಾದವರಿಗೆ ಇದನ್ನು ಸಂಗ್ರಹಿಸಿಕೊಳ್ಳುವ ಅಗತ್ಯವೇನೂ ಇರಲಾರದೇ? ಇಷ್ಟು ವಿಷಯಸಂಗ್ರಹವು ನಮ್ಮಲ್ಲಿರದೆ ನಾವು ಯಥಾರ್ಥವಾಗಿ ಕರ್ಣಾಟಕ ಪ್ರಾಂತವನ್ನು ಸೃಷ್ಟಿಸಲಾರೆವು. ಅದಕ್ಕಾಗಿ, ಸಂಘವನ್ನೇರ್ಪಡಿಸಿಕೊಂಡಾದರೂ ಈ ಬಗೆಯ ವಿಷಯ ಸಂಗ್ರಹಸಾಧನೆಗೆ ತೊಡಗಬೇಕಾಗಿದೆ. 'ಕನ್ನಡ,' 'ಕರ್ಣಾಟ,' 'ಕರ್ಣಾಟಕ' ಎಂಬೀ ಶಬ್ದಗಳ ರೂಪದ ವಿಚಾರದ ಕಡೆಗೆ ಗಮನಕೊಟ್ಟಿರುವಷ್ಟರ ಒಂದಂಶ ಪ್ರಯತ್ನದಿಂದ ಬೇರೆ ಎಷ್ಟೋ ಹಿತಕರವಾದ ಸಾಹಿತ್ಯವನ್ನು ನಾವು ಸೃಷ್ಟಿಸಬಹುದಾಗಿದ್ದಿತು. ಸಾಹಿತ್ಯವನ್ನು ಸೃಷ್ಟಿಸುವುದು ತೀರ ಕಷ್ಟವೆಂತಾದರೂ, ಅದರ ಅಂಗಗಳನ್ನಾದರೂ ಜೋಡಿಸಲು ತೊಡಗಬಹುದಾಗಿದ್ದಿತು. ವ್ಯಾಕರಣ, ಅಭಿಧಾನ, ಭಾಷಾತತ್ವ ಮೊದಲಾದುವನ್ನು ಸಂಗ್ರಹಿಸುವುದು ಸಂಘಗಳಿಗೆ ಸಾಧ್ಯವು; ಆದರೆ, ಪುರಾತನತತ್ವ, ಲೋಕವಿವರಣೆ, ಭಾಷಾತತ್ವ

ಮೊದಲಾದುವನ್ನೂ ಅಲ್ಲಲ್ಲಿನವರೇ ಸಂಗ್ರಹಿಸಿದಷ್ಟು ಸಾಂಗವಾಗಿಯೂ ಪೂರ್ಣವಾಗಿಯೂ ವಿದೇಶೀಯರಿಂದ ಎಂದೂ ಸಾಧ್ಯವಾಗದು ಎಂದು ತಿಳಿದುಕೊಂಡ ಬಳಿಕವೂ, ದೇಶದಲ್ಲಿದ್ದೂ ದೇಶೀಯರಾದ ನಾವು ಅಂಥ ಸಂಗ್ರಹವನ್ನೇನೂ ಸಾಕಷ್ಟು ಮಾಡಿಲ್ಲವೆಂದು ನಮ್ಮ ಉದಾಸೀನತೆಯನ್ನು ಪ್ರಕಟಿಸಿ ಕಲಂಕವನ್ನು ತೊಡೆದು ಕೊಂಡು ನರಳಿರುವುದು ಎಂಥ ಸೊಬಗು? ಅದುಕಾರಣ, ಸಾಹಿತ್ಯಪರಿಷದವು ಭಾಷಾತತ್ತ್ವ, ಪ್ರಾಚೀನ ಸಾಹಿತ್ಯ ಮೊದಲಾದುವನ್ನೂ ಕೂಲಂಕಷವಾಗಿ ಸಂಗ್ರಹಿಸಬೇಕಾಗಿರುವಂತೆಯೆ, ಕನ್ನಡಿಗರೆಲ್ಲರೂ ಸಾಹಿತ್ಯಪರಿಷದ ದಲ್ಲಿ ಪೂರ್ಣಾಂತಃಕರಣದಿಂದ ಶ್ರದ್ಧೆಯನ್ನಿಟ್ಟು ತಮತಮಗೆ ಸಂದ ಕಾರ್ಯಭಾಗವನ್ನು ಮಾಡಿಕೊಡುವುದರ ಮೂಲಕ, ದೇಶಹಿತವೂ ಭಾಷೋನ್ನತಿಯೂ ಸಾಧ್ಯವಾಗುವಂತೆ ಮಾಡಿಕೊಡಬೇಕಾಗಿದೆ.

ಪರಿಷದದ ಸಾಂವತ್ಸರಿಕ ಅಧಿವೇಶನವು ಪ್ರಾಂತದ ಬೇರೆ ಬೇರೆ ಭಾಗಗಳಲ್ಲಿ ಸೇರುವಂತೆ ಆಗುವ ಕಾರಣ, ಭಾಷಾಸಾಹಿತ್ಯಗಳ ಬೆಳವಣಿಗೆಗೆ ಕೆಲ ಮಟ್ಟಿನ ಅನುಕೂಲತೆಗಳನ್ನು ಒದಗಿಸಿಕೊಡುವುದಕ್ಕೆ ಯೋಗ್ಯ ಸಂದರ್ಭವು ದೊರೆವಂತಾಗುತ್ತದೆ. ಯಾವ ಪ್ರದೇಶದಲ್ಲಿ ಇಂಥ ಅಧಿವೇಶನವು ಜರಗುವುದೋ ಅಲ್ಲಿನ ಉಪಭಾಷೆಗಳು, ಇತಿಹಾಸ, ಪ್ರಕೃತಿ, ಪ್ರಾಕೃತಸಾಹಿತ್ಯ ಮೊದಲಾದುವುಗಳ ತಥ್ಯಸಂಗ್ರಹವೂ ಸಮಾಲೋಚ ನೆಯೂ ನಡೆಯುವಂತಾಗುವ ಕಾರಣ, ಸಾಹಿತ್ಯಪರಿಷದದ ಉದ್ದೇಶವು ಸಫಲಗೊಳ್ಳುವುದು. ಅಲ್ಲಿನ ಪ್ರಾಚೀನ ದೇವಾಲಯಗಳೇ ಮೊದಲಾದ ಇತಿಹಾಸಪ್ರಸಿದ್ಧ ಸ್ಥಳಗಳ ಚಿತ್ರಗಳೂ, ಹಳೇ ಗ್ರಂಥಗಳು, ನಾಣ್ಯಗಳು, ಶಾಸನಗಳು ಮುಂತಾದುವುಗಳ ಪ್ರದರ್ಶನವು ಸಹ ಆಗಲೆ ಜರಗಿದರೆ, ಅದರಿಂದಾಗುವ ಉಪಕಾರವೇನೂ ಸಾಮಾನ್ಯವಾದುದಲ್ಲ. ಸ್ಥಾನೀಯ ಅಭಿನಯವಿಲಾಸ, ಹಾಡುಗಾರಿಕೆ ಮೊದಲಾದುವೂ ಅಪ್ರಾಸಂಗಿಕವಾಗಿಲ್ಲ. ನಮ್ಮಲ್ಲಿರುವಂಥವುಗಳ ಪ್ರಯೋಜನದ ಕಡೆಗೆ ನಮ್ಮ ಲಕ್ಷ್ಯವು ಸೆಳೆದಂತಾದರೆ ಮಾತ್ರ, ಅಂಥವೆಲ್ಲ ನಮ್ಮಲ್ಲಿರುವುದು ಸಾರ್ಥಕವೆನಿಸೀತು. ಹಾಗಲ್ಲದಿದ್ದಲ್ಲಿ, ನಾವು ಆ ವಿಷಯಗಳ ಕಾವಲಿ ನವರು ಹೊರತು ಧನಿಗಳಲ್ಲ, ಪರಕೀಯರಿಗಾಗಿ ಅವನ್ನು ಕಾದಿಟ್ಟುಕೊಳ್ಳುರುವವರೇ ಹೊರತು ಸ್ವತ್ತಾಧಿ ಕಾರಿಗಳಲ್ಲ. ಪರಕೀಯರು ನಮಗೆ ಕೊಟ್ಟಿರುವಷ್ಟನ್ನೆ ನಾವು ಬಾಯಪಾಠದ ಮೂಲಕ ಒಪ್ಪಿಸಬಲ್ಲ ಜ್ಞಾನಿಗಳೆಂತಾದರೆ, ನಮ್ಮ ಭಾಷೆಯ ಜ್ಞಾನಸಂಪತ್ತಿಗೆ ನಾವು ಅನಧಿಕಾರಿಗಳೆಂದು ಲೋಕಕ್ಕೆಲ್ಲ ಸಾರಿ ದಂತಾಗುವುದು. ಕರ್ಣಾಟಕದ ಸರಸ್ವತಿಯನ್ನು ವಿಲಾಯತಿಯ ಕಾನೂನುಗಳೆಂದಲೂ ‘ಬ್ರೂಚ್’ ‘ಬೆಲ್ಟ್’ ‘ಬ್ರೇಸ್‌ಲೆಟ್’ಗಳೆಂದ ಸಿಂಗರಿಸಿ, ಅವಳ ವೀಣೆಯಿಂದ ಗ್ರಾಮೊಫೋನಿನ ಆಲಾಪನೆಗಳನ್ನು ಹೊರಡಿಸಿ, ಮೋಟರ್ ಮಯೂರದ ಮೇಲೆ ಅವಳ ಉತ್ಸವವನ್ನು ಮಾಡಿಸಿ, ‘ಹಿಪ್, ಹಿಪ್, ಹುರ್ರೇ’ ಎಂದು ಕೂಗಿಟ್ಟಲ್ಲಿ, ಭಾಷಾಸೇವಾವ್ರತವನ್ನು ನಾವು ಮಾಡಿ ಪುಣ್ಯಸಂಪಾದನೆಯಿಂದ ಜ್ಞಾನಲೋಕದಲ್ಲಿ ನಮಗೊಂದು ‘ಸೀಟನ್ನು ರಿಜರ್ವ’ ಮಾಡಿಟ್ಟಂತಾಗದು! ಇನ್ನೂ ಈ ಬಗೆಯ ಲಜ್ಜಾನಿವಾರಣೆಯ ಸಲುವಾಗಿ, ಕನ್ನಡಿಗರು ತಂತಮ್ಮ ನಿವಾಸಪ್ರದೇಶಗಳಲ್ಲಿನ ಧರ್ಮ, ಕರ್ಮ, ಭಾಷೆ, ಸಾಹಿತ್ಯ, ವಾಣಿಜ್ಯ, ಲೋಕವ್ಯವಹಾರ, ಇತಿಹಾಸ, ಜನಶ್ರುತಿ ಮೊದಲಾದುವುಗಳ ವಿವರಣೆಯನ್ನು ಸಾಧ್ಯವಾಗಿರುವಷ್ಟಕ್ಕೆ ಕೂಡಿಸಲು ಪೇಚಾಡಬೇಕಾಗಿದೆ. ಹೀಗೆ ಕೂಡಿಸಲಾಗುವ ಸಂಗ್ರಹವನ್ನು ಜತನದಲ್ಲಿಟ್ಟುಕೊಂಡು ಕ್ರೋಢೀಕರಣ ವಿಮರ್ಶೆ ಮೊದಲಾದುವನ್ನು ಮಾಡಲು ಅನುಕೂಲವಾಗುವ ಹಾಗೆ, ಕರ್ಣಾಟಕದ ಪ್ರತಿಯೊಂದು ವಿಭಾಗದಲ್ಲಿ ಕರ್ಣಾಟಕ ಸಾಹಿತ್ಯ ಪರಿಷದದ ಶಾಖೆಗಳ ಸ್ಥಾಪನೆಯಾಗಬೇಕಾಗಿದೆ. ಇವುಗಳ ಮುಖಾಂತರವೇ ಸ್ವಭಾಷೆಯ ಹಾಗೂ ಸ್ವಾತಂತ್ರ್ಯದ ವಾತ್ಸಲ್ಯವು ಬೆಳೆಯಲು ಅವಕಾಶವಿದೆ. ಈ ರೀತಿಯಾಗಿ ಕರ್ಣಾಟಕ ಪ್ರಾಂತದ ಮೇಲೆ ಕರ್ಣಾಟಕಸಾಹಿತ್ಯದ ಅಧಿಕಾರವು ಯಾವಾಗ ಸಂಪೂರ್ಣ ಪರಿಮಾಣದಲ್ಲಿ ಉಂಟಾಗುವುದೊ ಆಗಲೆ, ಅದು ಕನ್ನಡಿಗರನ್ನೂ ದೇಶವನ್ನೂ ಪ್ರಶಸ್ತಿಗೆ ತರುವುದೆಂದು ದೃಢವಚನವನ್ನಾಡಬಹುದಾಗಿದೆ.

ಎಸ್. ಎನ್. ಕಾಮತ್.

---

PRINTED AT THE KANARESE MISSION PRESS AND BOOK DEPOT, MANGALORE.

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾಸೆಲ್ ಮಿಶ್ಯನು.

(ಶ್ರೀಯುತ ಕ್ರಿಶ್ಚನ್ ಅರ್ನೆಸ್ಟ್, ಕನ್ನಡ ಪಂಡಿತರು, ಗಣಪತಿ ಹೈಸ್ಕೂಲು, ಮಂಗಳೂರು.)

ನಮ್ಮ ಈ ಕನ್ನಡ ಜಿಲ್ಲೆಯ ಪ್ರಕೃತ ಪರಿಸ್ಥಿತಿಯು ಕಾಲಚಕ್ರದ ನಿರಂತರವಾದ ಚಲನೆಯಿಂದುಂಟಾದ ಅವಾಂತರಗಳಿಗೊಳಬಿದ್ದು, ಉನ್ನತಿ ಅವನತಿಯನ್ನು ಪಡೆದಿರಬೇಕಾಗಿ ಬಂದುದು ಸಹಜವಾಗಿದ್ದರೂ, ಕೃಷೀವಲರಾಷ್ಟ್ರವೆಂದೆನಿಸಿಕೊಂಡು ಇತಿಹಾಸಪ್ರಸಿದ್ಧವಾಗಿರುವುದಷ್ಟೆ. ಇಂತಿರುವ ಈ ಜಿಲ್ಲೆಗೂ ಶಿಕ್ಷಣ, ಔದ್ಯೋಗಿಕ, ಸಾಂಪತ್ತಿಕ ಸ್ಥಿತಿವಿಚಾರದಲ್ಲಿ ಬಾಸೆಲ್ ಮಿಶ್ಯನಿಗೂ ಇರುವ ಪರಸ್ಪರ ಸಂಬಂಧವನ್ನು ಪರಿಶೀಲಿಸಿ ವಿಮರ್ಶಿಸುವುದು ಸುಲಭಸಾಧ್ಯವಲ್ಲದ ಅತಿ ಮಹತ್ತಾದುದೊಂದು ವಿಷಯವಿರುವುದಾಗಿದ್ದರೂ, ಆನಂದಜನಕವಾಗಿದೆ.

ದೈವಯೋಗದಿಂದ ಸ್ವಾಭಾವಿಕವಾಗಿ ಸಂಪತ್ತುಳ್ಳ ಯಾವ ದೇಶವಾದರೂ ಊರ್ಜಿತಸ್ಥಿತಿಗೆ ಬರಬೇಕಾದರೆ, ಆ ದೇಶದ ಜನರಲ್ಲಿ ಉದ್ಯೋಗಪ್ರೀತಿ, ಸ್ವಾವಲಂಬನ, ಕರ್ತವ್ಯದಕ್ಷತೆ, ಸಾಹಸ ಇವೇ ಮೊದಲಾದ ಹಲವು ಗೌರವವುಳ್ಳ ಗುಣವಿಶೇಷಗಳು ಆವಶ್ಯಕವಾಗಿ ಇರಲೇಬೇಕು. ವಿಶೇಷವಾಗಿ ಇಂತಹ ಗೌರವವುಳ್ಳ ಗುಣಗಳುಳ್ಳವರು ಪಾಶ್ಚಿಮಾತ್ಯರೇ ಸರಿ ಎಂದರೆ ತಪ್ಪಾಗದು. ಸ್ವಾಭಾವಿಕ ಅನುಕೂಲತೆಗಳಿದ್ದರೂ ಅನೇಕ ದೇಶಗಳ ಅಧೋಗತಿಗೆ ಅಲ್ಲಿಯ ಜನರ ಗುಣಗಳೇ ಕಾರಣಭೂತವಾಗುವವು.

ಪರಾವಲಂಬಿಯಾಗಿರುವುದು ಅಪಮಾನವೆಂದು ಪಾಶ್ಚಿಮಾತ್ಯರು ತಿಳಿಯುವರು. ತಾವು ಮಾಡುವ ಉದ್ಯೋಗಸಾಹಸವೇ ತಮ್ಮ ಸಂಪತ್ತು ಎಂದೂ ತಿಳಿಯುವರು. ಉದ್ಯೋಗಸಾಧನೆಯಲ್ಲಿ ತಮಗೆ ಎಂತಹ ವಿಪತ್ತುಪರಂಪರೆಗಳೊದಗಿದರೂ, ಅವು ತಮ್ಮ ಕಾರ್ಯನಿರ್ವಾಹಕ್ಕೆ ಸಾಧಕವಾದ ಸಾಣೆಕಲ್ಲುಗಳೆಂತಲೇ ಭಾವಿಸುವರು ಹೊರತು ಬಾಧಕವೆಂದು ಸರ್ವಥಾ ಎಣಿಸರು. ಸತತವಾದ ಉದ್ಯಮವು ಸಫಲವನ್ನೀಯಲೇ ಬೇಕೆಂಬುದು ಅವರ ನಿಶ್ಚಲವಾದ ನಂಬಿಕೆಯು. ಸ್ವಾಭಿಮಾನ, ಸ್ವಜನಾಭಿಮಾನ, ಸ್ವದೇಶಾಭಿಮಾನ ಮತ್ತು ಸ್ವಾತಂತ್ರ್ಯಾಭಿಮಾನ ಇವೇ ಅವರ ಕರ್ತವ್ಯಕ್ಷೇತ್ರಗಳ ಮುಖ್ಯ ಧ್ಯೇಯಗಳಾಗಿರುವುವು.

ಮೇಲೆ ಉಲ್ಲೇಖಿಸಿದಂತಹ ಗೌರವಾಸ್ಪದವಾದ ಪ್ರಾಮುಖ್ಯ ಗುಣವಿಶೇಷಗಳಲ್ಲಿ ವಿನಾ ಇತರ ಎಲ್ಲಾ ವಿಷಯಗಳಲ್ಲಿ ನಾವು ಪಾಶ್ಚಾತ್ಯರ ಅನುಯಾಯಿಗಳೆಂದು ಹಿಗ್ಗಿಕೊಂಡರೂ, ಔದ್ಯೋಗಿಕ, ಸಾಂಪತ್ತಿಕ ಮೊದಲಾದ ಸ್ಥಿತಿವಿಚಾರಗಳಲ್ಲಿ ನಾವು ಕೇವಲ ಪರಾವಲಂಬಿಗಳಾಗಿರುವೆವು. ಅಲ್ಲದಿದ್ದರೆ, ದೈವಾನುಗ್ರಹದಿಂದ ಪ್ರಾಕೃತಿಕ ಸಾಧನಸಂಪತ್ತುಗಳು ಯಥೇಷ್ಟವಾಗಿದ್ದ ನಾವು, ನಮಗಿರುವ ಸಕಲ ಸೌಕರ್ಯಗಳನ್ನು ಮರೆತು, ಮೈಗಳ್ಳರಂತೆ ಮೌನ ತಾಳಿಕೊಂಡು ಆತ್ಮವಂಚನೆ ಮಾಡಿಕೊಳ್ಳುತಿದ್ದಿಲ್ಲ. ಪರಕೀಯರನ್ನಾಶ್ರಯಿಸುವ ಆವಶ್ಯಕತೆಯೂ ನಮಗಿದ್ದಿಲ್ಲ. ನಾವು ಪರಾವಲಂಬಿಗಳಾಗಿರಲು, ನಮ್ಮಲ್ಲಿ ರೂಢಮೂಲವಾಗಿರುವ ಸ್ವಾರ್ಥಪರಾಯಣತೆಯೂ, ವಿದ್ಯಾವಿಹೀನತೆಯೂ, ಅವಿಶಾಲಹೃದಯವೂ, ಮೈಗಳ್ಳತನವೂ, ಮುಖ್ಯವಾಗಿ ಜಾತಿವೈಷಮ್ಯವೂ ಮೂಲಹೇತುವಾಗುವುದಾಯಿತು. ತತ್ಪ್ರಯುಕ್ತ ಸ್ವಾಭಾವಿಕವಾದ ಅನೇಕ ಸುಖಸಾಧನ ಸಾಂಪತ್ತಿಕ ಅನುಕೂಲತೆಗಳಿದ್ದ ನಮ್ಮ ಸೀಮೆಯವರ ಅಧೋಗತಿಗೆ ದೇಶೀಯರಾದ ನಾವೇ ಕಾರಣಭೂತರು ಎಂಬ ಯಥಾರ್ಥವಾದಕ್ಕೆ ಅಸ್ತುಪಟ್ಟು, ನಮ್ಮ ದುರವಸ್ಥೆಯನ್ನು ಚಿಂತಿಸಿ ವಿಷಾದದಿಂದಲೂ, ನಾಚಿಕೆಯಿಂದಲೂ ತಲೆಬಾಗಿಸಬೇಕಾಗಿರುವುದು.

ನಮ್ಮಲ್ಲಿರುವ ಜಾತಿಭೇದ, ವಿದ್ಯಾಶೂನ್ಯತೆಗಳನ್ನು, ನಮ್ಮ ನಾಡಿನ ದುರವಸ್ಥೆಯನ್ನು ಮನಗಂಡು, ಔದ್ಯೋಗಿಕ ಮತ್ತು ಸಾಂಪತ್ತಿಕ ಸ್ಥಿತಿವಿಚಾರಗಳಲ್ಲಿ, ನಮ್ಮ ಜಿಲ್ಲೆಯವರೊಡನೆ ಸಹಕರಿಸುವ ಧ್ಯೇಯವುಳ್ಳವರಾಗಿ, ಅತಿಶಯ ಪ್ರೇಮ ಸಹಾನುಭೂತಿಯಿಂದ ಊರ್ಜಿತಾವಸ್ಥೆಗೆ ತರಲು ಸಹಾಯ ಮಾಡಿದವರೆಂದರೆ ಪರದೇಶೀಯರಾದ ಬಾಸೆಲ್ ಮಿಶ್ಯನದ ಮಿಶ್ಯನೆರಿಗಳೇ ಹೊರತು ಅನ್ಯರಲ್ಲ, ಎಂದು ಎದೆಗುಂದದೆ ಹೇಳುವುದು ನಮ್ಮ ಋಣವಾಗಿರುವುದು. ಪ್ರಕೃತ ನಮ್ಮ ಜಿಲ್ಲೆಯಲ್ಲಿರುವ ಔದ್ಯೋಗಿಕ, ಶಿಕ್ಷಣಾದಿ ಸಾಧನಸಂಪತ್ತುಗಳೆಲ್ಲವೂ ಕ್ರೈಸ್ತಧರ್ಮಪ್ರಸಾರಣೆಯನ್ನು ಮಾಡಲು ನಮ್ಮಲ್ಲಿಗೆ ಬಂದಿರುವ ಸಾಧುವರ್ಯರಾದ ಬಾಸೆಲ್ ಮಿಶ್ಯನೆರಿಗಳಿಂದ ಉಚಿತವಾಗಿ ದೊರೆತಿರುವ ಅತ್ಯಮೂಲ್ಯವಾದ ಉಡುಗೊರೆ ಎಂದು ನಿರ್ವಂಚನೆಯಿಂದ ಹೇಳಬೇಕಾಗಿದೆ. ಇಂತಹ ಬಾಸೆಲ್ ಮಿಶ್ಯನೆರಿಗಳ

ಸಹಕಾರವು ನಮಗೆ ಹೇಗೆ ಸಂಘಟಿಸಿತು ಎಂಬೀ ಪೂರ್ವೇತಿಹಾಸವನ್ನು ಸಂಕ್ಷೇಪವಾಗಿ ಇಲ್ಲಿ ಸೂಚಿಸಲಿರುವೆವು.

ಬ್ರಿಟಿಷ್ ಪಾರ್ಲಿಮೆಂಟು ಸಭೆಯು ಹಿಂದೂದೇಶದಲ್ಲಿ ಇಂಗ್ಲಿಷರಲ್ಲದ ಇತರ ಮಿಶ್ಯನ್ ಸಂಘಗಳು ಕೂಡ ತಮ್ಮ ಪ್ರವೃತ್ತಿಯನ್ನು ತೊಡಗಬಹುದೆಂದು ಪ್ರಕಟಿಸಿದೊಡನೆಯೇ ಬಾಸೆಲ್ ಮಿಶ್ಯನ್ ಸಂಘದವರು ತಮ್ಮ ಆದ್ಯ ಮೂವರು ಮಿಶ್ಯನೆರಿಗಳನ್ನು ನಮ್ಮ ಹಿಂದೂದೇಶದ ಪಶ್ಚಿಮ ಕರಾವಳಿಗೆ ಕಳುಹಿಸಿಕೊಟ್ಟರು. ಇವರಲ್ಲಿ ಪ್ರಸಿದ್ಧರಾದ ಸಾಮುವೆಲ್ ಹೇಬಿಕನೆಂಬ ಮಿಶ್ಯನೆರಿಯು 1834ನೆಯ ಇಸವಿ ಒಕ್ಟೋಬರ 30ರಲ್ಲು ಮಂಗಳೂರಿನಲ್ಲಿ ಬಂದಿಳಿದರು. ಆಗ್ಗೆ ಇಲ್ಲಿ ಸಬ್ ಕಲ್ಲೆಕ್ಟರರಾಗಿದ್ದ ಮಿ. ಫಿಂಡ್ಲೆ ಅಂಡರ್ಸನ್ ಎಂಬ ಕ್ರೈಸ್ತ ಸರದಾರರು ಇವರನ್ನು ಬಹು ಸಂತೋಷದೊಡನೆ ಸ್ವಾಗತಮಾಡಿಕೊಂಡು, ಅವರ ಕೆಲಸಗಳಲ್ಲಿ ಉತ್ತಮ ಸಹಾಯಕರಾಗಿದ್ದರು. ಮಿಶ್ಯನಿಗೆ ನೆರವಾದ ಆಗಿನ ಮಹನೀಯರುಗಳಲ್ಲಿ ಇವರೇ ಅಗ್ರಗಣ್ಯರು. ಜರ್ಮನ್ ದೇಶದಿಂದ ಈ ಮಿಶ್ಯನೆರಿಗಳು ಇಲ್ಲಿಗೆ ಬಂದ ಕೂಡಲೆ, ದೇಶೀಯರೊಡನೆ ಪರಸ್ಪರ ಮೈತ್ರಿ ಹೊಂದಿಕೆಗಳಿಂದ ಕಲೆತುಕೊಂಡಿರಲು ಸಹಾಯಕವಾಗುವಂತೆ ಮೊತ್ತಮೊದಲು ದೇಶೀಯ ಭಾಷೆಗಳನ್ನು ಅಭ್ಯಸಿಸ ತೊಡಗಿದರು.



ಘನ ಸಾಮುವೇಲ್ ಹೇಬಿಕ್ ಬೋಧಕರು.

ಬಾಸೆಲ್ ಮಿಶ್ಯನೆರಿಗಳು ಕ್ರೈಸ್ತಧರ್ಮಪ್ರಸಾರಣಕಾರ್ಯವನ್ನು ಮಾಡುವುದಕ್ಕಾಗಿ ಬಂದವರಿದ್ದಾಗ್ಯೂ, ಮಾನುಷಜನ್ಮಸಾಫಲ್ಯದಾಯಕವಾಗಿ, ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಲಿಕ್ಕೆ ಅನುಕೂಲಿಸುವ ಸಾಧನವೂ ಸಾಹಿತ್ಯವೂ, ಮೇಲಾದ ಸುಶಿಕ್ಷಣವೇ ಆಗಿರುವುದು ಹೊರತು ಬೇರೆ ಇರದು, ಎಂಬುದನ್ನು ಚೆನ್ನಾಗಿ ಮನವರಿತಿದ್ದರು. ಅದುಕಾರಣ ಸ್ವಾರ್ಥ, ಪರಾರ್ಥ, ವ್ಯಕ್ತಿ, ಸಮಾಜ ಇವೇ ಆದಿಯಾದ ವಿಶಿಷ್ಟ ದೃಷ್ಟಿಗಳಿಂದ ಒಡಗೂಡಿ, ಸರ್ವಸಮ್ಮತವೂ ಸರ್ವಮಾನ್ಯವೂ ಆಗಿರುವ ಅತಿ ಮಹತ್ತಾದ ಮತ್ತು ಪವಿತ್ರವಾದ ಶಿಕ್ಷಣಕಾರ್ಯವನ್ನು ಎಲ್ಲಾದಕ್ಕೂ ಮೊದಲಾಗಿ ಕೈಕೊಂಡರು. ಇವರು ಇಲ್ಲಿಯ ದೇಶಭಾಷೆಗಳನ್ನು ಪ್ರಾರಂಭದಲ್ಲಿಯೇ ಕಲಿತುಕೊಂಡುದಲ್ಲದೆ, ಆ ಭಾಷೆಗಳಲ್ಲಿ ಚಿಕ್ಕ ಪುಟ್ಟ ಪುಸ್ತಕ, ವಹಿ ಇತ್ಯಾದಿಗಳನ್ನು ಬರೆದು ಶಿಕ್ಷಣಪ್ರಸಾರಕಾರ್ಯದಲ್ಲಿ ಮುಂದಾಳುಗಳಾದರು. ಪೂರ್ವದಲ್ಲಿ ಇಲ್ಲಿ ಐಗಳ ಸಾಲೆಗಳಿದ್ದುವು. ಆ ಸಾಲೆಗಳಲ್ಲಿ ಓದುಬರಹ ಮತ್ತು ಮಗ್ಗಿ ಇವುಗಳ ಪರಿಚಯ ಮಾತ್ರವಾಗುತಿದ್ದಿತು. ಸರಕಾರವು ಇವುಗಳೊಡನೆ ಚರಿತ್ರೆ ಮತ್ತು ಭೂಗೋಳಗಳನ್ನು ಸೇರಿಸಿತು. ಈ ಮಿಶ್ಯನೆರಿಗಳು ಪ್ರಥಮತಃ ಪ್ರಾಥಮಿಕ ಸಾಲೆಗಳನ್ನು ಹಳ್ಳಿಪಳ್ಳಿಗಳಲ್ಲಿ ಸಹ ಸ್ಥಾಪಿಸಿ, ವಿದ್ಯಾದಾನವನ್ನು ಮಾಡಲುಪಕ್ರಮಿಸಿದರು. ದೇಶಭಾಷೆಯಲ್ಲಿ ಮೂಲಪಾಠದ ಪುಸ್ತಕವನ್ನು ಮೊದಲನೆಯದಾಗಿ ಬರೆದವರು ಬಾಸೆಲ್ ಮಿಶ್ಯನೆರಿಗಳೇ. ಈ ಜಿಲ್ಲೆಯಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದವರಂತೂ ಇವರೇ. ಈಗಲೂ ಮಂಗಳೂರಲ್ಲಿರುವ ಮಿಶ್ಯನ್ ಹೈಸ್ಕೂಲಿಗೆ ಇಂಗ್ಲಿಷ ಸ್ಕೂಲು ಎಂಬೀ ಪೂಜ್ಯಾರ್ಥಕ ನಾಮವು ಜನಜನಿತವಾಗಿರುವುದು. ದೇಶಭಾಷೆಯಲ್ಲಿ ಅನೇಕಾನೇಕ ಸಣ್ಣ ದೊಡ್ಡ ಪುಸ್ತಕ, ವಹಿ, ಕೋಶ, ವನಸ್ಪತಿಶಾಸ್ತ್ರ, ಪ್ರಾಣಿಶಾಸ್ತ್ರ, ಜೀಗ್ಲರರ ನಿಘಂಟು, ಡಾಕ್ಟರ್ ಕಿಟ್ಟಲ್‌ರ ಶಬ್ದಭಂಡಾರವೆಂಬಂತಿರುವ ಪ್ರಸಿದ್ಧ ನಿಘಂಟು ಇತ್ಯಾದಿ ಅತ್ಯುಪಯುಕ್ತವಾದ ಹಲವು ಗ್ರಂಥಗಳನ್ನು ಬರೆದು ವಾಙ್ಮಯಾತ್ಮಕ ಸಾಹಿತ್ಯಾಭಿವೃದ್ಧಿಯನ್ನು ಮಾಡಿದ ಮೂಲಪುರುಷ ಮಹಾಶಯರೂ ಇವರೇ.

ಬಾಸೆಲ್ ಮಿಶ್ಯನೆರಿಗಳು ಇಲ್ಲಿಗೆ ಬಂದು ನೆಲಸಿದ ಆ ಕಾಲದಲ್ಲಿ ಹಿಂದೂಜನರೊಳಗಿನ ಮೇಲಣ ವರ್ಗಗಳವರಲ್ಲಿ ಮಾತ್ರ ಬಹು ಪವಿತ್ರವಾದ ಈ ಶಿಕ್ಷಣಪ್ರಚಾರವು ಇದ್ದಿತೇ

ವಿನಾ, ಕೆಳಗಣ ತರಗತಿಗಳವರಲ್ಲಿ ಇರಲಿಲ್ಲ. ಒಂದು
ವೇಳೆ ಇದ್ದರೂ ಕೂಡ, ಅದೊಂದು ಅಪವಾದವೆಂಬಂತೆ ಅಪ
ರೂಪವಾಗಿದ್ದಿತು. ಜಾತಿನಿರ್ಬಂಧಗಳಿಂದ ಸಂಪೂರ್ಣ ಆವ
ರಿಸಿದ್ದ ನಮ್ಮ ಈ ಜಿಲ್ಲೆಯಲ್ಲಿ ಮಿಶ್ಯನ್ ಸಾಲೆಗಳು
ಪ್ರಾರಂಭವಾದ ಬಳಿಕ ಮಾತ್ರವೇ, ಪಂಚಮರನ್ನು ಬಿಟ್ಟು,
ಇತರ ಹಿಂದೂಗಳಲ್ಲಿ ಮೇಲುಕೀಳೆಂಬ ಭೇದಾಭೇದವೂ,
ಭಿನ್ನತ್ವವೂ ಇಲ್ಲದೆ, ಸರಿಸಮಾನ ರೀತಿಯಲ್ಲಿ ಶಿಕ್ಷಣ
ಪ್ರಸಾರಕ್ಕೆ ಅವಕಾಶ ದೊರೆಯಿತು. ಆದಿ ದ್ರಾವಿಡರ
ವಿಷಯದಲ್ಲಾದರೂ ಮಿಶ್ಯನೆರಿಗಳು ಉದಾಸೀನರಾಗಿರದೆ
ಅನುಕೂಲರಾಗಿಯೇ ಇದ್ದರು. ಆದರೆ ನಮ್ಮ ಮಿಕ್ಕ ಹಿಂದೂ
ಬಾಂಧವರು ಈ ಅಸ್ಪೃಶ್ಯರೊಡನೆ ಕಲೆತಿರಲು ಒಪ್ಪದಿದ್ದುದ
ರಿಂದ ಮಿಶ್ಯನೆರಿಗಳು ನಿರ್ವಾಹವಿಲ್ಲದೆ ಈ ವಿಷಯದಲ್ಲಿ
ತಟಸ್ಥರಾಗಿರಬೇಕಾಯಿತು. ಉಳಿದ ಎಲ್ಲಾ ಜಾತಿಮತಸ್ಥ
ರಲ್ಲಿ ಮಿಶ್ಯನ್ ಸಾಲೆಗಳ ಮೂಲಕ ವಿದ್ಯಾಭ್ಯಾಸವು
ಸರ್ವತೋಮುಖವಾಗಿ ವಿಸ್ತೃತವಾಯಿತು. ಈ ರೀತಿ
ವಿದ್ಯಾದಾನವೆಂಬ ಮಹತ್ತಾದ ಧರ್ಮಕಾರ್ಯವನ್ನು ಅಲ್ಪ
ಮೌಲ್ಯದಿಂದ, ಉಚಿತವಾಗಿಯೇ ಕೊಡುತ್ತ ಬಂದುದು
ಬಾಸೆಲ್ ಮಿಶ್ಯನೇ. ಔದಾರ್ಯಹೃದಯಿಗಳಾದ ಬಾಸೆಲ್
ಮಿಶ್ಯನೆರಿಗಳ ನಿಷ್ಕಳಂಕವಾದ ಅನುಕಂಪೆಯಿಂದಲೆ, ನಮ್ಮ
ಜಿಲ್ಲೆಯಲ್ಲಿ ಸಾರ್ವತ್ರಿಕ ಸಾಕ್ಷರತೆಗೆ ಜ್ಞಾನಪ್ರಕಾಶಕ್ಕೆ ದಾರಿ
ಸುಗಮವಾಯಿತು.

ಬಾಸೆಲ್ ಮಿಶ್ಯನೆರಿಗಳು ಸ್ಥಾಪಿಸಿದ ಕ್ರೈಸ್ತ ಸಭೆಗಳಲ್ಲಿ
ಬಾಲಕಬಾಲಿಕೆಯರಿಗೆ ಪ್ರಾಥಮಿಕ ಶಿಕ್ಷಣವು ಕಡ್ಡಾಯ
ವಾಗಿರುವುದು. ಅಂತು ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯ
ವಾಗಿ ಕೊಟ್ಟ ಪುಣ್ಯಪುರುಷರೂ ಇವರೇ ಇರುವರು. ಕ್ರೈಸ್ತ
ಮತಪ್ರಸಾರಕರಾಗಿ ನಮ್ಮಲ್ಲಿಗೆ ಬಂದ ಈ ಬಾಸೆಲ್ ಮಿಶ್ಯ
ನೆರಿಗಳಿಂದ ಮೊದಲನೆಯದಾಗಿ ನಮ್ಮ ದಕ್ಷಿಣ ಕನ್ನಡ
ಜಿಲ್ಲೆಗೆ ದೊರೆತ ಅಪಾರ ಲಾಭವೆಂದರೆ ಶಿಕ್ಷಣದಾನವು.
ಬಾಲಿಕಾಪಾಠಶಾಲೆಗಳನ್ನೂ, ಉಪಾಧ್ಯಾಯಿನಿಯರ ಉ
ದ್ಯೋಗಕ್ಕೆ ತರಬೇತು ಮಾಡುವ ಸಾಲೆಯನ್ನೂ ಸ್ಥಾಪಿಸಿ,
ತನ್ಮೂಲಕ ಸ್ತ್ರೀವಿದ್ಯಾಭ್ಯಾಸಕ್ಕೆ ಕೂಡ ಪ್ರೋತ್ಸಾಹವನ್ನು
ಕೊಟ್ಟಂತಹ ಪೂಜ್ಯ ಮಹನೀಯರೂ ಇವರೇ ಇರುವರು.
ಈ ಮಾತನ್ನು ಸಮಂಜಸ ಬುದ್ಧಿಯುಳ್ಳ ನಿಷ್ಪಕ್ಷಪಾತಿಗಳಾದ
ವಿವೇಕಿಗಳು ಯಾರೂ ಅಲ್ಲಗಳೆಯರು. ಹೀಗೆ 'ಬಾಸೆಲ್
ಮಿಶ್ಯನ್' ಎಂಬೀ ಹೆಸರು ಚಿರಸ್ಮರಣೀಯವಾಗಿರಲು ಅರ್ಹ
ವಾಗಿರುವುದು.

ಮಹಾಯುದ್ಧಕ್ಕೆ ಪೂರ್ವದಲ್ಲಿ ಬಾಸೆಲ್ ಮಿಶ್ಯನು
ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 75 ಸಾಲೆಗಳನ್ನು ನಡಿಸುತಿ
ದ್ದಿತು. ಇವುಗಳಲ್ಲಿ ಉತ್ತಮತರದ ಹೈಸ್ಕೂಲುಗಳು 2.
ಲವರ್ ಸೆಕೆಂಡರಿ ಸಾಲೆಗಳು 3. ಉಳಿದುವು ಪ್ರಾಥಮಿಕ
ಸಾಲೆಗಳು. ಈ ಸಾಲೆಗಳಲ್ಲಿ 6301 ವಿದ್ಯಾರ್ಥಿಗಳಿದ್ದರು.
ಈ ವಿದ್ಯಾರ್ಥಿಗಳಲ್ಲಿ ಕ್ರೈಸ್ತ ಬಾಲಕರು 861. ಕ್ರೈಸ್ತ
ಬಾಲಕಿಯರು 666. ಅಕ್ರೈಸ್ತ ಬಾಲಕರು 3915. ಕ್ರೈಸ್ತೇ
ತರ ಬಾಲಿಕೆಯರು 865. ಸಾರಾಂಶ—ಆ ಕಾಲದಲ್ಲಿ ಆರು
ಸಾವಿರಕ್ಕಿಂತಲೂ ಮಿಕ್ಕಿದ್ದ ವಿದ್ಯಾರ್ಥಿ ವಿದ್ಯಾರ್ಥಿನಿಗಳು
ಬಾಸೆಲ್ ಮಿಶ್ಯನು ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ
ಮಾಡುತಿದ್ದರೆಂಬುದು ಮೇಲೆ ನಮೂದಿಸಿರುವ ಸಂಖ್ಯೆ
ಯಿಂದ ಸ್ವಯಂವ್ಯಕ್ತವು. ಅದಲ್ಲದೆ, ಕ್ರೈಸ್ತರಿಗಿಂತಲೂ
ಕ್ರೈಸ್ತೇತರರಿಗೆ ಹೆಚ್ಚಿನ ವಿದ್ಯಾನುಕೂಲವನ್ನು ಒದಗಿಸಿ
ಕೊಡುವುದರಲ್ಲಿ ಬಾಸೆಲ್ ಮಿಶ್ಯನು ಸರ್ವದಾ ನೆರವಾಗು
ತಿದ್ದಿತು ಎಂಬುದು ಸ್ಪಷ್ಟವಾಗಿ ಖಚಿತವಾಗುವುದು.

ಬಾಸೆಲ್ ಮಿಶ್ಯನು ಲೌಕಿಕಜ್ಞಾನ ಸಂಪಾದನೆಯನ್ನು
ಮಾಡುವ ಸಾಲೆಗಳನ್ನು ಹೊರತು ಪಾರಮಾರ್ಥಿಕಜ್ಞಾನ
ಲಾಭವನ್ನು ಆರ್ಜಿಸುವಂತಹ ದೈವಜ್ಞಾನ ವಿದ್ಯಾಮಂದಿರ
ವನ್ನು ಸಹ ಬಲ್ಮಠದಲ್ಲಿ ಸ್ಥಾಪಿಸಿತು. ಈ ವಿದ್ಯಾಮಂದಿರ
ದಲ್ಲಿ ಕ್ರಿಸ್ತಧರ್ಮೋಪದೇಶವನ್ನುಪದೇಶಿಸುವ ಉಪದೇಶಕ
ರನ್ನು ತರಬೇತುಮಾಡುತಿದ್ದರು. ವಿದ್ಯಾರ್ಥಿಗಳಿಗೆ ಗುರು
ಮಠವೂ ನಿವಾಸಗೃಹವೂ ಈ ವಿದ್ಯಾಮಂದಿರವೇ ಆಗಿದ್ದಿತು.
ವಿದ್ಯಾರ್ಥಿಗಳು ರಜಾಕಾಲದಲ್ಲಿ ವಿನಾ, ಇತರ ಯಾವ
ಸಮಯಗಳಲ್ಲಾದರೂ ನಾಲ್ಕು ವರುಷಗಳ ಪರ್ಯಂತ
ವಿದ್ಯಾನಿಲಯವನ್ನು ಬಿಟ್ಟು ಉಳಿಯಕೂಡದೆಂಬ ನಿಯಮ
ವಿದ್ದಿತು. ವಿದ್ಯಾಭ್ಯಾಸದ ಅವಧಿಯಲ್ಲಿ ಅವರಿಗೆ ಉಪ್ಪನ್ನ,
ಪಾನ, ವಸ್ತ್ರ, ಪುಸ್ತಕಾದಿ ಸರ್ವಸಾಹಿತ್ಯಗಳನ್ನು ಬಾಸೆಲ್
ಮಿಶ್ಯನು ಒದಗಿಸಿಕೊಟ್ಟು ಪೋಷಿಸುವುದಾಗಿದ್ದಿತು. ವಿದ್ಯಾ
ಭ್ಯಾಸದ ಅವಧಿಯು ತೀರಿ ಪರೀಕ್ಷೆಯಾದ ಬಳಿಕ ಉಪ
ದೇಶಕರನ್ನಾಗಿ ನಿಯಮಿಸಿ, ಮಿಶ್ಯನ್ ಠಾಣ್ಯಗಳಿಗೆ ಕಳುಹಿ
ಕೊಡುತಿದ್ದರು. ಮುಂದೆ ಅವರು ಈ ಧರ್ಮೋಪದೇಶಕ
ವೃತ್ತಿಯಿಂದ ಜೀವನವನ್ನು ಮಾಡುವರು.

ಬಾಸೆಲ್ ಮಿಶ್ಯನು ಸ್ಥಾಪಿಸಿದ ಹೈಸ್ಕೂಲುಗಳಲ್ಲಿ
ಮಂಗಳೂರು ಮಿಶ್ಯನ್ ಹೈಸ್ಕೂಲು ಬಹು ಪುರಾತನ
ವಾದುದು; ಮತ್ತು ಮೊದಲನೆಯದಿರುವುದು. ಉಡುಪಿ
ಯಲ್ಲಿರುವ ಕ್ರಿಶ್ಚನ್ ಹೈಸ್ಕೂಲು ಎರಡನೆಯದು. ಇಲ್ಲಿ
ಕ್ರೈಸ್ತ ಅಧ್ಯಾಪಕ, ಉಪದೇಶಕ ವರ್ಗದವರೆಲ್ಲರೂ ತಮ್ಮ
ಲೌಕಿಕ ಪಾರಮಾರ್ಥಿಕ ವಿದ್ಯಾಭ್ಯಾಸವನ್ನು ಮಾಡುವರು.
ಮಿಶ್ಯನು ಉದ್ಯೋಗಿಗಳೆಲ್ಲರೂ ಹೆಚ್ಚಾಗಿ ಉಡುಪಿಯಲ್ಲಿ
ವಿದ್ಯಾಭ್ಯಾಸಮಾಡಿದವರಿರುವರು. ಇಲ್ಲಿ ಕ್ರೈಸ್ತ ಅನಾಥ
ಬಾಲರ ವಿದ್ಯಾಭ್ಯಾಸದ ಬಗ್ಗೆ ಅನಾಥಶಾಲೆ ಇರುವುದು.
ಈ ಶಾಲೆಯಲ್ಲಿರುವ ವಿದ್ಯಾರ್ಥಿಗಳಿಗೆ ಅನ್ನಪಾನ, ಬಟ್ಟೆ

ಪುಸ್ತಕಾದಿಗಳ ಸೌಕರ್ಯಗಳೊಂದಿಗೆ ಕಡ್ಡಾಯವಾಗಿ ಪ್ರಾಥಮಿಕ ಶಿಕ್ಷಣವನ್ನು ಕೊಡುವರು. ಮುಂದೆ ದೃಢೀಕರಣವೆಂಬ ಸಂಸ್ಕಾರವನ್ನು ಹೊಂದಿ ಪ್ರಾಯಸಮರ್ಥರಾದ ಬಳಿಕ ಅವರನ್ನು ಮಿಶ್ಯನ್ ಕಾರ್ಖಾನೆಗಳಲ್ಲಿ ವಿವಿಧ ಕೈಗಾರಿಕೆ ಕೆಲಸಗಳಿಗೆ, ಅವರ ಯೋಗ್ಯತಾನುಸಾರವಾಗಿ ನಿಯಮಿಸುವರು. ಹೀಗೆ ಅವರು ತಮ್ಮ ಜೀವನ ಯಾತ್ರೆಯನ್ನು ಸುಖದಿಂದ ಮುಂದೆ ಸಾಗಿಸುವರು.

ಯೋಗ್ಯ ಗೃಹಿಣಿಯರಾಗಿರುವಂತೆ ಅನುಕೂಲಿಸಿ ಕೊಡುವರು.

ಹೀಗೆ ಬಾಸೆಲ್ ಮಿಶ್ಯನು ಅನೇಕ ಸಾಲೆಗಳನ್ನು ಸ್ಥಾಪಿಸಿ ಶಿಕ್ಷಣಕಾರ್ಯವನ್ನು ಕೈಕೊಂಡುದರಿಂದ, ಕ್ರೈಸ್ತ ಮತ್ತು ಕ್ರೈಸ್ತೇತರರಾದ ನೂರಾರು ಮಂದಿಯು ಉಪಾಧ್ಯಾಯ ಮತ್ತು ಉಪಾಧ್ಯಾಯಿನೀ ವೃತ್ತಿಯಿಂದ ಉಪಜೀವಿಸುವಂತಾಯಿತು.



ಬಾಸೆಲ್ ಮಿಶ್ಯನ್ ಹೈಸ್ಕೂಲು, ಮಂಗಳೂರು.

ಉಡುಪಿಯಲ್ಲಿ ಬಾಲಕರಿಗೆ ಅನಾಥಶಾಲೆ ಇರುವಂತೆಯೇ ಮುಲ್ಕಿಯಲ್ಲಿ ಬಾಲಿಕೆಯರಿಗೆ ಕೂಡ ಒಂದು ಅನಾಥ ಪಾಠಶಾಲೆಯು ಇರುವುದು. ಇಲ್ಲಿ, ಪ್ರಾಥಮಿಕ ಶಿಕ್ಷಣವು ಕಡ್ಡಾಯವಾಗಿ ಕೊಡೋಣಾಗುವುದಲ್ಲದೆ, ಗೃಹಕೃತ್ಯ, ಕಸೂತಿ ಮೊದಲಾದ ಗೃಹೋಪಭೋಗದ ಕೆಲಸಗಳಲ್ಲಿ ಅವರನ್ನು ತರಬೇತುಮಾಡಿ. ಮುಂದೆ ಅವರು

ಫ್ರೊಬೆಲ್ ಪಂಡಿತನು ಕಲ್ಪಿಸಿದ ಕಿಂಡರ್‌ಗಾರ್ಟನ್ ಶಿಕ್ಷಣವನ್ನು ಕೊಡುವ ಉದ್ದೇಶದಿಂದ, ಐದು ವರುಷ ಪ್ರಾಯದೊಳಗಿನ ಚಿಕ್ಕಮಕ್ಕಳಿಗೆಂದು ಕಿಂಡರ್‌ಗಾರ್ಟನ್ ಸಾಲೆಯನ್ನು ಸ್ಥಾಪಿಸಿ, ಯೋಗ್ಯ ಉಪಾಧ್ಯಾಯಿನಿಯರಿಂದ ಶಿಕ್ಷಣವನ್ನು ಕೊಡಿಸುವುದರಲ್ಲಿ ಸಹ, ಬಾಸೆಲ್ ಮಿಶ್ಯನು ಪ್ರಥಮಸ್ಥಾನವನ್ನಲಂಕರಿಸಿರುವುದು.

# ಬಾಸೆಲ್ ಮಿಶ್ಯನ್ ಕೈಗಾರಿಕೆಗಳ ಇತಿಹಾಸವು

ಬಾಸೆಲ್ ಮಿಶ್ಯನೆರಿಗಳು ಕ್ರಿಸ್ತಮತ ಪ್ರಸಾರಣ ಕಾರ್ಯವನ್ನು ಮಾಡುವ ಧ್ಯೇಯವುಳ್ಳವರಾಗಿ ನಮ್ಮ ಜಿಲ್ಲೆಯಲ್ಲಿ ಬಂದು ನೆಲಸಿದರು ಎಂದು ಹಿಂದೆ ಹೇಳಿದೆಯಷ್ಟೆ. ಇವರು, ತಾವು ಕೈಕೊಂಡ ಕಾರ್ಯವನ್ನು ವಿಶೇಷ ಶ್ರದ್ಧೆಯಿಂದ ತನುಮನಧನಗಳನ್ನರ್ಪಿಸಿ ಮಾಡುತಿರುವಲ್ಲಿ, ಅವರ ಸತ್ಕ್ರಿಯೆಗೆ ತಕ್ಕುದಾದ ಸತ್ಫಲವೆಂಬಂತೆ, ನಮ್ಮ ಕನ್ನಡ ಜಿಲ್ಲೆಯ ಹಿಂದೂ ಬಾಂಧವರಲ್ಲಿ ಹಲವರು ಕ್ರೈಸ್ತ ಮತಾವಲಂಬಿಗಳಾದರು. ಇವರಿಗೆ ದೇವಭಜನೆ ಮಾಡುವುದಕ್ಕೆಂದು, ಕೇವಲ ಬೆರಳೆಣಿಕೆಯಷ್ಟು ಕ್ರೈಸ್ತರಿರುವ ಆ ಕಾಲದಲ್ಲೆ ಭಕ್ತಿಯುಕ್ತರಾಗಿ ವಿಶ್ವಾಸಪೂರಿತರಾದ ಆಗಿನ ಮಿಶ್ಯನೆರಿಗಳು ಮಂಗಳೂರಿನ ಬಲ್ಮಠದಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಲ್ಲಿಯೂ ಇರದ ಭವ್ಯವಾದ ಮತ್ತು ಬಲು ದೊಡ್ಡದಾದ 'ಶಾಂತಿ' ಎಂಬ ಹೆಸರಿನ ದೇವಾಲಯವನ್ನು ಕಟ್ಟಿಸಿದರು. ಸಾಲದುದಕ್ಕೆ, ಈ ದೇವಾಲಯದ ಆಸ್ತಿಯಾಗಿ ಭೂಮಿ ಜಮಿನಾನುಗಳನ್ನು ಉಂಬಳಿಯಾಗಿ ಬಿಟ್ಟುಕೊಟ್ಟಿರುವರು.



ಶಾಂತಿದೇವಾಲಯ, ಮಂಗಳೂರು.

ಕ್ರೈಸ್ತ ಮತಾಂತರ ಹೊಂದಿದವರಲ್ಲಿ ಬಹು ಜನರು ತಮಗಿರುವ ಅಲ್ಪಸ್ವಲ್ಪ ಆಸ್ತಿಪಾಸ್ತಿಗಳನ್ನು ತೊರೆದು ಸರ್ವಾನುಕೂಲತೆಗಳನ್ನು ಕಳಕೊಂಡು ಬರಬೇಕಾದುದರಿಂದ, ಉದರಭರಣಕ್ಕಾಗಿ ಮಿಶ್ಯನೆರಿಗಳ ವಿನಾ, ಬೇರೆ ಆಶ್ರಯಸ್ಥಾನವನ್ನು ಕಾಣದಾದರು. ಇದನ್ನರಿತ ಆ ಕಾಲದ ಸಾಧುವರ್ಯರಾದ ಮಿಶ್ಯನೆರಿಗಳು — ಪಥ್ಯವಾದ ತಮ್ಮ ಬೋಧನೋಪದೇಶಗಳಿಗೆ ವಶವರ್ತಿಗಳಾಗಿ ಮತಾಂತರ ಹೊಂದಿದ ಬಳಿಕ, ಅಂತಹ ಕ್ರೈಸ್ತರಿಗೆ ಯೋಗ್ಯವಾದ ಉದರನಿರ್ವಾಹಕಾರ್ಯವನ್ನು ಕಲ್ಪಿಸಿಕೊಡುವ ಭಾರವು

ಸಹ ತಮ್ಮ ಕರ್ತವ್ಯಗಳಲ್ಲೊಂದಾಗಿರುವುದು ಎಂಬೀ ಧರ್ಮ ತತ್ವವನ್ನು ಸಮಾಲೋಚಿಸಿ, ತತ್ಸಾಧನೀಭೂತವಾದ ಹಂಚಿಕೆಯನ್ನು ಶೋಧಿಸಲೆತ್ನಿಸುವುದು ಅತ್ಯಗತ್ಯವಾಯಿತು. ಬಳಿಕ ಔದ್ಯೋಗಿಕ ದೃಷ್ಟಿಯಿಂದ ಕ್ರಿಸ್ತಮತಾನುಯಾಯಿಗಳ ಧನೋತ್ಪಾದನಾಶಕ್ತಿಯನ್ನು ಅಭಿವೃದ್ಧಿಗೊಳಿಸುವ ಸಾಧನವಾಗಿ ಬಾಸೆಲ್ ಮಿಶ್ಯನ್‌ಸಂಘವು "ಬಾಸೆಲ್ ಮಿಶ್ಯನ್ ಕೈಗಾರಿಕೆಗಳು" ಎಂಬೀ ಸಂಸ್ಥೆಯನ್ನು ಸ್ಥಾಪಿಸುವುದಾಯಿತು.

1840ನೆಯ ಇಸವಿಯಲ್ಲಿ ಮಂಗಳೂರಲ್ಲಿ ಮಿಶ್ಯನೆರಿಯಾಗಿದ್ದ ರೆ. ವೈಗ್ಲೆ ಎಂಬವರು ಪ್ರಥಮತಃ ಛಾಪಖಾನೆಯೊಂದನ್ನು ಸಂಸ್ಥಾಪಿಸುವ ಉದ್ದೇಶದಿಂದ ಛಾಪಾಕಲೆಯನ್ನು ಕಲಿಯುವುದಕ್ಕೆ ಮುಂಬಯಿಗೆ ತೆರಳಿದರು. ಅಲ್ಲಿ ನೈಪುಣ್ಯವನ್ನು ಹೊಂದಿ ಹಿಂತಿರುಗುವಷ್ಟರಲ್ಲಿ, ಕಲ್ಲುಛಾಪಾ ಯಂತ್ರವೊಂದನ್ನು ಇಂಗ್ಲಿಷ್ ಜನರಾದ ಅವರ ಮಿತ್ರರು ಮಿಶ್ಯನಿಗೆ ಧರ್ಮಾರ್ಥವಾಗಿ ದಯೆಪಾಲಿಸಿದರು. ಈ ಯಂತ್ರಸಮೇತರಾಗಿ ವೈಗ್ಲೆ ಬೋಧಕರು 1841ನೆಯ ಇಸವಿ ಫೆಬ್ರವರಿ ತಿಂಗಳಲ್ಲಿ ಹಿಂತಿರುಗಿ ಬಂದು, 'ಬಾಸೆಲ್ ಮಿಶ್ಯನ್ ಪ್ರೆಸ್' ಎಂಬೀ ಛಾಪಖಾನೆಯನ್ನು ಮಂಗಳೂರಿನ ಬಲ್ಮಠದಲ್ಲಿ ಸಂಸ್ಥಾಪಿಸಿದರು. ಮರುವರುಷ ಅವರಿಗೆ ತಿರಿಗೊಂದು ಕಲ್ಲುಛಾಪಾಯಂತ್ರವು ಆ ಇಂಗ್ಲಿಷು ಮಿತ್ರರುಗಳಿಂದಲೇ ಉಚಿತವಾಗಿ ದೊರೆಯಿತು. ದಿನ ಗತಿಸಿದಂತೆ ಈ ಯಂತ್ರಗಳಲ್ಲಿ ಛಾಪಾ ಕೆಲಸವು ಸಮೃದ್ಧಿಯನ್ನು ಪಡೆದು 1843ನೆಯ ಇಸವಿಯಲ್ಲಿ ಕನ್ನಡ, ತುಳು ಮತ್ತು ಮಲಯಾಳ ಈ ಮೂರು ಭಾಷೆಗಳಲ್ಲಿ 'ಹಳೆ ಮತ್ತು ಹೊಸ ಒಡಂಬಡಿಕೆ' ಎಂಬ ವೇದಗ್ರಂಥಗಳನ್ನು ಮುದ್ರಿಸುವಷ್ಟು ಪ್ರಾಬಲ್ಯವುಳ್ಳದಾಯಿತು.

1851ನೆಯ ಇಸವಿಯಲ್ಲಿ ಮೆ. ಪ್ಲೆಬ್ಸ್ಟ ಎಂಬವರು ಯೂರೋಪಿನಿಂದ ಇಲ್ಲಿಗೆ ಬರುವಾಗ ಅಚ್ಚು ಹಾಕುವ ಸೊಗಸಾದ ಛಾಪಾಯಂತ್ರ ಒಂದನ್ನು ಪ್ರಥಮತಃ ತಂದರು. ಅದು ಮೊದಲ್ಗೊಂಡು ಬಾಸೆಲ್ ಮಿಶ್ಯನ್ ಛಾಪಖಾನೆಯು ಸರ್ವಾಂಗದಲ್ಲಿಯೂ ಸಮೃದ್ಧಿಗೊಂಡು, ಶಾಲಾ ಪುಸ್ತಕಗಳು, ಮತಸಂಬಂಧವಾದ ಪುಸ್ತಕಗಳು, ಮೊದಲಾಗಿ ದೇಶದ ವಿವಿಧ ಭಾಷೆಗಳಲ್ಲಿ ಸಾವಿರಾರು ಪುಸ್ತಕಗಳನ್ನು




ಬಾಸೆಲ್ ಮಿಶ್ಯನ್ ಛಾಪಖಾನೆ, ಮಂಗಳೂರು.



ಬಾಸೆಲ್ ಮಿಶ್ಶನ್ ಪುಸ್ತಕಖಾನೆ, ಮಂಗಳೂರು.

ಮನೋಹರವಾಗಿ ಮುದ್ರಿಸುತ್ತಿರುವುದು. ವಿವಿಧ ಬಣ್ಣಗಳಿಂದ ಶೋಭಿಸುವ ಅನೇಕಾನೇಕ ಚಿತ್ರವಿಚಿತ್ರವಾದ ಪಟಗಳನ್ನು ಶಾಸ್ತ್ರೀಯ ರೀತಿಯಲ್ಲಿ ಅತಿ ಚೆಲೋದಾಗಿಯೂ ಚೊಕ್ಕಟವಾಗಿಯೂ ಬಲು ಸಮರ್ಥರಾದ ಕೆಲಸಗಾರರ ಪರಿಮುಖವಾಗಿ ಉಗಿಯಂತ್ರದ ಶಕ್ತಿಯಿಂದ ಬಲು ಸೊಗಸಾಗಿ ಸಕಾಲದಲ್ಲೆ ಒದಗಿಸಿಕೊಡುತ್ತಿರುವುದು. ಈ ಛಾಪಖಾನೆಯು ನಾನಾ ಶಾಲೆ ಕೊಲೇಜುಗಳಿಗೆ ಬೇಕಾಗುವ ಮತ್ತು ಮುಖ್ಯವಾಗಿ ಕನ್ನಡ, ಮಲಯಾಳ ಜಿಲ್ಲೆಗಳಲ್ಲಿ ಪ್ರಚಾರದಲ್ಲಿರುವ ಭಾಷೆಗಳಲ್ಲಿ ಮೆಕ್ಮಿಲನ್ ಎಂಡ್ ಕೊ ಇವರ ಪರವಾಗಿಯೂ, ಮದ್ರಾಸು ಮತ್ತು ಬೆಂಗಳೂರಲ್ಲಿರುವ ಬೈಬಲ್ ಸೊಸೈಟಿ ಇವರ ಪರವಾಗಿಯೂ, ಅನೇಕಾನೇಕ ಪುಸ್ತಕಗಳನ್ನು ಅಚ್ಚುಹಾಕಿಸಿ ಕೊಡುತ್ತಲಿರುವುದು.

ಕಲ್ಲುಛಾಪಾಯಂತ್ರದೊಡನೆ ಬಲು ಅಲ್ಪ ತರಗತಿಯಲ್ಲಿ ತೊಡಗಿದ ಈ ಛಾಪಖಾನೆಯು, ಈಗ ನೂರಾರು ಜನರು ಉದ್ಯೋಗ ನಡಿಸುತ್ತಲಿದ್ದು ಬಲಿಷ್ಠವಾಗಿ, ಕನ್ನಡ ಜಿಲ್ಲೆಯಲ್ಲಿ ಪ್ರಕೃತ ಶೋಭಿಸುತ್ತಿರುವ ಎಲ್ಲಾ ಛಾಪಖಾನೆಗಳಿಗೆ ಸಾದೃಶವಾಗಿ ಮಾತೃಮಂದಿರದಂತೆ ಶೋಭಾಯಮಾನವಾಗಿರುವುದು. ಈ ಛಾಪಖಾನೆಯ ಮೂಲಕ ನಮ್ಮ ಜಿಲ್ಲೆಯನೇಕರು ಅಚ್ಚುಹಾಕುವ ಪರಿಪರಿಯ ಕೆಲಸಗಳಲ್ಲಿ ತರಬೇತನ್ನು ಪಡೆದುದಲ್ಲದೆ ಧನಾನುಕೂಲವುಳ್ಳವರು ಸ್ವತಂತ್ರವಾಗಿ ಛಾಪಖಾನೆಗಳನ್ನು ಸ್ಥಾಪಿಸಿಕೊಳ್ಳುವಂತೆ ಇಂಬು ದೊರೆಯಿತು; ಅನೇಕ ಕೆಲಸಗಾರರಿಗೂ ಉಪಜೀವನವನ್ನು ಕಲ್ಪಿಸಿಕೊಡುವಂತಾಯಿತು.

ಬಾಸೆಲ್ ಮಿಶ್ಯನ್ ಛಾಪಖಾನೆಯಲ್ಲಿ ಮುದ್ರಿಸೋಣಾಗುವ ಪುಸ್ತಕಗಳನ್ನೂ ಕನ್ನಡ ಜಿಲ್ಲೆಯಲ್ಲಿರುವ ಶಾಲೆ ಕೊಲೇಜುಗಳಿಗೆ ಬೇಕಾಗುವ ಪುಸ್ತಕಗಳನ್ನೂ ವಿಕ್ರಯಿಸುವುದಕ್ಕೆ ಛಾಪಖಾನೆಗೆ ಹೊಂದಿಕೆಯಾಗಿ, 'ಬಾಸೆಲ್ ಮಿಶ್ಯನ್ ಬುಕ್ ಡಿಪೊ' ಎಂಬ ಗ್ರಂಥಖಾನೆಯೊಂದನ್ನು ಬಾಸೆಲ್ ಮಿಶ್ಯನ್ ಸಂಘದವರೇ ಮೊದಲನೆಯದಾಗಿ ಸ್ಥಾಪಿಸಿದರು. ಇದನ್ನನುಸರಿಸಿ ಈಗ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಲವು ದೇಶೀಯ ಪುಸ್ತಕಾಲಯಗಳು ತಲೆಯೆತ್ತಿವೆ.

ಬಾಸೆಲ್ ಮಿಶ್ಯನ್ ಛಾಪಖಾನೆಯಲ್ಲಿ ಛಾಪಿಸೋಣಾದ ಪುಸ್ತಕಗಳನ್ನು ಅಂದವಾಗಿ ಕಟ್ಟುವ 'ಬುಕ್ ಬೈಂಡಿಂಗ್' ಶಾಖೆಯೊಂದು ಅಗತ್ಯವೆಂದು ತಿಳಿದು, 1854ನೆಯ ಇಸವಿಯಲ್ಲಿ ಮಿಶ್ಯನ್ ಛಾಪಖಾನೆಗೆ ಹೊಂದಿಕೆಯಾಗಿ, ಬಾಸೆಲ್ ಮಿಶ್ಯನು ಒಂದು 'ಬುಕ್ ಬೈಂಡಿಂಗ್' ಶಾಖೆಯನ್ನು ಸಹ ಸ್ಥಾಪಿಸಿತು. ಈ ಶಾಖೆಯಲ್ಲಿ ಅನೇಕ ಯುವಕರಿಗೆ 'ಬುಕ್ ಬೈಂಡಿಂಗ್' ಸಂಬಂಧವಾದ ಬಗೆಬಗೆಯ ಕುಶಲ ವೃತ್ತಿಗಳನ್ನು ಕಲಿಸಿಕೊಡುವುದಾಯಿತು. ದೇಶೀಯ ಕ್ರೈಸ್ತ ಕ್ರೈಸ್ತೇತರರನೇಕರು ಈ ಉದ್ಯೋಗದಲ್ಲಿ ಸಮರ್ಥರಾದ ಬಳಿಕ, ಈ ಶಾಖೆಯನ್ನೇ ದೇಶೀಯ ಕ್ರೈಸ್ತರೊಬ್ಬರಿಗೆ ಬಿಟ್ಟುಕೊಡೋಣಾಯಿತು. ಆದಿಯಲ್ಲಿ ಬಾಸೆಲ್ ಮಿಶ್ಯನಿನಿಂದ ಸಂಸ್ಥಾಪಿಸೋಣಾಗಿ ಪೋಷಿಸಲ್ಪಟ್ಟು, ಅನಂತರ ದೇಶೀಯ ಕ್ರೈಸ್ತರಿಂದ ನಡೆಯಿಸಲ್ಪಡುವ ಈ ಬುಕ್ ಬೈಂಡಿಂಗ್ ಶಾಖೆಯು ಈಗಲೂ ಬಲ್ಮಠದಲ್ಲಿ 'ಜೋಶುವ ಎಂಡ್ ಸನ್ಸ್ ಬುಕ್ ಬೈಂಡಿಂಗ್ ವರ್ಕ್ಸ್' ಎಂಬೀ ಅಭಿಧಾನದಿಂದ ವಿಶೇಷಾಭಿವೃದ್ಧಿಯನ್ನು ಹೊಂದಿ ವಿಖ್ಯಾತವಾಗಿರುವುದು. ಇಲ್ಲಿ ಪುಸ್ತಕಗಳ ಮೇಲುಹೊದಿಕೆಗಳ ಮೇಲೆ ಸ್ವರ್ಣಾಕ್ಷರಗಳನ್ನು ಮುದ್ರಿಸುವರು. ಪುಸ್ತಕಗಳ ಅಂಚುಗಳು ಸುವರ್ಣಾಲಂಕೃತವಾಗಿರುವಂತೆ ರೂಪಿಸುವರು. ಹೀಗೆ ಬುಕ್ ಬೈಂಡಿಂಗ್ ಸಂಬಂಧವಾದ ಸರ್ವ ಕೆಲಸಗಳಲ್ಲಿ ಇದು ಮೊದಲನೆಯದಾಗಿ ಪ್ರಸಿದ್ಧಿಗೊಂಡು ಅತ್ಯುಚ್ಚ ಸ್ಥಾನದಲ್ಲಿರುವುದು. ಇಲ್ಲಿ ಕ್ರೈಸ್ತರೂ ಕ್ರೈಸ್ತೇತರರೂ ಬುಕ್ ಬೈಂಡಿಂಗ್ ವೃತ್ತಿಯನ್ನು ಈಗಲೂ ಮಾಡುತ್ತಲಿರುವರು. ಈಗ ನಾವು ಎಲ್ಲೆಲ್ಲಿಯೂ ಇಂತಹ ಬುಕ್ ಬೈಂಡಿಂಗ್ ವೃತ್ತಿಗಳನ್ನು ಮಾಡುವ ಆಫೀಸುಗಳನ್ನು ಕಣ್ಣಾರೆ ಕಾಣಬಹುದಾದರೂ ಈ ಭಾಗದಲ್ಲಿಯೂ ಬಾಸೆಲ್ ಮಿಶ್ಯನೇ ಪೂಜ್ಯಾರ್ಹವಾಗಿರುವುದು.

ಕೈಗಾರಿಕೆ ಕಲೆಯನ್ನು ಇನ್ನಷ್ಟು ಅಭಿವೃದ್ಧಿಗೊಳಿಸುವ ಉದ್ದೇಶದಿಂದ ಮಿ. ಮಿಲ್ಲರ್ ಮತ್ತು ಬೋಸಿಂಗರ್ ಎಂಬ ಸರದಾರರಿಬ್ಬರು 1848ನೆಯ ಇಸವಿಯಲ್ಲಿ ಗಂಟೆ ಗಡಿಯಾರಗಳನ್ನು ಸಿದ್ಧಗೊಳಿಸುವ ಮತ್ತು ಸರಿಪಡಿಸುವ ವೃತ್ತಿಗಳನ್ನು ಕೈಕೊಂಡರು. ಕೆಲಕಾಲ ಈ ಪ್ರವೃತ್ತಿಯಲ್ಲಿ ಮುಂದುವರಿದರೂ, ಜನತೆಯಿಂದ ವಿಶೇಷ ಪ್ರೋತ್ಸಾಹ ಲಭಿಸದಿದ್ದುದರಿಂದ, ಕೊನೆಗೆ ನಿರ್ವಾಹವಿಲ್ಲದೆ ಆ ಶಾಖೆಯನ್ನು ಕಡೆಗಾಣಿಸಬೇಕಾಗಿ ಬಂದಿತು.

ಕ್ರಿಸ್ತ ಮತಾವಲಂಬಿಗಳ ಸಂಖ್ಯೆಯು ಏರುತಿರುವಷ್ಟಕ್ಕೆ ನವೀನ ಮಾರ್ಗಗಳನ್ನು ಕೈಕೊಳ್ಳುವುದಂತೂ ಅಗತ್ಯವೆಂದು ಬಾಸೆಲ್ ಮಿಶ್ಯನಿಗೆ ತೋರಿತು. ಆದಪ್ರಯುಕ್ತ ದೇಶೀಯ ಜನರ ಅಭಿರುಚಿ, ಆವಶ್ಯಕತೆ ಮೊದಲಾದವುಗಳನ್ನರಿತ, ನೇಯಿಗೆಕೆಲಸದಲ್ಲಿ ವಿಚಕ್ಷಣರಾದ ಮೆ. ಹಾಲರ್ ಸಾಹೇಬರು 1851ನೆಯ ಇಸವಿಯಲ್ಲಿ ಮಂಗಳೂರಿನ ಬಲ್ಮಠದಲ್ಲಿ ವಸ್ತ್ರಗಳನ್ನು ತಯಾರಿಸುವ ನೇಯಿಗೆ ಕಾರಖಾನೆಯೊಂದನ್ನು ಸ್ಥಾಪಿಸಿದರು. ಪ್ರಕೃತ ಇಲ್ಲಿ ವ್ಯವಸಾಯದಲ್ಲಿರುವ ಕೈಮಗ್ಗಗಳ ವ್ಯವಸ್ಥಾಪಕರೇ ಇವರು. ಈ ನೇಯಿಗೆ ಕಾರಖಾನೆಯಲ್ಲಿ ನೇಯುವ ಕೆಲಸ ಒಂದನ್ನೇ ಅಲ್ಲದೆ, ನೂಲುಗಳಿಗೆ ವಿವಿಧ ಚೆಲೋ ಬಣ್ಣಗಳನ್ನುಪಯೋಗಿಸುವ ಕಲೆಯನ್ನು ಕೂಡ ಕಲಿಸ ತೊಡಗಿದರು. ಬಾಸೆಲ್

ಮಿಶ್ಯನ್ ನೇಯಿಗೆ ಕಾರಖಾನೆಯಲ್ಲಾಗುವ ವಸ್ತ್ರಗಳ ವಿಶಿಷ್ಟತೆ, ಯೋಗ್ಯತೆ, ಬಾಳಿಕೆ, ಖಾತ್ರಿಯಾದ ಬಣ್ಣ ಇವೇ ಮೊದಲಾದವುಗಳ ವಿಷಯವಾಗಿ ಇಲ್ಲಿ ಪ್ರತ್ಯೇಕ ತಿರಿಗಿ ಪ್ರಶಂಸೆಮಾಡಬೇಕಾದ ಅಗತ್ಯವಿರದು. ಇಲ್ಲಿಯ ವಸ್ತ್ರಗಳು ಲೋಕವಿಖ್ಯಾತಿಗೊಂಡಿರುವವು ಎಂಬುದನ್ನು ಕೇಳಿಯೂ, ಸ್ವತೇವ ಅನುಭವದಿಂದಲೂ ಪರಾಮರ್ಶಿಸಿ ತಿಳಿಯದವರು ಅತಿ ವಿರಳರೆಂದೇ ಹೇಳಬೇಕು. ಇಲ್ಲಿ ಸಿದ್ಧವಾಗುತಲಿದ್ದ ನಾನಾ ಬಗೆಯ ವಿವಿಧ ಬಣ್ಣದ ವಸ್ತ್ರಗಳ ಅಂದಚೆಂದ, ಅವುಗಳ ನುಣುಪಾದ ಮೈ, ಎಂದೂ ಕೆಡದ ಬಣ್ಣ, ನಿರ್ವಂಚನೆಯುಳ್ಳ ಭರವಸಪೂರ್ವಕವಾದ ವ್ಯಾಪಾರ ವ್ಯವಹಾರಾದಿ ವಿಶಿಷ್ಟ ಗುಣಗಳನ್ನು ಕಂಡು ಸರಕಾರವು ತಾನೇ ವ್ಯಾಪಾರಿ ಗಿರಾಕಿಗಳ ಮೂಲಕ ಇವರ ಉದ್ಯಮವನ್ನು ಪ್ರೋತ್ಸಾಹಿಸಿತು. ಮುಖ್ಯವಾಗಿ ಇಲ್ಲಿ ಸಿದ್ಧವಾಗುತಿದ್ದ ಖಾಕಿ ಮತ್ತು 'ಹಂಟಿಂಗ್' ಯಾನೆ ಶಿಖಾರಿಬಟ್ಟೆ ಇವನ್ನು ಹಿಂದೂ ದೇಶದಲ್ಲಿರುವ ಎಲ್ಲಾ ಸರಕಾರದ ನೌಕರರು ಉಪಯೋಗಿಸುವಂತೆ ಅನುಕೂಲಿಸಿಕೊಟ್ಟರು. ಒಮ್ಮೆ ಈ ನೇಯುವ ಕಾರ್ಖಾನೆಯನ್ನು ಸಂದರ್ಶಿಸಿದ ನಮ್ಮ ಹಿಂದೂದೇಶದ ಸರ್ವ ಸೇನಾಧಿಪರಾಗಿದ್ದ ಲೋರ್ಡ್ ರೋಬರ್ಟ್ಸ್ ಎಂಬವರು ಇವರ ಖಾಕಿ ಬಟ್ಟೆಗೆ ಮೆಚ್ಚಿ, ಸೈನಿಕರೆಲ್ಲರೂ ಬಾಸೆಲ್ ಮಿಶ್ಯನ್ ಖಾಕಿ ಬಟ್ಟೆಯನ್ನೆ ಧರಿಸಿಕೊಳ್ಳುವಂತೆ ಆಜ್ಞಾಪಿಸಿದರು. ಖಾಕಿ ಬಣ್ಣವನ್ನು ಪ್ರಥಮವಾಗಿ ಸಿದ್ಧಗೊಳಿಸಿ ಉಪಯೋಗಕ್ಕೆ ತಂದ ಮಹನೀಯರು ಹಾಲರ್ ಸಾಹೇಬರು. ತದ್ರೀತಿ ವೆಬ್‌ಸ್ಟರ್ ಸಾಹೇಬರು ಹಂಟಿಂಗ್ ಯಾನೆ ಶಿಖಾರಿಬಟ್ಟೆಯನ್ನು ತಯಾರಿಸಿ ಪ್ರಚಾರಕ್ಕೆ ತಂದ ಮೂಲಪುರುಷರು. ಈ ಶಿಖಾರಿಬಟ್ಟೆಗೆ ವೆಬ್‌ಸ್ಟರರ ಶಿಖಾರಿಬಟ್ಟೆ ಎಂಬೀ ಹೆಸರಿದ್ದಿತು.

ಈ ಕಾರಖಾನೆಯಲ್ಲಿ ಪ್ರಾರಂಭದಲ್ಲಿ ಮಗ್ಗಗಳಿಗೆ ಬೇಕಾಗುವ ನೂಲನ್ನು ಸುತ್ತಿ ತಯಾರಿಸುವ ಕೆಲಸವು ಹೆಂಗುಸರದಿದ್ದಿತು. ಬರಬರುತ್ತ ನೇಯಿಗೆ ವ್ಯಾಪಾರವು ಅಭಿವೃದ್ಧಿಯನ್ನು ಹೊಂದಿದುದರಿಂದ ವಿಶೇಷ ಸೌಲಭ್ಯ ಸೌಕರ್ಯಕ್ಕಾಗಿ ಉಗಿಯಂತ್ರಗಳ ಸಹಾಯದಿಂದ ನೂಲು ಸುತ್ತುವ ಹಂಚಿಕೆಯನ್ನು ಕೈಕೊಳ್ಳಬೇಕಾಯಿತು; ಬರಿಯ ಹತ್ತಿಬಟ್ಟೆ ತಯಾರುಗೊಳಿಸಬೇಕೆಂಬ ಆಲೋಚನೆಯಿಂದ ಸ್ಥಾಪಿತವಾದ ಈ ಕಾರಖಾನೆಯಲ್ಲಿ ಕ್ರಮೇಣ 'ಜೇಕರ್ಡ್ ಲೂಮ್ಸ್' ಎಂಬ ಯಾಂತ್ರಿಕಮಗ್ಗಗಳು ಪ್ರಚಾರವಾಗುವುದಾಯಿತು. ಇವುಗಳಲ್ಲಿ ಮೇಜಿಯ ಮೇಲೆ ಹಾಸುವ ಚಿತ್ರವಿಚಿತ್ರವಾದ ಬಟ್ಟೆ, ನಾರುಬಟ್ಟೆ, ಟುವಾಲುಗಳು, ಕೈವಸ್ತ್ರ ಇತ್ಯಾದಿ ಅನೇಕ ಬಗೆಯ ಸೊಗಸಾದ ಬಟ್ಟೆಗಳನ್ನು ನೇಯುತಿದ್ದರಲ್ಲದೆ, ಸ್ತ್ರೀಪುರುಷರ ಉಡುಪುತೊಡುಪುಗಳಿಗೆ ತಕ್ಕುದಾದ ಅತ್ಯುತ್ತಮವಾದ ದಮಸ್ಕ ನಾರುಬಟ್ಟೆ ಮತ್ತು 'ಮರ್ಸೆರ್ರ್ಯಾಸ್' ಬಟ್ಟೆಯನ್ನು ಸಹ ಮಾಡಬಹುದಾಯಿತು.

ಇವೆಲ್ಲವನ್ನಲ್ಲದೆ, ಇಂಡಿಯ, ಬರ್ಮ, ಸೀಲೋನ ಮೊದಲಾದ ದೇಶಗಳ ವಾಯುಸ್ಥಿತಿಗನುಸಾರವಾಗಿ ಪ್ರಯೋಗಿಸಲಿಕ್ಕಾಗುವ ಒಳಹೊದಿಕೆಗಳನ್ನು ಸಿದ್ಧಗೊಳಿಸುವ ಪ್ರತ್ಯೇಕವಾದುದೊಂದು ಶಾಖೆಯನ್ನೆ ಸ್ಥಾಪಿಸಿದರು. ಈ ಶಾಖೆಯಲ್ಲಿ 'ಜೆರ್ಸಿ ಬನಿಯನ್ಸ್', 'ನೆಟ್‌ವರ್ಕ್' ಯಾನೆ ಬಲೆಕಟ್ಟಿನ ಬನಿಯನುಗಳು, ಶರ್ಟ್, ಇಜಾರು, ಮಕ್ಕಳ ಮತ್ತು ಸ್ತ್ರೀಯರ ಒಳ ಅಂಗಿಗಳನ್ನು ನೂಲು ಮತ್ತು ಉಣ್ಣೆ ಇವೆರಡರಿಂದಲೂ ಸಿದ್ಧ ಮಾಡುತಲಿರುವರು. 'ಗಂಜಿಫ್ರಾಕು ಅಥವಾ ಬನಿಯನ್' ಮಾಡುವುದನ್ನು ಪ್ರಚಾರಕ್ಕೆ ತರುವುದರ ಮೊದಲು ಇಲ್ಲಿದ್ದ ಕೈಮಗ್ಗಗಳನ್ನು, ಇಲ್ಲಿ ಕೆಲಸ ಮಾಡುತಲಿದ್ದ ನೇಯಿಗೆ ಕೆಲಸಗಾರರಿಗೆ ನಾಮಪೂರ್ತಿಯ ಅಲ್ಪ ಬೆಲೆಗೆ ವಿಕ್ರಯಿಸಿ, ಮುಂದೆ ಅವರು ಸ್ವತಂತ್ರರಾಗಿ ಜೀವನಮಾಡಿಕೊಂಡಿರುವಂತೆ ಅನುಕೂಲ ಮಾಡಿಕೊಟ್ಟರು.

ಬಾಸೆಲ್ ಮಿಶ್ಯನು ಪ್ರಚಾರಕ್ಕೆ ತಂದ ಈ ನೇಯಿಗೆ ಮತ್ತು ಬನಿಯನ್ ಪ್ರವೃತ್ತಿಗಳ ದೆಸೆಯಿಂದ ಸಾವಿರಾರು ಜನರು ನೇಯಿಗೆವೃತ್ತಿಯನ್ನು ಕಲಿತುಕೊಂಡರು. ಅನೇಕರು ಸ್ವತಂತ್ರವಾದ ನೇಯಿಗೆ ಕಾರಖಾನೆಗಳನ್ನು ಸ್ಥಾಪಿಸಿಕೊಂಡರು. ನಮ್ಮ ಕನ್ನಡ ಜಿಲ್ಲೆಯಲ್ಲಿ ಬನಿಯನುಗಳನ್ನು ತಯಾರಿಸುವ ಎರಡು ಕಾರಖಾನೆಗಳು ಮುಖ್ಯವಾಗಿ ಮಂಗಳೂರಲ್ಲೇ ಇವೆ. ಬಾಸೆಲ್ ಮಿಶ್ಯನು ಸ್ಥಾಪಿಸಿದ ಈ ನೇಯಿಗೆ ಕಾರಖಾನೆಯಿಂದ ನಮ್ಮ ಜಿಲ್ಲೆಯು ಎಷ್ಟು ಅಭಿವೃದ್ಧಿಯನ್ನೈದಿತು ಎಂಬುದಕ್ಕೆ ನಮ್ಮ ಜಿಲ್ಲೆಯಲ್ಲಿರುವ ಕೈಮಗ್ಗಗಳೂ, ನೇಯಿಗೆ ಕಾರಖಾನೆಗಳೂ ಬಲವಾದ ಸಾಕ್ಷ್ಯಗಳಾಗಿವೆ. ಬಾಸೆಲ್ ಮಿಶ್ಯನ್ ನೇಯಿಗೆ ಕಾರಖಾನೆಯಲ್ಲಿ ಈಗಲೂ ಸ್ತ್ರೀಪುರುಷರು ಕೂಡಿ 125 ಜನರು ಕೆಲಸ ಮಾಡಿ ಉಪಜೀವನ ಮಾಡುತ್ತಿರುವರು.

ವಿದ್ಯೆಯಲ್ಲಿ ಮುಂದುವರಿಯಲಾರದ ವಿದ್ಯಾರ್ಥಿನಿಯರಿಗೆ ಜೀವನೋಪಾಯವನ್ನು ಕಲ್ಪಿಸಿಕೊಡಲು, ಕಸೂತಿ ಕೆಲಸದ ಶಾಖೆಯೊಂದನ್ನು ಬಾಸೆಲ್ ಮಿಶ್ಯನು ಏರ್ಪಡಿಸಿತು. ಈ ಕಲೆಯಲ್ಲಿ ವಿಚಕ್ಷಣರಾದ ಪಾಶ್ಚಾತ್ಯ ಮಹಿಳೆಯರ ಮೇಲ್ವಿಚಾರದಿಂದ ಈ ಶಾಖೆಯ ಕಾರ್ಯವು ನಿರ್ವಹಿಸೋಣಾಗುವುದು. ಈ ಶಾಖೆಯಲ್ಲಿ ಸೊಗಸಾದ ಮತ್ತು ಸುಂದರವಾದ ಎಂಬ್ರೊಯಿಡರಿ ವೃತ್ತಿಯನ್ನು, ಹಸ್ತಪಾವಡ, ಪಾಯಿಜಾಮೆ, ಕಾಲುಚೀಲ, 'ಬ್ಲೌಸ್' ಯಾನೆ ಸಡಿಲಾಗಿರುವ ಮೇಲಂಗಿ ಇತ್ಯಾದಿಗಳನ್ನು ಮಾಡುವಂತೆ ಕಲಿಸಿಕೊಟ್ಟರು. ಈಗಲೂ ಹಲವು ತರುಣಿಯರು ಈ ಕಸೂತಿ ಕೆಲಸದಿಂದಲೇ ಉದರನಿರ್ವಾಹವನ್ನು ಸಾಗಿಸುತಲಿರುವರು.



ಬಾಸೆಲ್ ಮಿಶ್ಶನ್ ಹಂಚುಕಾರಖಾನೆ, ಜಪ್ಪು, ಮಂಗಳೂರು.











ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿ, ಮುಂದಣ ವಿದ್ಯಾಭ್ಯಾಸವನ್ನು ಮಾಡಲು ಅಸಮರ್ಥರಾದ ತರುಣ ವಿದ್ಯಾರ್ಥಿಗಳಿಗೆ ಸ್ವತಂತ್ರವಾದ ಉದ್ಯೋಗವನ್ನುಂಟು ಮಾಡಿಕೊಡುವ ನಿಮಿತ್ತ, ಉಡಿಗೆತೊಡಿಗೆಗಳನ್ನು ಮಾಡುವುದರಲ್ಲಿ ಜರ್ಮನಿಯಲ್ಲಿ ತರಬೇತಾದ ದರ್ಜಿಕೆಲಸದಲ್ಲಿ ವಿಚಕ್ಷಣರಾದವರ ಪರಿಮುಖವಾಗಿ ಹೊಲಿಗೆವೃತ್ತಿಯನ್ನು ಕಲಿಸತೊಡಗಿದರು. ಹೀಗೆ ಹೊಲಿಗೆವೃತ್ತಿಯಲ್ಲಿ ಪ್ರವೀಣರನ್ನಾಗಿ ಮಾಡಿದ ಬಳಿಕ ತಮ್ಮ ಜೀವನೋಪಾಯವನ್ನು ತಾವು ಸ್ವತಂತ್ರವಾಗಿಯೇ ಮಾಡಿಕೊಂಡಿರುವಂತೆ ಒತ್ತಾಸೆ ಮಾಡಿದುದು ಬಾಸೆಲ್ ಮಿಶ್ಯನೇ. ಪ್ರತಿ ಅಂಗಡಿಬಾಗಲಲ್ಲಿ ಕುಳಿತುಕೊಂಡು ಹೊಲಿಗೆವೃತ್ತಿಯನ್ನು ಮಾಡಿಕೊಂಡಿರುವ ನೂರಾರು ದರ್ಜಿಗಳನ್ನು ನಾವು ನೋಡಿದ್ದೇ ಆದರೆ ಈ ವೃತ್ತಿಯನ್ನು ಆದಿಯಲ್ಲಿ ತೋರಿಸಿಕೊಟ್ಟ ಬಾಸೆಲ್ ಮಿಶ್ಯನೆರಿಗಳ ಜ್ಞಾಪಕವಾಗದಿರದು.



ಕಾಂತಿದೇವಾಲಯ, ಜಪ್ಪು.

ಮನೆಮಾಡುಗಳನ್ನು ಹೊದಿಸಲು ತಕ್ಕುದಾದ ಹಂಚುಗಳ ಆವಶ್ಯಕತೆಯು ದೇಶದ ಸರ್ವ ಭಾಗದಲ್ಲಿಯೂ ಬಹಳವಾಗಿರುವುದು ಎಂಬುದನ್ನು ಮಿ. ಪ್ಲೆಬ್ಸ್ಟ ಸಾಹೇಬರು ಮನವರಿತು, ಹಂಚುಮಾಡುವ ಪ್ರವೃತ್ತಿಯನ್ನು 1865ನೇ ಇಸವಿಯಲ್ಲಿ ಮಂಗಳೂರಿನ ಜಪ್ಪಿನಲ್ಲಿ ಮೊದಲಾಗಿ ಕೈಕೊಂಡರು. ಇತರ ಕೈಗಾರಿಕೆಗಳಂತೆ ಈ ಕೈಗಾರಿಕೆಯ ಉದ್ದಿಮೆಯು ಕೂಡ ಅತಿ ಅಲ್ಪ ಪ್ರಮಾಣದಿಂದ ಪ್ರಾರಂಭಿಸೋಣಾಯಿತು. ಮೊದಲನೆಯ ಮಿಶ್ಯನು ಹಂಚು ಕಾರಖಾನೆಯು 1866ರಲ್ಲಿ 600 ರೂಪಾಯಿ ಮೂಲಧನದೊಡನೆ ಸ್ಥಾಪಿತವಾಯಿತು. ಮೊತ್ತಮೊದಲು ಈ ಉದ್ಯೋಗವನ್ನು ಜನರು ತಮ್ಮ ಕೈಗಳಿಂದಲೆ ಮಾಡುತಿದ್ದು, ಬಳಿಕ ಎತ್ತುಗಳ ಸಹಾಯದಿಂದ ಮಾಡತೊಡಗಿದರು. ಪ್ರಾರಂಭದಲ್ಲಿ 12 ಮಂದಿ ಕೆಲಸಗಾರರು ಮಾತ್ರ ಇದ್ದರು. ದಿನ ಒಂದಕ್ಕೆ 500 ಹಂಚುಗಳನ್ನು ಮಾಡಬಹುದಾಗಿದ್ದಿತು. 1881ನೆಯ ಇಸವಿಯಲ್ಲಿ ಮೊದಲನೆಯದಾಗಿ ಉಗಿಯಂತ್ರವನ್ನು ಹೂಡಿದರು. ಇಂತು ಮಂಗಳೂರಲ್ಲಿ ಪ್ರಥಮ ಫಲವಾಗಿ ಪ್ರಾರಂಭಿಸಿದ ಈ ಕಾರಖಾನೆಯಲ್ಲಿ ಈಗ ನೂರು ಕುದುರೆಗಳ ಶಕ್ತಿ ಪ್ರಭಾವವುಳ್ಳ ಉಗಿಯಂತ್ರದ ಸಹಾಯವೂ

ಇದೆ. ದಿನ ಒಂದಕ್ಕೆ ಸಾವಿರಾರು ಹಂಚುಗಳೂ ಸಿದ್ಧವಾಗುತ್ತಲಿವೆ. ಇಲ್ಲಿ ತಯಾರಾಗುತ್ತಲಿರುವ ಹಂಚುಗಳ ಅಂದಚೆಂದ, ಬಾಳಿಕೆ, ಯೋಗ್ಯತೆ, ಗುಣವಿಶೇಷಾದಿಗಳನ್ನು ಇಂಡಿಯಾ ಸರಕಾರದವರು ಮಾನ್ಯಮಾಡಿ, ತಾವು ಕಟ್ಟಿಸುವ ಎಲ್ಲಾ ಕಟ್ಟಡಗಳಿಗೆ ಜಪ್ಪಿನಲ್ಲಿ ಸಿದ್ಧವಾಗುತ್ತಲಿರುವ ಬಾಸೆಲ್ ಮಿಶ್ಯನ್ ಹಂಚುಗಳನ್ನೇ ಉಪಯೋಗಿಸಬೇಕೆಂದು ನಿರ್ಧರಿಸಿ ಆಜ್ಞೆಯನ್ನಿತ್ತರು. ಸರಕಾರವು ಈ ರೀತಿ ಪ್ರೋತ್ಸಾಹಿಸಿದುದಲ್ಲದೆ, ಕಾರಖಾನೆಗಳಿಗೆ ಬೇಕಾಗುವ ಕಟ್ಟಿಗೆ ಕೂಡ ತಮ್ಮ ಕಾಡುಗಳಿಂದ ಒದಗಿಸಿಕೊಡುವಷ್ಟು ಸಹಾಯಕವಾಗಿದ್ದಿತು. ಈಗ ಈ ಕಾರಖಾನೆಯಲ್ಲಿ ಮನೆಯ ಮಾಡುಗಳಿಗೆ ಹೊದಿಸಬಹುದಾದ ಹಂಚುಗಳು, ಸಾದಾ ಮತ್ತು ಅಲಂಕೃತವಾದ ಮೂಲೆ ಹಂಚುಗಳು, ಬೆಳಕಂಡಿ ಹಂಚುಗಳು, ಗಾಳಿಯಾಡುವ ಹಂಚುಗಳು, ಇನ್ನು ವಿವಿಧ ತರದ ನಕಾಶೆಯುಳ್ಳ ಅತಿ ಸುಂದರವಾದ ಹಂಚುಗಳು, ಸಾದಾ ಮತ್ತು ಸುಂದರವಾದ ಇಟ್ಟಿಗೆಗಳು, ಹುರ್ಡಿಗಳು, ಕೊಳವಿಗಳು, ಹೂವಿನ ಚಟ್ಟಿಗಳು, ಸಿಮೆಂಟ್ ಇಟ್ಟಿಗೆಗಳು ಇತ್ಯಾದಿಯಾದ ನೂರಾರು ಬಗೆಯ ಸಾಧನಸಾಮಗ್ರಿಗಳು ಬಲು ಸೊಗಸಾಗಿ ಶಾಸ್ತ್ರೀಯ ರೀತ್ಯಾ ಮಾಡೋಣಾಗುತ್ತಿವೆ. ಮರಗಳು ಬಹಳ ತುಟ್ಟಿಯಾಗಿರುವ ಪಟ್ಟಣಪ್ರದೇಶಗಳಲ್ಲಿ ಇಲ್ಲಿ ತಯಾರಾಗುವ 'ಸೀಲಿಂಗ್' ಹಂಚಿನ ಉಪಯೋಗವು ಬಹಳ ಸಹಾಯಕಾರಿಯಾಗಿರುವುದು. ಇಲ್ಲಿ ನಿರ್ಮಾಣವಾಗುತ್ತಲಿರುವ ಹಂಚು ಮೊದಲಾದವುಗಳೆಲ್ಲವೂ ಲೋಕವಿಖ್ಯಾತವಾಗಿವೆ. ಈ ಕಾರಖಾನೆಯ ಕೆಲಸದಾಳುಗಳು ತಮ್ಮ ಕಾರಖಾನೆಯಲ್ಲಾಗುವ ಬಗೆಬಗೆಯ ಸಾಧನ ಸಾಹಿತ್ಯೋಪಕರಣಗಳಿಂದಲೆ, ಅತಿ ರಮಣೀಯವಾಗಿ ತಾವೇ ಕಟ್ಟಿರುವ ಬಲು ಭವ್ಯವಾದ ಜಪ್ಪಿನ ಕಾಂತಿದೇವಾಲಯವೊಂದನ್ನು ಸಂದರ್ಶಿಸಿದರೆ ಈ ಹಂಚುಕಾರಖಾನೆಯಲ್ಲಾಗುವ ವಿವಿಧ ವಿಶಿಷ್ಟ ಸಾಹಿತ್ಯಗಳ ಪರಿಗಣನೆಯೂ, ಅವುಗಳ ಗುಣವಿಶೇಷಾದಿ ಯೋಗ್ಯತೆಗಳೂ ತಾನೇ ನಿದರ್ಶನವಾಗುವುವು. ಈ ಕಾರಖಾನೆಯಲ್ಲಿ ಈಗಲೂ ಸ್ತ್ರೀಪುರುಷರು ಕೂಡ 500ಕ್ಕಿಂತ ಅಧಿಕ ಜನರು ದಿನಂಪ್ರತಿ ಗೇಯುತ್ತಿರುವರು.

ಬಳಿಕ ಎರಡನೆಯದಾಗಿ 1882ನೆಯ ಇಸವಿಯಲ್ಲಿ ಮಂಗಳೂರಿನ ಕುದ್ರೋಳಿಯಲ್ಲಿ ಹಂಚುಕಾರಖಾನೆಯೊಂದನ್ನು ಸ್ಥಾಪಿಸಿದರು. ಇಲ್ಲಿ ಮುಖ್ಯವಾಗಿ ಹಂಚು ಮತ್ತು ಇಟ್ಟಿಗೆಗಳನ್ನು ಮಾತ್ರ ತಯಾರಿಸುತಲಿರುವರು. ಇಲ್ಲಿಯೂ ದಿನ ಒಂದಕ್ಕೆ ಸಾವಿರಗಟ್ಟಲೆಯಲ್ಲಿ ಹಂಚುಗಳು ಸಿದ್ಧವಾಗುತ್ತಲಿವೆ. ಕ್ರೈಸ್ತ ಕ್ರೈಸ್ತೇತರ ಸ್ತ್ರೀಪುರುಷರು ಒಟ್ಟುಗೂಡಿ ಹೆಚ್ಚುಕಡಿಮೆ 500 ಮಂದಿ ಕೆಲಸಗಾರರು ತಮ್ಮ ಜೀವನೋಪಾಯವನ್ನು ಸಾಗಿಸುತಲಿರುವರು. ಇಲ್ಲಿರುವ ಕ್ರೈಸ್ತರ ದೇವಾರಾಧನೆ ಬಗ್ಗೆ, ಜೊಕ್ಕಪಟ್ಟಣದಲ್ಲಿ ವಿಶ್ರಾಂತಿ ಎಂಬ ಹೆಸರಿನ ಬಲವಾದ ಗೋಪುರವುಳ್ಳ ದೇವಾಲಯವಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಬಾಸೆಲ್ ಮಿಶ್ಯನು ಹಂಚಿನ ಕಾರ್ಖಾನೆಗಳಲ್ಲಿ ಮೂರನೆಯದು ಉಡುಪಿಗೆ ಸಮೀಪವಿರುವ ಮಲ್ಪೆಯಲ್ಲಿರುವುದು. 1886ನೆಯ ಇಸವಿಯಲ್ಲಿ ಇದನ್ನು ಸ್ಥಾಪಿಸಿದರು. ಇಲ್ಲಿಯೂ ದಿನ ಒಂದಕ್ಕೆ ನೂರಾರು ಕ್ರೈಸ್ತ ಕ್ರೈಸ್ತೇತರರಾದ ಸ್ತ್ರೀಪುರುಷರು ಕೆಲಸ ಮಾಡುತಲಿರುವರು. ದಿನನಿತ್ಯ ಸಾವಿರಗಟ್ಟಲೆಯಲ್ಲಿ ಉಗಿಯಂತ್ರದ ಮೂಲಕ ಹಂಚುಗಳು ಸಿದ್ಧವಾಗುತ್ತಲಿವೆ. ಕಾರ್ಖಾನೆಯ ದೆಸೆಯಿಂದ ಹೆಚ್ಚು ಕ್ರೈಸ್ತಜನ ಸಂಖ್ಯೆ ಇರುವುದರಿಂದ, ದೇವಾರಾಧನೆ ಬಗ್ಗೆ ಇಲ್ಲಿಯೂ ಒಂದು ದೇವಾಲಯವು ಇರುವುದು.

ಬಾಸೆಲ್ ಮಿಶ್ಯನು ಸ್ಥಾಪಿಸಿದ ಈ ಕಾರ್ಖಾನೆಗಳಲ್ಲಿ ಸಮರ್ಥರಾದ ಮತ್ತು ಚಟುವಟಿಕೆಯುಳ್ಳ ಯೂರೋಪಿಯ ಮತ್ತು ದೇಶೀಯ ಜನರ ಮೇಲ್ವಿಚಾರದಿಂದ ಕೆಲಸವು ನಡೆಯಿಸೋಣಾಗುತ್ತದೆ. ಕಾರ್ಖಾನೆಗಳ ಕ್ರಮನಿಬಂಧನೆಗಳು ಕಾರ್ಖಾನೆಗಳ ಬಗ್ಗೆ ಸರಕಾರವು ಏರ್ಪಡಿಸಿದ ಕ್ರಮಕ್ಕನುಗುಣವಾಗಿಯೆ ಇರುವುವು. ಫೆಕ್ಟರಿ ಇನ್ಸ್‌ಪೆಕ್ಟರರು, ಜಿಲ್ಲಾ ಸರ್ಜನರು, ಕಲೆಕ್ಟರರು ಮೊದಲಾದ ಅಧಿಕಾರಿಗಳು ಆಗಾಗ್ಗೆ ಈ ಕಾರ್ಖಾನೆಗಳನ್ನು ಸಂದರ್ಶಿಸುತ್ತಲಿರುವರು. ಹಂಚುಕಾರ್ಖಾನೆಗಳಲ್ಲಿ ಕೆಲಸಮಾಡುವ ಸ್ತ್ರೀ ಕೆಲಸಗಾರರಲ್ಲಿ ಎಳೇ ಮಕ್ಕಳನ್ನು ಪರಾಂಬರಿಸುವಂತಹ ಏರ್ಪಾಡು ಪ್ರತ್ಯೇಕವಾಗಿದೆ. ಕೆಲಸಗಾರರಿಗೆ 'ಸಿಕ್‌ಫಂಡ್', 'ಪ್ರೊವಿಡೆಂಟ್ ಫಂಡ್', 'ಸೇವಿಂಗ್ಸ್‌ಫಂಡ್' ಮತ್ತು ರೈಟರರಿಗೆ 'ಪೆನ್ಶನ್ ಫಂಡ್' ಎಂಬ ವಿಶೇಷ ಸೌಕರ್ಯಗಳಿವೆ.

ಮುಖ್ಯವಾಗಿ ಮಿಶ್ಯನು ಹಂಚುಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕ್ರೈಸ್ತರಿಗೆ ಮೇಲೆ ಹೇಳಿದ ಸೌಕರ್ಯಗಳಲ್ಲದೆ, ಅವರು ತಮ್ಮ ಕುಟುಂಬದೊಂದಿಗೆ ಸುಖವಾಸ ಮಾಡಿಕೊಂಡಿರುವಂತೆ ಅವರ ಸ್ಥಿತಿಗನುಸಾರವಾಗಿ ನಿವಾಸ ಗೃಹಗಳನ್ನು ಕಟ್ಟಿಸಿಕೊಟ್ಟಿರುವರು. ಈ ಬಗ್ಗೆ ನಾಮಪೂರ್ತಿಯ ಬರಿಯ ಅಲ್ಪ ಬಾಡಿಗೆ ಅಥವಾ ಗೇಣಿಯನ್ನು ತೆರಬೇಕಾಗಿರುವುದು.

ಬಾಸೆಲ್ ಮಿಶ್ಯನು ಸ್ಥಾಪಿಸಿದ ಈ ಹಂಚುಕಾರ್ಖಾನೆಗಳ ಆದರ್ಶದಿಂದ ದಕ್ಷಿಣ ಕನ್ನಡ ಜಿಲ್ಲೆಯ ಧನಿಕರನೇಕರು ಇಂತಹ ಹಂಚುಕಾರ್ಖಾನೆಗಳನ್ನು ಸ್ಥಾಪಿಸಿಕೊಳ್ಳಲನುವಾಯಿತು. ಈಗ ಮಂಗಳೂರು ಪಟ್ಟಣದಲ್ಲಿ ಹೆಚ್ಚು ಕಡಿಮೆ 50 ಹಂಚುಕಾರ್ಖಾನೆಗಳಿವೆ. ಈ ಕಾರ್ಖಾನೆಗಳಲ್ಲಿ ಸಾವಿರಾರು ಸ್ತ್ರೀಪುರುಷರು ಗೇಯುತ್ತ, ತಮ್ಮ ಜೀವನವ್ಯಾಪಾರವನ್ನು ಸುಖದಿಂದ ಸಾಗಿಸುತ್ತಿರುವರು. ಇವೆಲ್ಲ ಬಳಿತುಗಳಿಗೆ

ಮೂಲಪುರುಷರು ಬಾಸೆಲ್ ಮಿಶ್ಯನೆರಿಗಳೇ ಇರುವರು. ಎಲ್ಲಾ ಕಾರ್ಖಾನೆಗಳ ಅಸ್ತಿವಾರವಂತೂ ಬಾಸೆಲ್ ಮಿಶ್ಯನೇ ಇರುವುದು.

ಇನ್ನೊಂದು ಪ್ರಯೋಜನಕಾರಿಯಾದ ಕೈಗಾರಿಕೆ ಶಾಖೆ ಎಂದರೆ 'ಮೆಕೆನಿಕಲ್' ಯಾನೆ ಕಬ್ಬಿಣ ಕೆಲಸದ ಕಾರ್ಖಾನೆ. ಇದನ್ನು 1874ನೆಯ ಇಸವಿಯಲ್ಲಿ ಮಂಗಳೂರಲ್ಲಿ ಸ್ಥಾಪಿಸಿದರು. ಪ್ರಥಮದಲ್ಲಿ ಇದು ಬಾಸೆಲ್ ಮಿಶ್ಯನ್ ನೇಯಿಗೆ ಮತ್ತು ಹಂಚುಕಾರ್ಖಾನೆಗಳಿಗೆ ಬೇಕಾಸುವ ಕಾರ್ಯವನ್ನು ಕೂಡ ಕ್ರಮೇಣ ಕೈಕೊಳ್ಳುವುದಾಯಿತು. ಜಿಲ್ಲೆಯ ಆಯಾ ಪ್ರಾಂತಗಳಲ್ಲಿರುವ ತರುಣರು ಕಬ್ಬಿಣದ ಕೈಗಾರಿಕೆಯಲ್ಲಿ ತರಬೇತನ್ನು ಹೊಂದುವ ನಿಮಿತ್ತ, ಇಲ್ಲಿ ಬಂದು ಸೇರಿಕೊಳ್ಳುವಂತೆ ಅನುಕೂಲವಾಯಿತು. ನೂರಾರು ಜನರು ಇಲ್ಲಿ ಉತ್ತಮತರದ ವೃತ್ತಿ ತರಬೇತಿಯನ್ನು ಪಡೆದುಕೊಂಡು, ಮುಂದೆ ಕಮ್ಮಾರರು, ಎಂಜಿನ್ ಡ್ರೈವರ್ಸ್, ಮಾಸ್ಟರ್ ಮೆಕೆನಿಕ್ಸ್ ಇವೇ ಮೊದಲಾದ ಉದ್ಯೋಗಗಳಲ್ಲಿ ದೇಶದ ಆಯಾ ಪ್ರಾಂತಗಳಿಗೆ ಹೋಗಿ,



ಬಾಸೆಲ್ ಮಿಶ್ಯನ್ ಕಬ್ಬಿಣ ಕೆಲಸದ ಕಾರಖಾನೆ, ಮಂಗಳೂರು.

ಗಿರುವ ಅಚ್ಚು ಮೊದಲಾದ ಕಬ್ಬಿಣದ ಸಾಮಗ್ರಿಗಳನ್ನು ಒದಗಿಸಿಕೊಡುವುದಕ್ಕೆ ಮತ್ತು ಆ ಕಾರ್ಖಾನೆಗಳಲ್ಲಿರುವ ಯಂತ್ರಸಾಧನಗಳನ್ನು ಸರಿಗೊಳಿಸುವುದಕ್ಕೆ ಸಹಾಯಕವಾಗಿ ಸ್ಥಾಪಿಸೋಣಾಯಿತು. ಬರಬರುತ್ತ ಈ ಕಾರ್ಖಾನೆಯ ಚತುರ ವ್ಯವಸ್ಥಾಪಕರಾದ ಮೆ. ಹಿಟ್ಸಿಂಗರ್ ಸಾಹೇಬರ ಬುದ್ಧಿಕೌಶಲ್ಯದಿಂದ ಸಮೃದ್ಧಿಯನ್ನೈದಿತು. ಇದು ತಮ್ಮ ಕಾರ್ಖಾನೆಗಳ ಪ್ರಯೋಜನಾರ್ಥವಾಗಿ ಎಂಬಂತೆ ಇದ್ದರೂ, ಇತರ ಸಾಮಗ್ರಿಗಳನ್ನು ಸಿದ್ಧಗೊಳಿರೈಲ್ವೆ ಇಲಾಖೆಯಲ್ಲಿಯೋ, ಇನ್ನು ಇತರ ದೊಡ್ಡ ದೊಡ್ಡ ಕಂಪೆನಿಗಳಲ್ಲಿಯೋ ಸೇರಿಕೊಂಡು ಪೌಷ್ಟ್ಯಮಾಸಾಶನವನ್ನು ಪಡೆದು ಸುಖಕರವಾಗಿ ಜೀವನಮಾಡಿಕೊಂಡಿರುವರು. ಇನ್ನು ಅನೇಕರು ತಾವು ಅಭ್ಯಾಸಿಸಿದ ಸ್ವತಂತ್ರಯುಕ್ತವಾದ ಪ್ರವೃತ್ತಿಯಲ್ಲಿ ಮುಂದುವರಿದು, ತಮ್ಮ ಕಷ್ಟಾರ್ಜಿತದ ಸ್ವತಂತ್ರಜೀವನವನ್ನೆ ಸಾಗಿಸಿಕೊಂಡಿರುವರು.

ಪ್ರಕೃತ, ಈ ಕಬ್ಬಿಣ ಕಾರ್ಖಾನೆಯಲ್ಲಿ ಎಲ್ಲಾ ವಿಧದ ಕಬ್ಬಿಣ ಸಾಮಗ್ರಿಗಳ ಜೀರ್ಣೋದ್ಧಾರ ಕೆಲಸಗಳನ್ನು



ಬಾಸೆಲ್ ಮಿಶ್ಶನ್ ಶೋಪ್, ಮಂಗಳೂರು.

ಮಾಡುತ್ತಿರುವರು. ಹಂಚುಗಳ ಅಚ್ಚು, ನೀರು ಹಾಯಿಸುವ ಯಂತ್ರ, ಬೆಲ್ಲ ಮತ್ತು ಎಣ್ಣೆಯ ಗಾಣಗಳು ಇತ್ಯಾದಿ ನವೀನ ಯಂತ್ರಸಾಧನಗಳನ್ನೂ ಯಂತ್ರೋಪಕರಣಗಳನ್ನೂ ವಿವಿಧ ಬಗೆಯಲ್ಲಿ ಪ್ರಯೋಜನಕಾರಿಯಾದ ಇತರ ಅನೇಕಾನೇಕ ವಸ್ತುಸಾಮಗ್ರಿಗಳನ್ನೂ ಸಿದ್ಧಗೊಳಿಸುವರು. ಎರಕಹೊಯ್ಯುವ ಕೆಲಸವೂ ಇಲ್ಲಿ ನಡೆಯುತ್ತಿರುವುದು. ಕೆಲವು ವರುಷಗಳಿಂದೀಚೆಗೆ, ಈಗಿನ ವಿದ್ಯಮಾನಗಳಿಗೆ ತಕ್ಕುದಾದ, ಬೆಂಕಿಯಲ್ಲಿ ಸುಡದ, ಕಳ್ಳರಿಂದ ಅಪಹರಿಸಲಾಗದ ಬಲು ಭದ್ರವಾದ ವಿಜಾತೀಯವಾದ 'ಆಯರ್ನ್ ಸೇಫ್ಸ್' ಎಂಬೀ ಹೆಸರಿನ ಕಬ್ಬಿಣದ ಕಪಾಟುಗಳನ್ನು ಮಾಡುತಲಿದ್ದಾರೆ. ಇಂತಹ ಕಬ್ಬಿಣದ ಕಪಾಟುಗಳನ್ನು ನಾವು ದೇಶದ ಆಯಾ ಕೋರ್ಟು, ಕಚೇರಿ, ಬೇಂಕು, ಆಫೀಸು, ಕಂಪೆನಿ ಇವುಗಳಲ್ಲಿ ಮತ್ತು ಶ್ರೀಮಂತರ ಮನೆಗಳಲ್ಲಿ ಸಹ ಕಾಣಬಹುದಾಗಿದೆ. ಈಗ ನಮ್ಮ ಮಂಗಳೂರಲ್ಲಿ ಇಂತಹ ಕಬ್ಬಿಣಕಾರ್ಖಾನೆಗಳು ಎರಡು ಮಾತ್ರ ಇವೆ. ಜಪ್ಪು ಸೆಮಿನೆರಿಯ ಬಳಿ ಇರುವ 'ಸೆಂಟ್ ಜೊಸೆಫ್ಸ್ ಇಂಡಸ್ಟ್ರಿಸ್' ಎಂಬುದು ಒಂದು. ಮಂಗಳೂರು ಅಯರ್ನ್ ವರ್ಕ್ಸ್ ಎಂಬುದು ಇನ್ನೊಂದು. ಇವಲ್ಲದೆ, ಇನ್ನು ಇತರ ಸಣ್ಣಪುಟ್ಟ ಕಮ್ಮಾರಸಾಲೆಗಳು ಹೇರಳವಾಗಿವೆ. ಇವೆಲ್ಲವುಗಳಿಗೆ ಬಾಸೆಲ್ ಮಿಶ್ಯನ್ ಕಬ್ಬಿಣ ಕಾರ್ಖಾನೆಯು ತವರುಮನೆಯಾಗಿದೆ ಎಂದು ಸಂಕೋಚಗೊಳ್ಳದೆ ಹೇಳಬಹುದು.

ಹೀಗೆ ಬಾಸೆಲ್ ಮಿಶ್ಯನು ಶಿಕ್ಷಣ ಕೈಗಾರಿಕೆಗಳನ್ನು ಪ್ರಚಾರಗೊಳಿಸುವುದರಲ್ಲಿ ಮಾತ್ರವೇ ಅಲ್ಲ, ವ್ಯಾಪಾರಿಗಳು ವಿಕ್ರಯಿಸತಕ್ಕ ಪದಾರ್ಥಗಳ ಬೆಲೆಯನ್ನು ಮಟ್ಟುಮಾಡಿಕೊಂಡು, ಪದಾರ್ಥಗಳಿಗೆ ಸ್ವೇಚ್ಛಾನುಸಾರ ವಿಶೇಷ ಲಾಭ ದೃಷ್ಟಿಯಿಂದ ಬಾಯಿಗೆ ಬಂದ ಬೆಲೆಯನ್ನು ಹೇಳದೆ, ಒಂದೇ ದರದಲ್ಲಿ ವಿಕ್ರಯಿಸುವ ವಿಧಾನ, ತೂಕ ಅಳತೆಗಳನ್ನು ಸರಿಯಾಗಿಟ್ಟುಕೊಳ್ಳುವುದನ್ನೂ, ಹಳೆಯ ಪದಾರ್ಥಗಳನ್ನು ಹೊಸ ಪದಾರ್ಥಗಳೆಂದು ಹೇಳಿ ಜನರನ್ನು ವಂಚಿಸಲಾಗದು ಎಂಬುದನ್ನೂ, 'ಮರ್ಕೆಂಟೈಲ್ ಮಿಶ್ಯನ್ ಬ್ರೆಂಚ್' ಎಂಬ ಹೆಸರುಳ್ಳ ಮಿಶ್ಯನ್ ಶೋಪಿನ ಪರಿಮುಖವಾಗಿ ವಾಣಿಜ್ಯವೃತ್ತಿಯ ಧರ್ಮತತ್ವವನ್ನು ನಿದರ್ಶನರೂಪವಾಗಿ ತೋರಿಕೊಟ್ಟಿತು. ನಮ್ಮಲ್ಲಿಯ ವರ್ತಕವ್ಯಾಪಾರಿಗಳು, ವ್ಯಾಪಾರಿ ಗಿರಾಕಿಗಳೊಳಗಿನ ಪರಸ್ಪರ ವಿಶ್ವಾಸಪ್ರಾಮಾಣಿಕತೆಯನ್ನರಿತು ನಿರ್ವಂಚನೆಯಿಂದ ವರ್ತಿಸಲೆತ್ನಿಸುವುದು ನಮ್ಮ ವ್ಯಾಪಾರ ಉದ್ದಿಮೆಗಳ ಅಭಿವೃದ್ಧಿಸೂಚಕವಾದ ಶುಭ ಲಕ್ಷಣವಾಗಿರುವುದು. ಒಂದೇ ದರವನ್ನು ಹೇಳಿ, ಉತ್ತಮ ಪದಾರ್ಥವನ್ನು ಕೊಡುವುದಾಗಿದ್ದರೆ, ಅಂತಹ ವ್ಯಾಪಾರ ಸ್ಥಳಕ್ಕೆ 'ಇದು ಮಿಶ್ಯನ್‌ಶೋಪಿನಂತೆ ಇರುವುದು' ಎಂದು ಈಗಲೂ ಜನರನ್ನುವುದುಂಟು.

ಬಾಸೆಲ್ ಮಿಶ್ಯನು ಮಾಡಿದ ಇನ್ನೊಂದು ಪುಣ್ಯಕಾರ್ಯವು ಯಾವುದೆಂದರೆ:—ಕ್ರಿಸ್ತೀಯ ಧರ್ಮಾವಲಂಬಿಗಳಲ್ಲಿ ಅನೇಕರು ಬರಿಗೈಯಲ್ಲಿ ಬಂದವರಿರುವರು. ಕನ್ನಡ ಸೀಮೆಯಲ್ಲಿ ವಾಡಿಕೆಯಲ್ಲಿರುವ ಪ್ರಕಾರ ಕುಟುಂಬದ ಪಿತ್ರಾರ್ಜಿತ ಆಸ್ತಿಯು ವಿಭಾಗವಾಗದ್ದರಿಂದ, ಅಲ್ಪಸ್ವಲ್ಪ ಆಸ್ತಿ ಇದ್ದವರು ತಮ್ಮ ಹಕ್ಕನ್ನು ಕಳಕೊಳ್ಳಬೇಕಾಯಿತು. ಇಂತಹರಿಗೆ ಉಪಜೀವನಕ್ಕೆ ಮಾರ್ಗವಾಗುವಂತೆ ಕೈಗಾರಿಕೆ ಉದ್ದಿಮೆಗಳ ಮೂಲಕ ಮಾತ್ರವಲ್ಲ, ಆ ಕಾಲದಲ್ಲಿ ಯಥೇಷ್ಟವಾಗಿ ಬಂಜರು ಬಿದ್ದಿದ್ದ ಭೂಮಿಯನ್ನು ಮಿಶ್ಯನೆರಿಗಳು ಸರಕಾರದಿಂದ ದರಖಾಸ್ತಿಗೆ ಮತ್ತು ಕ್ರಯಕ್ಕೆ ಸಹ ಪಡಕೊಂಡರು. ಗದ್ದೆ ಹೊಲಗಳಿದ್ದ ಭೂಮಿಯನ್ನು ಸಾಗುವಳಿ ಮಾಡುವಂತೆ ಕೊಟ್ಟರು. ನಮ್ಮ ಜಿಲ್ಲೆಯಲ್ಲಿರುವ ಕೈಸ್ತರು ಅಧಿಕವಾಗಿ ಬಾಸೆಲ್ ಮಿಶ್ಯನಿನ ಮೂಲಗೇಣಿ ಒಕ್ಕಲುಗಳಾಗಿರುವರು. ಬಾಸೆಲ್ ಮಿಶ್ಯನೆರಿಗಳು ಭೂಮಿಯನ್ನು ಕೊಂಡುಕೊಂಡು, ತಮ್ಮನ್ನಾಶ್ರಯಿಸಿದ ಕ್ರಿಸ್ತೀಯರಿಗೆ ಉದಾರಚಿತ್ತದಿಂದ ಬರಿಯ ಅಲ್ಪ ಮೂಲಗೇಣಿಗೆ ನೆಲವನ್ನು ಕೊಟ್ಟು ನೆಲೆಗೊಳ್ಳುವಂತೆ ಮಾಡಿದುದೇ ಆ ಪುಣ್ಯಕಾರ್ಯವು. ಹೀಗೆ ಮಾಡದಿರುತಿದ್ದರೆ ಕೈಸ್ತರೆಲ್ಲರೂ ಈಗ ಕಂಡವರ ಮನೆಬಾಗಿಲಲ್ಲಿ ಬಿದ್ದು ಅಥವಾ ಗಂಡು ಬಿಡಾರ ಮಾಡಿಕೊಂಡು ಇರಬೇಕಾಗಿದ್ದಿತು. ಹೀಗಿರದೆ ಪ್ರತಿ ಒಬ್ಬ ಕೈಸ್ತನು ಸ್ವಾಸ್ತಿಯುಳ್ಳವನಂತೆ ಮನೆಮಾರು ಮಾಡಿಕೊಂಡು ಸುಖವಾಸಿಯಾಗಿರಬೇಕೆಂದು ಸುಹೃದಯಿಗಳಾದ ಬಾಸೆಲ್ ಮಿಶ್ಯನೆರಿಗಳು ಏರ್ಪಡಿಸಿದರು.

ಹೀಗೆ ಸರ್ವ ಬಗೆಯ ದೃಷ್ಟಿಯಿಂದ ಬಾಸೆಲ್ ಮಿಶ್ಯನು ಅತ್ಯಲ್ಪ ಪ್ರಮಾಣದಿಂದ ಬಹಳ ಪ್ರಯಾಸಪಟ್ಟು, ಕಷ್ಟನಷ್ಟಗಳೊಡನೆ ಪ್ರಾರಂಭಿಸಿದ ಶಿಕ್ಷಣಾದಿಯಾದ ವಿವಿಧ ಕೈಗಾರಿಕೆ ಉದ್ದಿಮೆಗಳು, ಅವುಗಳ ವ್ಯವಸ್ಥಾಪಕರಾದ ಬಾಸೆಲ್ ಮಿಶ್ಯನೆರಿಗಳ ನಿಸ್ವಾರ್ಥ ಸಾಹಸದಿಂದ ಅಧಿಕಾಧಿಕವಾಗಿ ಮಿಗಿಲೆನಿಸಿ, ನವಸುಧಾರಣೆಯ ಈ ಕಾಲಕ್ಕೆ ತಕ್ಕಂತೆ ಉನ್ನತಾವಸ್ಥೆಯನ್ನು ತಳೆದಿರುವುದನ್ನು ನೋಡಿದರೆ ಮಹದಾನಂದವಾಗದಿರದು. ಈ ಕೈಗಾರಿಕೆ ಪ್ರವೃತ್ತಿಯನ್ನು ಕಲ್ಪಿಸಿಕೊಟ್ಟುದರಿಂದ ಕೈಸ್ತರಲ್ಲಿ ಭಿಕ್ಷಾವೃತ್ತಿ ಮಾಡುವವರೇ ಇಲ್ಲದಂತಾದರು. ಕೈಸ್ತೇತರರಿಗೂ ಸ್ವತಂತ್ರಜೀವನವೃತ್ತಿಯನ್ನೆ ಅವಲಂಬಿಸಿಕೊಳ್ಳುವಂತಾಯಿತು. ನಮ್ಮ ಸೀಮೆಗಂತೂ, ಹೆಚ್ಚೇಕೆ? ನಮ್ಮ ದೇಶಕ್ಕನೇ ಲೌಕಿಕ ಮತ್ತು ಪಾರಮಾರ್ಥಿಕ ಕಲ್ಯಾಣವು ಉಂಟಾಗಿದೆ ಎಂಬುದನ್ನು

ಸರ್ವರೂ ಮನಗಂಡಿರುವಲ್ಲಿ, ಈ ಕುರಿತು ತಿರಿಗಿ ಪ್ರತ್ಯೇಕ ವಾಗಿ ಕೂಲಂಕಷ ವರ್ಣನೆ ಮಾಡಲಗತ್ಯವಿರದು.

ಈ ಪರಿಯಿಂದ ಪೂಜ್ಯತೆಗೊಂಡ ಬಾಸೆಲ್ ಮಿಶ್ಯನು ದೇವರ ಸಂಬಂಧವಾಗಿರುವ ಕ್ರೈಸ್ತಧರ್ಮಪ್ರಸಾರಣ ಕಾರ್ಯವನ್ನು ಕೈಕೊಂಡು ಧಾರ್ಮಿಕ ಕರ್ತವ್ಯವನ್ನು ಮಾಡಿ ಕೃತಾರ್ಥವೆನಿಸಿತು. ತಾಯಿತಂದೆಗಳು, ಗುರು ಹಿರಿಯರು, ವರ್ತಕವ್ಯಾಪಾರಸ್ಥರು ಇವರೊಡನೆ ವರ್ತಿಸುವ ವ್ಯವಹಾರಾದಿ ಕಾರ್ಯಗಳನ್ನು ನಿಷ್ಕಾಮ್ಯ ಪ್ರೇಮದಿಂದ ತೋರಿ, ಶಿಕ್ಷಣ, ಕೈಗಾರಿಕೆ, ಉದ್ಯೋಗಾದಿಗಳನ್ನು ಕಲ್ಪಿಸಿಕೊಟ್ಟು, ಅವನ್ನು ಪ್ರಾಮಾಣಿಕತೆಯಿಂದಲೂ, ದಯೆಯಿಂದಲೂ ನಿರ್ವಹಿಸುವಂತೆ ಯತ್ನಿಸಿ, ಸಾಮಾಜಿಕ ಕರ್ತವ್ಯಗಳನ್ನು ಪೂರೈಸಿಕೊಂಡಿತು. ರಾಜಾಂಗವು ಪ್ರಜೆಗಳ ಕಡೆಗೆ ಇರುವ ತನ್ನ ಋಣ ಮತ್ತು ಧರ್ಮವನ್ನರಿತು ಕಲ್ಪಿಸಿಕೊಡಬೇಕಾಗಿದ್ದ ಸಾಂಪತ್ತಿಕ ಸ್ಥಿತಿಯುಕ್ತವಾದ ಸ್ವಾತಂತ್ರ್ಯಪರವಾದ ಸರ್ವ ಸುಖ ಸೌಕರ್ಯವುಳ ಪ್ರವೃತ್ತಿಗಳನ್ನೊದಗಿಸಿಕೊಟ್ಟು, ತನ್ಮೂಲಕ ತನ್ನ ರಾಜನಿಷ್ಠೆಯನ್ನು ಬೀರಿ, ರಾಜಕೀಯ ಕರ್ತವ್ಯಾಂಶಗಳನ್ನು ಸಹ ಶ್ರದ್ಧೆಯಿಂದ ತ್ರಿಕರಣಪೂರ್ವಕವಾಗಿ ಮಾಡಿ ಧನ್ಯವೆನಿಸಿದುದರಿಂದ, ಜಗತ್ಪ್ರಸಿದ್ಧಗೊಂಡು ಲೋಕೋತ್ತರವಾದ ಅನಂತ ಸತ್ಕೀರ್ತಿಗೆ ಪಾತ್ರವಾಗಿ—ಧೀರಾಗ್ರೇಸರನಂತೆ ಶೋಭಿಸುವುದಾಯಿತು.

ಎಡರಡಸುವುದೆಂದಂಜುತೆ |
ತೊಡಗರ್ ಕಾರ್ಯವನೆ ನೀಚರೆಡರಡಸಲೊಡಂ |
ಬಿಡುವರ್ ಮಧ್ಯಮರೆಡರೆನಿ |
ತಡಸಿದೊಡಂ | ತ್ಯಜಿಸರಾಂತ ಕೃತ್ಯವ ಧೀರರ್ || - ||

---

## ಕನ್ನಡ ನಾಡಿನ ಹಾಡುಗಳು.

ಲೇಖಕ:—ಶ್ರೀ. ಗುಲ್ವಾಡಿ ಅಣ್ಣಾಜಿರಾವ್, ಬಿ. ಎ., ಎಲ್‌ಎಲ್. ಬಿ., ಮುಂಬಯಿ.

ನಮ್ಮೂರ ನಮ್ಮೂರ ನಮ್ಮೂರ ಬಿಡಬ್ಯಾಡಿ |
ಹೊರವೂರ ಹೊರವೂರ ಹೊರವೂರ ಬಿಡಿಯೋಡೀ[1] |
|| ಪಲ್ಲ ||

ಹೊನ್ನೂರ ಚಿನ್ನೂರ ಮುದ್ದೂರ ಬಿಡಬ್ಯಾಡಿ |
ಚಂದೂರ ರನ್ನೂರ ಹೊನ್ನೂರ ಬಿಡಬ್ಯಾಡೀ || ಅನುಪಲ್ಲ ||

ಒಂದು ಕೈಲಿ ಪಾಗಾರಾ | ಒಂದು ಕೈಲಿ ಸಾಗಾರಾ[2]
ಮುಂದಾರು ನಿಂತಾರು ಚಂದಾದ ನಮ್ಮೂರ || ನಮ್ಮೂರ || ೧ ||

ಗಟ್ಟದ ಮೇಲೆ ಬೆಟ್ಟಾಮಾಡಿ[3] ಬೈಲಮೇಲೆ ಸಾಗಾಮಾಡಿ[4]
ಸಾಗರಾದಿ ಹಡಗಾ ಬಿಟ್ರೆ ಸಡಗರಾದಿ ರಾಜಾಲಕ್ಷ್ಮಿ[5].
|| ನಮ್ಮೂರ || ೨ ||

ತೆಂಗೀನೆತ್ರಾ ಛತ್ರಾವೈತೆ[6] | ಹಿಂಗಾರೆಂಬಾ ಚಾಮರ ಐತೆ![7]
ಅಂಗಳಾದಿ[8] ಕಂಬಳಾ ಹೊತ್ತು ಕಟ್ಟೇನಮ್ಮಾ ಗದ್ದುಗೇ!
|| ನಮ್ಮೂರ || ೩ ||

ಬೋಟೀಹತ್ತೀ ಹುಡುಕುತ ಬುತ್ತೀ ಊರಿಂದೂರಾ ಗರಗರ ಸುತ್ತೀ
ಕಲ್ಪಾವೃಕ್ಷದ ತಾವಾ ಬಿಟ್ಟೀ[9] | ಅಲ್ಪಾ ದೇಶದಿ ಯಾಕೋ ಸತ್ತೀ. || ನಮ್ಮೂರ || ೪ ||

---

1) ಪರದೇಶಗಳಿಗೆ ಹೋಗುವ ಛಲವನ್ನು ಬಿಡಿರಿ.

2) ಒಂದು ಕೈಯಲ್ಲಿ ಸಹ್ಯಾದ್ರಿಯ ಪ್ರಾಕಾರವಿದೆ.—ರಕ್ಷಣೆಗೆ ಇನ್ನೊಂದು ಕೈಯಲ್ಲಿ ಸಾಗರವಿದೆ. ಇಂಥಾ ನಮ್ಮ ದೇಶಕ್ಕೆ ಸರಿಯಾದ ದೇಶವು ಯಾವುದು?

3) "ಬೆಟ್ಟಾ" ಮಾಡುವದೆಂದರೆ ಅಡಿಕೆ ವ ಇತರ ತೋಟಗಳ ಕೃಷಿಗೆ ಉತ್ತರ ಕನ ಡ ಜಿಲ್ಲೆಯಲ್ಲಿ ಅನ್ನುತ್ತಾರೆ.

4) ಸಾಗುಮಾಡುವದೆಂದರೆ ಬೈಲುಗದ್ದೆಗಳಲ್ಲಿ ಭತ್ತ ಇತ್ಯಾದಿಗಳ ಪೈರು ಕೃಷಿಗೆ ಅನ್ನುತ್ತಾರೆ.

5) ಸಮುದ್ರದಲ್ಲಿ ಹಡಗುಗಳನ್ನು ಬಿಟ್ಟು ವ್ಯಾಪಾರ ವೃದ್ಧಿಗೊಳಿಸಿದರೆ ತನ್ನಿಂದ ತಾನೆ ರಾಜ್ಯಲಕ್ಷ್ಮಿ ಪ್ರಸನ್ನಳಾಗುತ್ತಾಳೆ.

6) ಎತ್ತರವಾದ ತೆಂಗಿನಮರವೇ.

7) ಛತ್ರವಾಗಿ, ಹಿಂಗಾರಹೂವೇ ಚಾಮರವಾಗಿ.

8) ಅಂಗಳದಲ್ಲಿ "ಕಂಬಳ" ನೆರೆಯುವ ಹೊತ್ತು ಕೂತುಕೊಳ್ಳುವ ಕಟ್ಟೆಯೇ ಗದ್ದುಗೆಯೆಂದರೆ ಸಿಂಹಾಸನ.

9) "ಕಲ್ಪವೃಕ್ಷದ ತಾವು (ತವರುಮನೆ) ಆದ ಕಾನಡಾ ಜಿಲ್ಲೆಯನ್ನು ಬಿಟ್ಟು, ಅಲ್ಪವಾದ ಮಿಕ್ಕ ದೇಶಗಳಿಗೆ ಹೋಗಿ" ಎಂಬರ್ಥ.

PRINTED AT THE KANARESE MISSION PRESS AND BOOK DEPOT, MANGALORE.

# ಅಲೆಯೂರು ಶಾಲೆಯ ವರ್ಷಾವಧಿ ಪರೀಕ್ಷೆ.

ಲೇಖಕ : ಶ್ರೀ ಉಳ್ಳಾಲ ಮಂಗೇಶ ರಾವ್, ಬಿ. ಏ, ಎಲ್. ಟಿ.

ನಾನು ಶಾಲೆಗಳ ಸಬ್‌ಅಸಿಸ್ಟಾಂಟ ಇನ್ಸ್‌ಪೆಕ್ಟರನಾಗಿ 'ಚಾರ್ಜು' ಪಡೆದು ಕೆಲವೇ ದಿನಗಳಾಗಿದ್ದುವು. ಅಲೆಯೂರು ಶಾಲೆಯ ವರ್ಷಾವಧಿ ಪರೀಕ್ಷೆಗೆ ಹೋಗಬೇಕಾಗಿ ಬಂತು. ಅಲೆಯೂರು ಉಡುಪಿಯಿಂದ ಕಾರ್ಕಳಕ್ಕೆ ಹೋಗುವ ದಾರಿಯಲ್ಲಿ ಉಡುಪಿಯಿಂದ ಸುಮಾರು 5 ಮೈಲು ದೂರ ಪದವಿನ ಮೇಲೆ ಇದೆ. ಮಧ್ಯಾಹ್ನದ ಬಿಸಿಲಿಗೆ ಉಡುಪಿಯಿಂದ ಹೊರಟು ಸುಮಾರು 2.30 ಗಂಟೆಗೆ ಶಾಲೆಯನ್ನು ನಾನು ಪ್ರವೇಶಿಸಿದೆನು. ಉಪಾಧ್ಯಾಯರು ನನ್ನನ್ನು ಆದಿನ ಹಾರೈಸಿಲ್ಲ. ಆದರೆ ನಾನು 'ಶಾಲೆಯ ರಾಯರು' ಎಂದು ನನ್ನೊಂದಿಗೆ ಬಂದ ಪೇದೆಯಿಂದ ಗೊತ್ತು ಹಚ್ಚಿ ಕುಳಿತ ಕುರ್ಚಿಯಿಂದ ಜಗ್ಗನೆದ್ದು, ಬಗ್ಗಿ ನಮಸ್ಕಾರ ಮಾಡಿ, ಕೆದರಿದ ತಲೆಕೂದಲನ್ನು ಸರಿಯಾಗಿ ಕಟ್ಟಿಕೊಂಡು, ಹೊದ್ದುಕೊಂಡ ಪಂಚೆಯನ್ನು ಸರಿಗೊಳಿಸಿದರು. ಮಕ್ಕಳೆಲ್ಲ ಎದ್ದು ನಿಂತು, ಉಪಾಧ್ಯಾಯರಂತೆ ನಮಸ್ಕರಿಸಿ, ತಂತಮ್ಮ ಸ್ಥಾನಗಳಲ್ಲಿ ಸುಮ್ಮನೆ ಕುಳಿತರು. ಸಾಮಾನ್ಯವಾಗಿ 'ಶಾಲೆಯ ರಾಯರು' ಬಂದಾಗ ಅವರನ್ನು ಸ್ವಾಗತ ಮಾಡಿ ಅರಚಿಕೊಳ್ಳುವ 'ನಮಸ್ಕಾರ ಮಾಡುವೆವಿಂದು ಬಾಲರು' ಎಂಬ ಹಾಡೂ ಕೇಳಿಸಲಿಲ್ಲ. ಮಕ್ಕಳ ಅಭಿನಯಗಳೂ ಕಾಣಿಸಲಿಲ್ಲ.

"ಏನು ಮಾಸ್ತರರೇ! ಮಕ್ಕಳಿಗೆ ಹಾಡುಗಳೇನೂ ಬರುವುದಿಲ್ಲವೆ"? ಎಂದು ನಾನು ಪ್ರಶ್ನಿಸಿದೆನು. ದಣಿದು ಶಾಲೆಯೊಳಗೆ ಬಂದಾಗ ತೀರಾ ಹೊಸಬರಿಗೆ ಈ ಹಾಡುಗಳು ಒಂದು ಬಗೆಯಲ್ಲಿ ಕರ್ಣಕಠೋರವಾಗಿ ಕೇಳಿಸಿದರೂ, ಅಭ್ಯಾಸ ಬಲದಿಂದ ನನಗೆ ಅಂಥ ಹಾಡುಗಳು ಹಾಯಾಗಿ ದಣುವನ್ನು ಪರಿಹಾರ ಮಾಡುತಿದ್ದುವು. ನನ್ನ ಪ್ರಶ್ನೆಗೆ ಉಪಾಧ್ಯಾಯರು ಉತ್ತರಕೊಡದೆ ಒಮ್ಮೆ ಪೇದೆಯ ಮುಖವನ್ನೂ ಇನ್ನೊಮ್ಮೆ ನನ್ನ ಮುಖವನ್ನೂ ನೋಡುತ್ತ ಮೇಜಿನ ಮೇಲೆ ಕೈ ಇಟ್ಟು ಸುಮ್ಮನೆ ನಿಂತಿದ್ದರು. ನಾನು ಬರುವುದನ್ನು ಹಾರೈಸದೆ ಸಾಕಷ್ಟು ತಯಾರಿ ನಡೆಯದಿರಬಹುದು ಎಂದು ಭಾವಿಸಿ, ನನ್ನ ಪರೀಕ್ಷೆಯನ್ನು ಮುಗಿಸಿದೆನು. ಮಕ್ಕಳನ್ನು ಮನೆಗೆ ಹೋಗಲು ಅಪ್ಪಣೆ ಮಾಡಲಾಯಿತು. ಇನ್ಸ್‌ಪೆಕ್ಶನ್ 'ರಿಮಾರ್ಕ' ಬರೆಯ ಬೇಕಾದರೆ ಸ್ವಲ್ಪ ಕಾಫಿಯನ್ನು ಕುಡಿದು, ಸಿಗರೇಟ ಸೇದಿ ಅನಂತರ ರಿಜಿಸ್ತ್ರಿಗಳನ್ನು ಮುಗುಚುವುದು ನನ್ನ ಕ್ರಮವಿತ್ತು. ಪೇದೆಯಿಂದ ಅದನ್ನು ತಿಳಿದು ಉಪಾಧ್ಯಾಯರು ಕಾಫಿಯನ್ನು ನೆರೆಯಲ್ಲಿರುವ ಒಬ್ಬ ಜಮೀನುದಾರರ ಮನೆಯಲ್ಲಿ ತಯಾರಿಸಿ ತಂದಿದ್ದರು. ಅದನ್ನು ಕುಡಿದ ಮೇಲೆ ಮೊದಲು ಮಾಡಿದ ಪ್ರಶ್ನೆಯನ್ನು ಇನ್ನೊಮ್ಮೆ ಕೇಳಿದೆನು. ಆಗ ಉಪಾಧ್ಯಾಯರು "ಸ್ವಾಮಿ! ನಾನು ಪದ್ಯಗಳನ್ನು ಇನ್ನು ಮುಂದೆ ಕಲಿಸುವುದಿಲ್ಲವೆಂದು ಘೋರ ಪ್ರತಿಜ್ಞೆ ಮಾಡಿದ್ದೇನೆ. ಕ್ಷಮಿಸ ಬೇಕು!" ಎಂದರು. ಇದರಲ್ಲಿ ಏನೋ ಗೂಢಾರ್ಥವಿದೆ ಎಂದು ಪೇದೆಯ ಮುಖಚಹರೆಯಿಂದ ನನಗೆ ತಿಳಿಯಿತು.

ಆಗ ನಾನು "ಉಪಾಧ್ಯಾಯರೇ! ಅಂಥ ಪ್ರತಿಜ್ಞೆಯನ್ನು ಮಾಡಲು ಕಾರಣವೇನು?"

ಶಾಲಾರಾಯರ ಇಂಗಿತವನ್ನು ತಿಳಿಯಬೇಕಾದರೆ ಸಾಮಾನ್ಯವಾಗಿ ಪೇದೆಯೇ ಮಧ್ಯಸ್ಥನು. ಉಪಾಧ್ಯಾಯರು ಇನ್ನೊಮ್ಮೆ ಪೇದೆಯ ಮುಖವನ್ನು ನೋಡಿದರು. ಪೇದೆಯು ನನ್ನ ಹಿಂದಕ್ಕೆ ಸರಿದು, ಕೈಯಿಂದ "ಹೇಳಿರಿ, ಭಯವಿಲ್ಲ" ಎಂದು ಸಂಜ್ಞೆ ಮಾಡಿದನು. ನಾನು ಫಕ್ಕನೆ ಕತ್ತನ್ನು ತಿರುಗಿಸಿದ್ದರಿಂದ ಅದು ಗೊತ್ತಾಗಿ ನಸುನಗೆ ಬಂತು. ಉಪಾಧ್ಯಾಯರು ತನ್ನ ಕಥೆಯನ್ನು ಹೀಗೆ ಹೇಳತೊಡಗಿದರು: —

"ಸ್ವಾಮಿ! ಕಳೆದ ವರ್ಷವೂ ಇದೇ ಕಾಲದಲ್ಲಿ ನಮ್ಮ ವರ್ಷಾವಧಿ ಪರೀಕ್ಷೆಯ ಸಮಯ. ಪರೀಕ್ಷೆಯ ನೋಟೀಸು ನನಗೆ ಬಂದಿತ್ತು. ಆದರೆ ಹಳೇ ರಾಯರು—ಅವರೇ ನನ್ನ ತಂದೆ—ನನ್ನ ಇಡೀ ಮನೆಯೇ ಅವರಿಂದಾದದ್ದು—ಅವರು ಇದ್ದಾಗ ವರ್ಷಾವಧಿ ಪರೀಕ್ಷೆಯ ದಿನಕ್ಕೆ ಎರಡು ದಿನ ಮುಂಚಿತವಾಗಿ ಪೇದೆಯನ್ನು ಕಳುಹಿಸುತ್ತಿದ್ದರು. ಹೀಗಾಗಿ

ಎಲ್ಲವನ್ನೂ ಸಿದ್ಧಮಾಡಿಕೊಂಡಿರಲು ಅವಕಾಶವಿರುತಿತ್ತು. ಕಳೆದ ವರ್ಷ ಅವರು ಮೂರು ತಿಂಗಳ ರಜೆ ಪಡೆದರು. ಅವರ ಬದಲಾಗಿ ಬಂದ ಹೊಸ ರಾಯರು—

ಇಲ್ಲಿ ಉಪಾಧ್ಯಾಯರು ತಡೆದು ಇನ್ನೊಮ್ಮೆ ಪೇದೆಯ ಕಡೆಗೂ ನನ್ನ ಕಡೆಗೂ ನೋಡಿದರು. "ಮುಂದರಿಸಿ, ಉಪಾಧ್ಯಾಯರೇ, ಭಯ ಬೇಡ" ಎಂದು ನಾನು ಇನ್ನೊಮ್ಮೆ ಹೇಳಿದೆನು. ಹಿಂದಿನಿಂದ ಪೇದೆಯೂ ಸಂಜ್ಞೆ ಮಾಡುತ್ತಲೇ ಇದ್ದನು.

"ಸ್ವಾಮಿ, ಹೊಸ ರಾಯರು ಬರುವಾಗಲೆ ನನಗೆ ಶನಿದಶೆ ಪ್ರಾರಂಭ. ಅವರು ನಿರ್ಣಯಿಸಿದ ತಾರೀಕಿಗೆನೆ ಪರೀಕ್ಷೆಗೆ ಬಂದು ಬಿಟ್ಟರು. ಆ ದಿನ ಉಡುಪಿಯ ಮಠದಲ್ಲಿ ದೊಡ್ಡ ಸಮಾರಾಧನೆ. ನನಗೆ ದಿನವಹಿ ಮಠದಲ್ಲಿ ಮಧ್ಯಾಹ್ನದ ಊಟ. ಅಂದೂ ಊಟ ತೀರಿಸುವಷ್ಟರಲ್ಲಿ ಈ ಪೇದೆಯು ಓಡಿ ಬಂದು "ರಾಯರು ಪರೀಕ್ಷೆಗೆ ಈಗಲೇ ಹೊರಟರು. ಬೇಗನೆ ಶಾಲೆಯ ಕಡೆಗೆ ಓಡಿರಿ. ನಾನು ನಿಮ್ಮ ಹಿಂದೆಯೇ ಇದ್ದೇನೆ" ಎಂದು ಹೇಳಿದನು. ಅವನು ಅಷ್ಟು ಹೇಳಿದ್ದೆ ತಡ, ನನಗೆ ತಲೆಗೆ ಸಿಡಿಲು ಬಡೆದಂತಾಯಿತು. ಗೋಡೆಗೆ ಸುಣ್ಣ ಬಳಿಯಿರೆಂದು ಮಕ್ಕಳಿಗೆ ಹೇಳಿ ನಾನು ಊಟಕ್ಕೆ ಬಂದಿದ್ದೆನು. "ಸುಣ್ಣ ಬಳಿಯಲಿಲ್ಲ, ಸೆಗಣಿ ಸಾರಿಸಲಿಲ್ಲ, ತೋರಣ ಕಟ್ಟಿಸಲಿಲ್ಲ; ರಾಯರು ಬಂದು ಏನು ಬಯ್ಯುವರೊ" ಎಂದು ನಾನು ಓಡ ತೊಡಗಿದೆನು. ಮಧ್ಯಾಹ್ನದ ಬಿಸಿಲಿನಲ್ಲಿ ಬಾಯಾರಿದರೆ ಕುಡಿಯಲಿಕ್ಕೆಂದು ಮಠದಿಂದ ಒಂದಿಷ್ಟು ಮಜ್ಜಿಗೆ ನೀರನ್ನು ನಾನು ಕೊಂಡು ಹೋಗುವ ವಾಡಿಕೆ. ಅದನ್ನು ಬಿಡಲಾರದೆ ಎತ್ತಿಕೊಂಡು ಒಳದಾರಿಯಿಂದ ಪದವು ಹತ್ತಿದೆನು. ಪೇದೆಯೂ ಕೆಲವು ಹೆಜ್ಜೆ ಹಿಂದೆಯೆ ಬರುತಿದ್ದನು— ನನ್ನೊಂದಿಗೆ ಬಂದನೆಂದು ತೋರಿಸಲಿಕ್ಕೆ ಅವನಿಗೆ ಮನಸ್ಸಿರಲಿಲ್ಲ. ಶಾಲೆಯನ್ನು ಸಮೀಪಿಸುವಷ್ಟರಲ್ಲಿ ಹೊಸ ರಾಯರು ಶಾಲೆಯ ಹೊರ ಜಗಲಿಯ ಮೇಲೆ ನಿಂತು 'ಮಾಸ್ತರರು ಇಲ್ಲವೆ?' ಎಂದು ಕೇಳಿದರಂತೆ, ನೆಲಗುಡಿಸುತಿದ್ದ ಹುಡುಗರು ಅವರ ಪರಿಚಯ ಸಿಗದೆ ಬಹಳ ಉದಾಸೀನದಿಂದ ಉತ್ತರ ಕೊಟ್ಟರಂತೆ. ಇದು ನನಗೆ ಅಂದಿನ ಸಾಯುಂಕಾಲ ಗೊತ್ತಾಯಿತು. ರಾಯರನ್ನು ಕಂಡಾಗ ಹುಡುಗರು ಉದಾಸೀನವನ್ನು ತೋರಿಸಲಿಕ್ಕೂ ಕಾರಣವಿತ್ತು. ಅವರ ರುಮಾಲು ಬಿಚ್ಚಿ ಹೋಗಿ ಹೆಗಲ ಮೇಲೆ ಜೋಲುತಿತ್ತು. ಮೈ, ಕೈ, ಮೋರೆಗಳ ಮೇಲೆಲ್ಲ ಬೆವರಿನೊಂದಿಗೆ ಧೂಳು ನಿಂತಿತ್ತು. ಉಟ್ಟ ಬಟ್ಟೆಯೂ ಒಂದೆರಡು ಕಡೆಗಳಲ್ಲಿ ಧೂಳಿನಿಂದ ಮಲಿನವಾಗಿ ಸೈಕಲಿನಿಂದ ರಾಯರು ಬಿದ್ದಿರಬೇಕು ಎಂದು ಕಾಣುತಿತ್ತು."

"ಪೇದೆಯು ದೂರದಿಂದ ಅವರನ್ನು ಕಂಡು ಓಡುತ್ತ ಬಂದು ಒಬ್ಬಿಬ್ಬರನ್ನು ನೆರೆಯಲ್ಲಿರುವ ಮನೆಯಿಂದ ಒಂದು ಕೊಡಪಾನ ನೀರು ತರಲಿಕ್ಕೆಂದು ಅಟ್ಟಿದನು. ಅಷ್ಟರಲ್ಲಿ ಹೊಸ ರಾಯರನ್ನು ಕಂಡು ನಾನು ಬಗ್ಗಿ ನಮಸ್ಕಾರ ಮಾಡಿದೆನು. "ಪರೀಕ್ಷೆಯ ತಾರೀಕು ನಿಮಗೆ ಜ್ಞಾಪಕವಿರಲಿಲ್ಲವೇ?" ಎಂದು ಅವರು ಗದರಿಸಿದರು. ಅದನ್ನು ಕೇಳಿ "ಸ್ವಾಮಿ, ಮೊದಲಿನ ರಾಯರು ನಮಗೆ ಒಂದೆರಡು ದಿನ ಮುಂದಾಗಿ ಹೇಳಿಕಳುಹಿಸುತಿದ್ದರು. ಇದಲ್ಲದೆ ಈ ದಿನ ಮಠದಲ್ಲಿ ಸಮಾರಾಧನೆ ಊಟವಿತ್ತು" ಎಂದು ನಾನು ಮೆಲ್ಲಗೆ ಹೇಳಿದೆನು. ಅಷ್ಟರಲ್ಲಿ ಧೂಳುಮುಚ್ಚಿದ ಮೋರೆಯನ್ನು ತೊಳೆಯಲಿಕ್ಕೆಂದು "ಇಲ್ಲಿ ನೀರು ಇಲ್ಲವೆ?" ಎಂದು ರಾಯರು ಕೇಳಿದರು. ಆಗ ನಾನು ಕೈಯಲ್ಲಿರುವ ಮೊಸರಿನ ಪಾತ್ರೆಯನ್ನು ಕೆಳಗಿಟ್ಟು ಒಳಕ್ಕೆ ಅವಸರದಿಂದ ಹೋಗಿ ಅಲ್ಲಿದ್ದ ಕೊಡಪಾನವನ್ನು ಎತ್ತಿಕೊಂಡು ರಾಯರ ಮುಂದಿಟ್ಟೆನು. ಅವರು ನೀರನ್ನು ಕಣ್ಣಿಗೂ ಮೋರೆಗೂ ಚಿಮುಕಿಸಿದೊಡನೆ ಫಕ್ಕನೇ ಚೀರಿದರು. ಆಗ ಕೊಡಪಾನದೊಳಗೆ ನೋಡಲು ಅದರಲ್ಲಿ ಮಸಿ ಮತ್ತು ಸೆಗಣಿ ನೀರು ಬೆರಿಕೆ ಮಾಡಿಟ್ಟಿದ್ದರು ಎಂದು ನನಗೆ ಫಕ್ಕನೆ ಗೊತ್ತಾಯಿತು.

"ಸ್ವಾಮಿ! ಮೋಸವಾಯಿತು" ಎನ್ನುವಷ್ಟರಲ್ಲಿ ಶಾಲೆಯ ಹುಡುಗನು ಪೇದೆ ಹೇಳಿದ ಮೇರೆಗೆ ಒಂದು ಕೊಡಪಾನ ಶುದ್ಧ ನೀರನ್ನು ತಂದು ಕೊಟ್ಟದ್ದರಿಂದ, ಕೈಮೋರೆಗಳನ್ನು ಚೆನ್ನಾಗಿ ತೊಳೆದುಕೊಂಡು ರಾಯರು ಜಗಲಿ ಹತ್ತಿ, "ಕುಡಿಯಲು ಶುದ್ಧ ನೀರುಂಟೇ" ಎಂದು ಪ್ರಶ್ನಿಸಿದರು. "ಬಿಸಿಲಿನಲ್ಲಿ ದಣಿದು ಬಂದವರಿಗೆ ಬರೇ ನೀರಿಗಿಂತ ಮಜ್ಜಿಗೆ ನೀರು ವಾಸಿ! ಅದನ್ನು ತರಲೇ?" ಎಂದು ದೈನ್ಯದಿಂದ ಕೇಳಿದೆನು. ರಾಯರು ಹೂಂಕುಟ್ಟಿದರಿಂದ ಒಬ್ಬ ಹುಡುಗನನ್ನು ಕರೆದು "ಇಗೊ ಅಪ್ಪಾ! ಒಳಗೆ ಪಾತ್ರೆಯಲ್ಲಿ ಮಜ್ಜಿಗೆ

ನೀರೂ ಅದರೊತ್ತಿಗೆ ಒಂದು ಪಂಚಪಾತ್ರೆಯೂ ಇವೆ. ಆ ಪಂಚಪಾತ್ರೆಯಲ್ಲಿ ಮಜ್ಜಿಗೆ ನೀರನ್ನು ತಾ" ಎಂದು ಒಳಕ್ಕೆ ಕಳುಹಿಸಿದೆನು.

ಹುಡುಗನು ತಂದ ಮಜ್ಜಿಗೆ ನೀರನ್ನು ರಾಯರು ಬಾಯಿಯಲ್ಲಿ ಸುರಿಸಿದೊಡನೆ "ಇದೇನಿದು ? ಥೂ ! ಥೂ!" ಎಂದು ಉಗುಳಿಬಿಟ್ಟು, ಕಣ್ಣು ಕೆಂಪಗೆ ಮಾಡಿದರು. ಆಗ ನಾನು ಒಳಕ್ಕೆ ಓಡಿಹೋಗಿ ನೋಡಿದೆನು. ಹುಡುಗನು ತಂದುದು ಮಜ್ಜಿಗೆ ನೀರು ಅಲ್ಲ, ಅದರೊತ್ತಿಗೆ ಇದ್ದ ಸುಣ್ಣದ ನೀರಿನ 'ಬ್ರಶ್ಶ'ನ್ನು ಮುಳುಗಿಸಿದ ತಂಬಿಗೆಯಿಂದ ತಂದ ನೀರು ಎಂದು ಕಳವಳಪಟ್ಟು ಮಜ್ಜಿಗೆ ನೀರನ್ನು ನಾನೇ ತಂದು ಕೊಟ್ಟೆನು.

ದಾಹಶಾಂತಿಯಾದ ಮೇಲೆ ರಾಯರು ಅಂದೇ ಪರೀಕ್ಷೆ ಮುಗಿಸಿ ಹೋಗುತ್ತೇನೆಂದು ಹೇಳಿದರು. ಗೈರಹಾಜರಾದ ಹುಡುಗರನ್ನು ಕರೆಯಿಸಲಿಕ್ಕೂ ಸಮಯವಿದ್ದಿಲ್ಲ. ರಾಯರು ಒಳಕ್ಕೆ ಹೋಗಿ ಶಾಲೆಯಲ್ಲಿರುವ ಒಂದು ಕುರ್ಚಿಯಲ್ಲಿ ಕುಳಿತೊಡನೆ ನೆಲಕ್ಕೆ ಉರುಳಿಯೇ ಬಿಟ್ಟರು. ಇದೊಂದು ನನ್ನ ಗ್ರಹಚಾರ. ನನ್ನ ಶಾಲೆಗೆ ಮಂಜೂರಾತಿಯ ಕಾಲದಲ್ಲಿ ಯಾರೊ ಉದಾರ ಮನಸ್ಸಿನಿಂದ ಒಂದು ಹಳೇ ಕುರ್ಚಿಯನ್ನು ದಯಪಾಲಿಸಿದ್ದರು. ಅದರಲ್ಲಿ ಒಂದು ಕಾಲು ಹುಳ ಹಿಡಿದಿತ್ತು. ವರ್ಷಾವಧಿ ಪರೀಕ್ಷೆಯಕಾಲದಲ್ಲಿ ಒಂದು ಫರ್ಲಂಗು ದೂರದಲ್ಲಿರುವ ವರ್ಗದಾರ ಶಂಭಟ್ಟರ ಮನೆಯಲ್ಲಿಂದ ಒಂದು ಕುರ್ಚಿಯನ್ನು ತರಿಸುವುದು ವಾಡಿಕೆ. ಮೊದಲಿನ ರಾಯರು ಮೊದಲೇ ತಿಳಿಸಿ ಬರುವುದರಿಂದ ಹೀಗೆ ಸಾಹಿತ್ಯಗಳನ್ನು ಒದಗಿಸಲಿಕ್ಕೆ ಸಾಧ್ಯವಾಗುತಿತ್ತು. ಈ ಸರ್ತಿ ಅಂಥ ಅನುಕೂಲತೆ ನನಗೆ ಒದಗಲೇ ಇಲ್ಲ. ರಾಯರಿಗೆ ಹೇಗೂ ಕೈಕೊಟ್ಟು ಎತ್ತಿ ನಿಲ್ಲಿಸುವಷ್ಟರಲ್ಲಿ ಪೇದೇಯು ಕಳುಹಿಸಿದ ಹುಡುಗನು ಓಡಿಹೋಗಿ ಕುರ್ಚಿಯನ್ನು ತಂದನು. ರಾಯರು ಅದರಲ್ಲಿ ಕುಳಿತು ಪರೀಕ್ಷೆಯನ್ನು ಮಾಡತೊಡಗಿದರು.

ಅಂತು ಅಪಶಕುನಗಳು ಒಂದರ ಹಿಂದೆ ಒಂದಾಗಿ ಆಗುತಿದ್ದುದರಿಂದಲೂ ಹುಡುಗರ ಸಂಖ್ಯೆ ಕಡಿಮೆ ಇದ್ದುದರಿಂದಲೂ ಗ್ರೆಂಟಿನ ಸ್ಥಿತಿಯು ಏನಾದೀತೋ ಎಂದು ನನಗೆ ದಿಗಿಲು. ಆದರೂ ಮಕ್ಕಳಿಗೆ ಕಲಿಸಲಿಕ್ಕೆ ತೊಡಗಿದ್ದ ಅಭಿನವ (ಅಭಿನಯ?) ಗೀತ ಹಾಡಲು ಹೇಳಿದೆನು. ಹುಡುಗರು ಎದ್ದು ನಿಂತು

ನೀ ಮುಂದೆ ರಂಗಾ ನಾ ನಿನ್ನ ಹಿಂದೆ
ಎಂದೆಂದು ನಿನ್ನ ನಾಮವ ಎಂದೆಂಬ ॥ ಪಲ್ಲ ॥
ಅನಾಥ ನಾನು ಎನಗೆ ಬಂಧು ನೀನೂ ।
ದೀನನು ನಾನು ದಯಾವಂತನು ನೀನೂ ॥
ಧ್ಯಾನ ಮೂರುತಿ ನೀನು ಧ್ಯಾನಿಸುವವ ನಾನು
ಜ್ಞಾನಪುಂಜನು ನೀನು ಅಜ್ಞಾನಿ ನಾನು ॥
ತಂದೆ ಶ್ರೀರಂಗನಾಥನೆ ಶಾಲಾ ಜೊರೆಯೇ
ಬಂದಿಲ್ಲಿ ಗ್ರೆಂಟನ್ನು ಕೊಟ್ಟು ಪೊರೆಯೆನ್ನ ॥

ಎಂದು ಹಾಡಿದರು. ಮೊದಲಿನ ರಾಯರ ಹೆಸರು ರಂಗನಾಥರಾಯರು. ಈ ಪದ್ಯವನ್ನು ಪುರಂದರ ದಾಸರ ಪದ್ಯಗಳಿಂದ ಬೇಕು ಬೇಕಾದಂತೆ ತಿದ್ದುಪಡಿ ಮಾಡಿದ್ದೆನು. "ಕಾಯಂ ರಾಯರ ಮೇಲೆ ಮಾಡಿದ ಪದವೇನೊ!" ಎಂದು ಹೊಸ ರಾಯರು ಕೇಳಿ ನಸುನಕ್ಕರು. ಆಗ ನಾನು ಸ್ವಲ್ಪ ಹಿಗ್ಗಿ ಹುಡುಗರಿಗೆ ಇನ್ನೊಂದು ಹಾಡನ್ನು ಹೇಳಲು ಪ್ರೋತ್ಸಾಹಿಸಿದೆನು. ಹುಡುಗರು

ದೀನ ನಾನು ಎಯ್ಡೆಡ್ ಶಾಲೆಗೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು, ಮಹಾಮಹಿಮ ಕೈವಲ್ಯಪತಿ ನೀನು ॥
ಏನ ಬಲ್ಲೆನು ನಾನು ನೆರೆಸು
ಜ್ಞಾನ ಮೂರುತಿ ನೀನು, ನಿನ್ನ ಸ
ಮಾನರುಂಟೆ ರಾಯ ರಕ್ಷಿಸು ನಮ್ಮನನವರತಾ ॥

ಇದನ್ನು ಕೇಳಿದೊಡನೆ ಹೊಸ ರಾಯರ ಮುಖ ಕೆಂಪಗಾಯಿತು. "ನಿಮ್ಮ ಕಾವ್ಯ ರಚನೆಯ ಸಾಮರ್ಥ್ಯ ಸಾಕು ಮಾಡಿ. ಪಾಠಪುಸ್ತಕದಲ್ಲಿ ಏನಾದರೂ ಕಲಿಸಿರುವಿರಾ?" ಎಂದು ಕೇಳಿದರು. ಹೀಗೆ ಅವರು ಸಿಟ್ಟಾಗಲಿಕ್ಕೆ ಕಾರಣ ಗೊತ್ತಾಗದೆ ಮಕ್ಕಳನ್ನು ಕರೆದು—ಅಲ್ಲಿ ಏಳು ಮಕ್ಕಳು ಮಾತ್ರ ಇದ್ದರು—ಒಬ್ಬೊಬ್ಬರಿಗೆ ಒಂದೊಂದು ಚರಣವನ್ನು ಹಾಡುವಂತೆ ಹೇಳಿದೆನು. ಅವರು ಎದ್ದು ನಿಂತು

ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ
ನಂಟರಿಗೆ ಸಾಲವನು ಕೊಡುವಾತನೆ ಮೂರ್ಖ ॥
ಗಂಟನೊಬ್ಬರ ಕೈಯಲಿಡುವಾತನೆ ಮೂರ್ಖ
ಉಂಟು ಮಾಡಿದವನ ಮರೆವವನೆ ಮೂರ್ಖ ॥
ಪಡೆದ ಮಗಳನು ಹಣಕೆ ಮಾರುವವ ಮೂರ್ಖ
ಮಡದಿ ಹುಟ್ಟಿದ ಮನೆಯೊಳಿರುವಾತ ಮೂರ್ಖ ॥

ಅದನ್ನು ಕೇಳಿದೊಡನೆ ಹೊಸರಾಯರು ಫಕ್ಕನೆ ಕುರ್ಚಿಯಿಂದ ಎದ್ದು "ಸಾಕು ಮಾಡಿ ನಿಮ್ಮ ಪದ್ಯ.

ಇನ್ಸ್‌ಪೆಕ್ಟನ್ ಪುಸ್ತಕ ಕೊಡಿ!" ಎಂದು ಕಣ್ಣು ಕೆರಳಿಸ ತೊಡಗಿದರು. ಅವರ ತುಟಿಗಳು ಅದುರುತಿದ್ದುವು. ಕೈನಡುಗುತಿತ್ತು. ಆದರೂ ನಾನು "ಸ್ವಾಮಿಾ! ಗಣಿತ, ಸೃಷ್ಟಿಜ್ಞಾನ, ಪ್ರಬಂಧ ಮುಂತಾದವುಗಳಲ್ಲಿ ಪರೀಕ್ಷೆ ಆಗಲಿಲ್ಲವಲ್ಲ! ಎಂದು ಗದ್ಗದ ಸ್ವರದಿಂದ ಕೇಳಿದೆನು. "ಅದೇನೂ ಬೇಡ, ಈ ಏಳು ಹುಡುಗರಿಗೆ ಏನೆಂದು ಪರೀಕ್ಷೆ ಮಾಡಲಿ!" ಎಂದು ನನ್ನ ಕೈಯಿಂದ ಇನ್ಸ್‌ಪೆಕ್ಶನ್ ಪುಸ್ತಕವನ್ನು ಕಿತ್ತುಕೊಂಡು ಅದರಲ್ಲೇನೊ ಬರೆದು ಶಾಲೆಯಿಂದ ಇಳಿದು ಹೋದರು. ನಾನು ಬಗ್ಗಿ ನಮಸ್ಕಾರ ಮಾಡಿದ್ದು ಸಹ ಅವರ ಕಣ್ಣಿಗೆ ಗೋಚರಿಸಲಿಲ್ಲ.

ಇನ್ಸ್‌ಪೆಕ್ಷನ್ ಪುಸ್ತಕದಲ್ಲಿ ಹೀಗೆ ಬರೆದಿತ್ತು. "ಶಾಲೆಯಲ್ಲಿ 7 ಮಕ್ಕಳು ಮಾತ್ರವಿದ್ದರು. ನೋಟೀಸು ಕೊಟ್ಟಿದ್ದರೂ ಹೊತ್ತಿಗೆ ಸರಿಯಾಗಿ ಉಪಾಧ್ಯಾಯರು ಕೂಡಾ ಬಂದಿಲ್ಲ. ಕೆಲವು ಹೊಲಸು ಪದ್ಯಗಳನ್ನು ಮಾತ್ರವಲ್ಲದೆ ಬೇರೆ ಏನು ಮಕ್ಕಳಿಗೆ ಕಲಿಸಿದ್ದಾರೆ ಎಂಬದನ್ನು ಪರೀಕ್ಷಿಸಲಿಕ್ಕೆ ಮಕ್ಕಳು ತೀರಾ ಕಡಿಮೆ ಇದ್ದುದರಿಂದ ಸಾಧ್ಯವಾಗದೆ ಹೋಯಿತು. ಕಟ್ಟೋಣಕ್ಕೆ ಸುಣ್ಣ ಬಳಿಯಲಿಲ್ಲ. ನೆಲವನ್ನು ಗುಡಿಸಿ ಸಾರಿಸದೆ, ಕೊಳೆ ತಿಪ್ಪೆ ತುಂಬಿ ನೋಟಕ್ಕೆ ಅಸಹ್ಯವಾಗಿತ್ತು. ಇಂಥ ನಿಕೃಷ್ಟ ಸ್ಥಿತಿಯಲ್ಲಿರುವ ಶಾಲೆಯನ್ನು ಗ್ರೆಂಟು ಪಟ್ಟಿಯಿಂದ ಏತಕ್ಕೆ ತೆಗೆದು ಹಾಕಬಾರದೆಂದು ಇಂದಿನಿಂದ 8 ದಿನಗಳೊಳಗೆ ಸಮರ್ಪಕವಾದ ಉದಾಹರಣೆಯನ್ನು ಕೊಡದಿದ್ದರೆ ಶಾಲೆಯ ಮಂಜೂರಾತಿಯನ್ನು ರದ್ದು ಪಡಿಸಲು ಶಿಫಾರಸು ಮಾಡಲಾಗುವುದು."

ಇದನ್ನು ಓದಿ ನೋಡಿ ನನ್ನ ಶಾಲೆಯ ಭವಿಷ್ಯವು ಅಂದಿಗೆ ಮುಗಿಯಿತೆಂದು ನೆನಸಿದೆನು. ಆದರೆ ಹೊಸ ರಾಯರಿಗೆ ಒಂದರ ಮೇಲೆ ಒಂದಾಗಿ ಸಿಟ್ಟು ಹೆಚ್ಚಾಗಲು ನಾನು ಮಾಡಿದ ತಪ್ಪೇನು ಎಂದು ಮಾತ್ರ ನನಗೆ ತಿಳಿಯಲಿಲ್ಲ. ನನ್ನ ಶಾಲೆಯಂಥ ಹಲವು ಶಾಲೆಗಳು ಇದೇ ರೀತಿಯಲ್ಲಿ ಕೆಲಸ ಮಾಡಿ ಉಪಾಧ್ಯಾಯರ ಜೀವನವನ್ನು ಸಾಗಿಸಿ ಕೊಡುತ್ತಿರುವಾಗ ನನಗೆ ಹಿಡಿದ ಶನಿದಶೆಯೆ ಈ ರೀತಿಯಾಗಿ ನನ್ನ ದುರವಸ್ಥೆಗೆ ಕಾರಣವಾಯಿತೆಂದು ಭಾವಿಸಿ, ಶಾಲೆಯನ್ನು ಮುಚ್ಚಿ ಮನೆಗೆ ಹೋದೆನು."

"ಉಪಾಧ್ಯಾಯರೇ! ನಿಮ್ಮ ಶಾಲೆಯು ಅನಂತರ ಉಳಿಯಲು ಹೇಗೆ ಉಪಾಯ ಮಾಡಿದಿರಿ?" ಎಂದು ನಾನು ಕೇಳಿದೆನು. ಆಗ ಉಪಾಧ್ಯಾಯರು "ಸ್ವಾಮಿಾ! ನನ್ನ ಮೊದಲಿನ ರಾಯರು—ಅವರೇ ನನ್ನ ತಂದೆ, ನನ್ನ ತಾಯಿ—ನನ್ನ ಸರ್ವಸ್ವವೂ ಅವರವೇ ಎಂದು ಭಾವಿಸಿದ್ದೇನೆ—ಅವರು ಎರಡು ತಿಂಗಳಲ್ಲಿಯೇ ಪುನಃ ಬಂದರು. ಅವರಿಗೆ ಕಾಲು ಹಿಡಿದು ನನ್ನ ಸ್ಥಿತಿಯನ್ನು ಅತ್ತು ಹೇಳಿಕೊಂಡೆ. ಆಗ ಅವರು ನನ್ನ ಮೇಲೆ ಕನಿಕರ ಪಟ್ಟು ನನಗೆ ಸೇಕಡಾ 25ರಂತೆ ಮಾತ್ರ ಗ್ರೇಂಟು ತಗ್ಗಿಸುವಂತೆ ಶಿಫಾರಸು ಮಾಡಿ ಉಳಿಸಿದರು. ಅಂದಿನಿಂದ ಕಾವ್ಯ ಮಾಡುವುದೂ ಪದ್ಯಗಳನ್ನು ಮಕ್ಕಳಿಂದ ಹಾಡಿಸುವುದೂ ಎಂದೆಂದಿಗೂ ಸಲ್ಲದು ಎಂದು ಘೋರ ಪ್ರತಿಜ್ಞೆ ಮಾಡಿದೆನು."

ಪರೀಕ್ಷೆ ಮುಗಿಸಿ ಊರಿಗೆ ಬಂದೊಡನೆ ಈ ಪದ್ಯಗಳು 'ಹೊಸ ರಾಯರಿಗೆ' ರೇಗಿಸಿದ ಕಾರಣ ಶೋಧೆ ಮಾಡಲು ತೊಡಗಿದೆನು. 'ಅವರ ಹೆಸರು ಮೂರ್ತಪ್ಪಯ್ಯ' ಅವರು ಮುದಿ ತಂದೆಯನ್ನು ತನ್ನ ಮನೆಯಲ್ಲಿರಿಸಿ ಸಾಕುತ್ತಿರಲಿಲ್ಲ, ಅವರ ಹಿರೇ ಹೆಂಡತಿಯ ಹೆಸರು ಕೈವಲ್ಯೆ, ಅವಳ ಮೇಲೆ ಏನೋ ಅಪವಾದ ಬಿದ್ದುದರಿಂದ ಅವಳನ್ನು ಬಿಟ್ಟು ವೃದ್ಧಾಪ್ಯದಲ್ಲಿ ಎರಡನೆಯ ಮದುವೆಯನ್ನು ಮೂರ್ತಪ್ಪಯ್ಯ ಮಾಡಿಕೊಂಡಿದ್ದರು, ಹುಡುಗಿಯು ಅಪ್ರಾಯಸ್ಥಳಾಗಿದ್ದುದರಿಂದ ಮನೆಯ ವಿಚಾರವೆಲ್ಲ ಅವಳ ತಾಯಿಯೇ ನಡಿಸುತಿದ್ದಳು, ಅವಳ ತಮ್ಮನೊಬ್ಬನ ಮೂಲಕ 'ರಾಯರು' ನಡೆಸುತಿದ್ದ ಲೇವಾದೇವಿಯಲ್ಲಿ ಆತನು ಪ್ರೊಮಿಸರಿ ನೋಟುಗಳನ್ನು ತನ್ನ ಹೆಸರಿನಲ್ಲಿ ಬರೆಸಿಕೊಂಡು, ಹೇಳದೆ ಕೇಳದೆ ದೂರ ದೇಶಕ್ಕೆ ಓಡಿ ಹೋದನು, ಎಂದು ತಿಳಿದು ಬಂತು. ಹೊಸ ರಾಯರು ಸಿಟ್ಟಿಗೆದ್ದ ಕಾರಣವು ಈಗ ಗೊತ್ತಾಯಿತು.





**The Rt. Rev. Dr. N. M. Pagani, S. J.**
*The First Bishop of Mangalore*



**The Rt. Rev. Dr. Paul Perini, S. J.**
*The 3rd Bishop and the present Administrator Apostolic of Mangalore.*

# ಕನ್ನಡ ಜಿಲ್ಲೆಯಲ್ಲಿ ಕೊಂಕಣಿ ಕ್ರೈಸ್ತರು.

ಶ್ರೀ। ಜೆರೊಮ್ ಎ. ಸಾಲ್ಡಾಂಞರು, ಬಿ. ಎ., ಎಲ್.ಎಲ್. ಬಿ., ಎಮ್. ಎಲ್. ಸಿ. ಇವರ ಲೇಖದ ಅನುವಾದ.

ಪೂರ್ವ ಖಂಡದ ಕಡಲು ತೀರಗಳಲ್ಲಿ ಒಂದು ಕಾಲದಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿದ ಪೊರ್ತುಗೀಸರ ಸಾಮ್ರಾಜ್ಯವೇ ಕನ್ನಡ ಜಿಲ್ಲೆಯಲ್ಲಿ ಕೊಂಕಣಿ ಕ್ರೈಸ್ತರ ಮೂಲವೆನ್ನ ಬಹುದು. ಕ್ರಿಸ್ತ ಶಕ 1453ರಲ್ಲಿ ಒಟೊಮಾನ್ ತುರ್ಕಿಯರು ಕೋನ್‌ಸ್ಟೆಂಟಿನೋಪಲನ್ನು ಹಿಡಿದು ಮುಂದೆ ಕೆಲವು ವರ್ಷಗಳಲ್ಲಿಯೇ ಯುರೋಪು ಖಂಡದ ನೈಋತ್ಯ ಭಾಗವನ್ನೂ ಸೈರಿಯಾ, ಇಜಿಪ್ಟ್ ದೇಶಗಳನ್ನೂ ಕೈವಶ ಮಾಡಿಕೊಂಡರು. ಮತ್ತು ಬಲವಾದ ಯುದ್ಧ ನಾವೆಗಳ ಮೂಲಕ ಬಂದು, ಕಡೆಯಲ್ಲಿ ಹಿಂದುಸ್ಥಾನವನ್ನು ಬಳಸಿಕೊಂಡಿರುವ ಸಮುದ್ರದ ಮೇಲೆಯೂ ಇಡೀ ಭೂಮಧ್ಯ ಸಮುದ್ರದ ಮೇಲೆಯೂ ತಮ್ಮ ಅಧಿಕಾರವನ್ನು ಸ್ಥಾಪಿಸಿದರು. ಈ ರೀತಿಯಲ್ಲಿ ಪಶ್ಚಿಮ ಖಂಡದಲ್ಲಿ ಬೇರೆ ಬೇರೆ ದೇಶಗಳನ್ನು ಆಕ್ರಮಿಸಿಕೊಂಡು ಬರುವ ಈ ಜನಾಂಗದ ಅಧಿಕಾರ ಪ್ರವಾಹವನ್ನು ಸ್ಪೈನ್ ಮತ್ತು ವೆನಿಸ್ ಮುಂತಾದ ಇಟೆಲಿ ದೇಶದ ಚಿಕ್ಕಪುಟ್ಟ ರಾಜ್ಯಗಳ ನೌಕಾಸೈನ್ಯವು ಜತೆಯಾಗಿ ಅಡ್ಡಕಟ್ಟ ಬಿಟ್ಟಿತು. ಅದೇ ಕಾಲದಲ್ಲಿ ಯೂರೋಪು ಖಂಡದ ಅತೀ ಪಶ್ಚಿಮ ಭಾಗದಲ್ಲಿ ಜನ್ಮವೆತ್ತಿದ ಒಂದು ಚಿಕ್ಕ ರಾಜ್ಯವು 'ಮೂರ್' ಜನಾಂಗದವರೊಡನೆ ಧರ್ಮರಕ್ಷಣೆಯ ಯುದ್ಧದಲ್ಲಿ ಜಯ ಹೊಂದಿ, ಆಯಿಬೀರಿಯನ್ ಪರ್ಯಾಯ ದ್ವೀಪದಲ್ಲಿ ನೆಲೆ ನಿಂತು; ಪೂರ್ವ ಖಂಡದ ಸಮುದ್ರಗಳಲ್ಲಿ ಮುಸಲ್ಮಾನರು ಬಲಕಾಯಿಸಿಕೊಂಡಿದ್ದ ಅಧಿಕಾರದ ಕಡೆಗೆ ತಮ್ಮ ದೃಷ್ಟಿಯನ್ನು ಪ್ರಸರಿಸಿ, ಮುಸಲ್ಮಾನ್ ಮತ್ತು ಕ್ರೈಸ್ತ ಜನಾಂಗಗಳಿಗೆ ಯೆರುಸಲೇಮನ್ನು ಕೈವಶ ಮಾಡಿಕೊಳ್ಳುವ ಬಗ್ಗೆ ಬಹಳ ಕಾಲದಿಂದಲೂ ಜರಗುತಿದ್ದ ಧರ್ಮರಕ್ಷಣೆಯ ಯುದ್ಧದಲ್ಲಿ ಮುಸಲ್ಮಾನ್ ರಾಜ್ಯಗಳ ಹಿಂದಿನಿಂದ ಬಂದು ಬೆನ್ನು ಮುರಿಯುವುದಕ್ಕೆ ಸೊಂಟ ಕಟ್ಟಿತು. ಈ ಪೋರ್ತುಗಲ್ ದೇಶದ ಜನಾಂಗವು ಯುರೋಪಿನ ಇತರ ಜನಾಂಗಗಳ ಪೈಕಿ ಅತೀ ಚಿಕ್ಕದು ಮತ್ತು ಸಾಕಷ್ಟು ಸಂಪತ್ತು ಇಲ್ಲದಿದ್ದು ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಸಮುದ್ರಗಳ ಮೇಲೆ ಓಡಾಡಿ, ತಮ್ಮ ಅಧಿಕಾರ ಸ್ಥಾಪನೆಯ ಕೆಲಸವನ್ನು ಹಚ್ಚಿಕೊಂಡಿತು. ಗತಿಸಿಹೋದ ಸರ್ ವಿಲ್ಲಿಯಮ್ ಹಂಟರ್ ಎಂಬವರು ತನ್ನ "ಬ್ರಿಟಿಷ್ ಇಂಡಿಯದ ಇತಿಹಾಸ" ಎಂಬ ಗ್ರಂಥದ ಪ್ರಥಮ ಸಂಚಿಕೆಯಲ್ಲಿ ಹೀಗೆಂದು ಸ್ಪಷ್ಟವಾಗಿ ಹೇಳಿದ್ದಾರೆ. "ಈ ಚಿಕ್ಕ ಧೀರರಾದ ಜನಾಂಗದ ಸಾಹಸವನ್ನು ನಮ್ಮ ಜನಾಂಗದ ಪ್ರಾಚೀನಕಾಲದ ಪ್ರಯತ್ನಗಳೊಂದಿಗೆ ಸರಿಹೋಲಿಸಿದಾಗ ಒಂದು ಮಹಾತ್ಮೆಯಂತಲೇ ಭಾವಿಸ ಬೇಕಾಗುತ್ತದೆ." ಧರ್ಮರಕ್ಷಣೆಯ ಯುದ್ಧದ ಉತ್ಸಾಹದಿಂದ ತುಂಬಿ ತುಳುಕುತಿದ್ದ ಈ ಜನಾಂಗವು ಆ ಕಾಲದಲ್ಲಿ 'ಮೂರ್ಸ್' ಎಂದು ಕರೆಯಲ್ಪಡುವ ಎಲ್ಲಾ ಮುಸಲ್ಮಾನರನ್ನೂ ಅವರೊಂದಿಗೆ ವ್ಯಾಪಾರವನ್ನು ನಡಿಸುತ್ತಿರುವ ಇತರರನ್ನೂ ಎಡೆಬಿಡದೆ ಅತೀ ಕ್ರೂರ ರೀತಿಯಿಂದ ಹಿಂದಟ್ಟಿಕೊಂಡು ಬಂದು, ಫಿನಿಷಿಯನ್ ಜನಾಂಗದವರೂ ಮಾಡಿದಂತೆ ಪ್ರತಿ ಮುಖ್ಯ ಬಂದರಿನಲ್ಲಿ ತಮ್ಮ ಮಳಿಗೆಗಳನ್ನು ಸ್ಥಾಪಿಸಿ, ದೇಶಿಯ ರಾಜ್ಯದೊಡನೆ ಒಪ್ಪಂದಗಳನ್ನು ಮಾಡಿಕೊಂಡಿತು. ಇಂಥಾ ರಾಜ್ಯಗಳಲ್ಲಿ ವ್ಯಾಪಾರ ಮಾಡುವ ಗುತ್ತೆಯನ್ನು ತಾವೇ ವಹಿಸಿಕೊಂಡು ಮೂರ್ ಜನಾಂಗದವರ ವ್ಯಾಪಾರ ವಹಿವಾಟುಗಳು ನಡೆಯದಂತೆ ತಡೆಕಟ್ಟಿದರು. ಈ ಕಾಲದ ಪೋರ್ತುಗೀಸರಿಗೆ ರಾಜ್ಯಾಕಾಂಕ್ಷೆಯು ಸ್ವಲ್ಪವಾದರೂ ಇರಲಿಲ್ಲ. ಆದರೆ ರೋಮನ್ ಕೆಥೊಲಿಕ್ ಮತಪ್ರಸಾರವನ್ನು ಎಲ್ಲೆಲ್ಲಿಯೂ ಮಾಡಬೇಕೆಂದು ಉತ್ಸಾಹ ಇತ್ತು. ಎಲ್ಲೆಲ್ಲಿ ಪೋರ್ತುಗೀಸ್ ನಾಯಕರು, ದಳವಾಯಿಗಳು, ತಮ್ಮ ರಾಷ್ಟ್ರದ ನಿಶಾನಿಯನ್ನು ನೆಟ್ಟರೊ ಅದರ ಹಿಂದೆಯೇ ಪೋರ್ತುಗೀಸ್ ಪಾದರಿಗಳು ಕ್ರೈಸ್ತಮತ ಪ್ರಚಾರದ ಧ್ವಜವನ್ನು ನೆಟ್ಟರು. ಮಳಿಗೆಗಳ ಸಾಲು ಹೆಚ್ಚಿದಂತೆ ಮತ

ಪ್ರಚಾರದ ಕಾರ್ಯವು ಕೈಬೀಸಿ ನಡೆಯಲಾರಂಭಿಸಿತು. ಮಳಿಗೆ ಮತ್ತು ಇಗರ್ಜಿ ಇವು ಕ್ರೈಸ್ತ ಮತದ ಕೇಂದ್ರಸ್ಥಾನಗಳಾದವು. ಕ್ರೈಸ್ತ ಪಾದರಿಗಳು ತಮ್ಮ ಮಳಿಗೆಗಳ ವ್ಯವಹಾರಕ್ಷೇತ್ರವನ್ನು ದಾಟಿ, ಒಳಪ್ರಾಂತ್ಯಗಳಲ್ಲಿಯೂ ತಮ್ಮ ಧರ್ಮ ಪ್ರಸಾರವನ್ನು ಮುಂದರಿಸಿದರು. ಆ ಕಾಲದಲ್ಲಿ ಇಂಥಾ ಕ್ರೈಸ್ತ ಮಿಶನುಗಳಿಗೆ ಏನೊಂದು ಬಾಧೆ ತಟ್ಟದಂತೆ ಪೋರ್ತುಗೀಸ್ ಸರಕಾರದವರು ದೇಶೀಯ ರಾಜರೊಡನೆ ಮಾಡುವ ಎಲ್ಲಾ ಒಪ್ಪಂದಗಳಲ್ಲಿ ಶರತ್ತುಗಳನ್ನು ಸೇರಿಸಿಕೊಂಡರು. ಈ ರೀತಿಯಲ್ಲಿ ವ್ಯಾಪಾರ ಮತ್ತು ಧರ್ಮಪ್ರಸಾರದ ಸಾಮ್ರಾಜ್ಯವನ್ನು ವಿಸ್ತರಿಸುವ ಆತ್ಮೋತ್ಕರ್ಷತೆಯ ಕಾರ್ಯಕ್ರಮವು ಅವರ ನಂತರ ಬ್ರಿಟಿಷರು ಕೈಕೊಂಡ ಕ್ರಮಕ್ಕೆ ತೀರಾ ಬೇರೆಯಾಗಿತ್ತು. ಬ್ರಿಟಿಷರು ವ್ಯಾಪಾರದೊಂದಿಗೆ ರಾಜ್ಯಸ್ಥಾಪನೆಯನ್ನು ಮಾಡುವುದಕ್ಕೆ ಕೈ ಹಚ್ಚುವಾಗ ಧರ್ಮಪ್ರಸಾರ ಕಾರ್ಯದಲ್ಲಿ ಅಲಿಪ್ತತೆಯನ್ನು ಕೈಕೊಂಡದ್ದರಿಂದ ಅವರು ಕೊನೆಗೆ ಯಶಸ್ವಿಯಾದರು. ಆದರೆ ಪೋರ್ತುಗೀಸರ ಕಾರ್ಯಕ್ರಮದಿಂದ ಅವರ ಸಾಮ್ರಾಜ್ಯಕ್ಕೆ ಆ ಕಾಲದಲ್ಲಿ ನಾಶವು ಬಂದೊದಗಿತು. ಯಾತಕ್ಕಂದರೆ ಪೋರ್ತುಗಲ್‌ನಂತಹ ಚಿಕ್ಕ ಜನಾಂಗವು ವಿಸ್ತಾರವಾದ ಕಡಲಿನ ಮೇಲೆ ತಮ್ಮ ಸತ್ತೆಯನ್ನು ಸ್ಥಾಪಿಸಲು ಯತ್ನಿಸಿದಾಗ, ಅದನ್ನು ರಕ್ಷಿಸಿಕೊಳ್ಳುವುದಕ್ಕೆ ಬೇಕಾಗುವಷ್ಟು ನೌಕಾಸೈನ್ಯ ಸಂಪತ್ತು ಇಲ್ಲದೆ ತಮ್ಮ ತೀವ್ರ ವಿರೋಧಿಗಳಾದ ಡಚ್ಚ್ ಮುಂತಾದ ಇತರ ಬಲಿಷ್ಠ ಜನಾಂಗದವರೊಡನೆ ಬಹಳ ಕಾಲದ ವರೆಗೆ ಹೋರಾಡಲಿಕ್ಕೆ ಸಾಧ್ಯವಾಗದೆ ಹೋಯಿತು. ಅದೇ ಕಾಲದಲ್ಲಿ ಒಂದಕ್ಕೊಂದು ದೂರವಾಗಿ ಸ್ಥಾಪಿಸಿದ ಮಳಿಗೆಗಳನ್ನು ದೇಶಿಯ ರಾಜರ ಸೈನ್ಯಗಳು ದಾಳಿ ಮಾಡಿದಾಗ ಅಂಥಾ ದಾಳಿಯನ್ನು ಎದುರಿಸುವುದಕ್ಕೆ ಸಾಕಷ್ಟು ಭೂಸೈನ್ಯವನ್ನು ಪೋರ್ತುಗೀಸರು ಸಂಗ್ರಹಿಸಲಾರದೆ ಹೋದರು. ಹೀಗಾಗಿ ಮತಪ್ರಚಾರದ ಕಾರ್ಯದಲ್ಲಿ ಮೂರ್ಸ್ ಜನಾಂಗದವರನ್ನೂ ಅವರ ಇತರ ಸ್ನೇಹಿತರನ್ನೂ ತೀಕ್ಷಣವಾದ ರೀತಿಯಲ್ಲಿ ದಂಡಿಸುವ ತವಕದಲ್ಲಿ ಈ ಪೋರ್ತುಗೀಸರಿಗೆ ಅನೇಕ ದೇಶಿಯ ರಾಜರೇ ಶತ್ರುಗಳಾಗಿ ನಿಂತುಬಿಟ್ಟರು.

ಪೋರ್ತುಗೀಸರು ಹೇಗೆ ಕನ್ನಡ ಜಿಲ್ಲೆ ಮತ್ತು ಮಲಬಾರು ಜಿಲ್ಲೆಯಲ್ಲಿ ತಮ್ಮ ಮತಪ್ರಚಾರ ಕಾರ್ಯವನ್ನು ಪ್ರಾರಂಭಿಸಿದರು ಎಂಬದನ್ನು ಇಲ್ಲಿ ವಿವರವಾಗಿ ಹೇಳುವ ಅಗತ್ಯವಿಲ್ಲ. ಇಷ್ಟೇ ಹೇಳಿದರೆ ಸಾಕು. ಕೊಚ್ಚಿಯಲ್ಲಿ ದೊಡ್ಡ ಭಂಡಸಾಲೆಯನ್ನು ಸ್ಥಾಪಿಸಿ, ಗೋವೆಯನ್ನು ಕ್ರಿ. ಶ. 1510ರಲ್ಲಿ ಪೋರ್ತುಗೀಸರು ಹಿಡಿದ ಮೇಲೆ ಸೋಂಡಾದ ರಾಜರ, ವಿಜಯನಗರದ ರಾಜರ, ಕಲ್ಲಿಕೋಟೆಯ ಝಮಾವೊರೀನರ ಮತ್ತು ಇತರ ಚಿಕ್ಕ ದೊಡ್ಡ ರಾಜ್ಯರ ಕೂಡೆ ಮಾಡಿಕೊಂಡ ಒಪ್ಪಂದಗಳ ಮೇರೆಗೆ ಹೊನ್ನಾವರ, ಬಾರ್ಸೆಲೋರ್ (ಬಸರೂರ್), ಮಂಗಳೂರು, ಕುಂದನೂರು (ಕಣ್ಣಾನೂರು), ತಲಚೇರಿ, ಕಲ್ಲಿಕೋಟೆ ಮುಂತಾದ ಸ್ಥಳಗಳಲ್ಲಿ ದೊಡ್ಡ ವ್ಯಾಪಾರದ ಭಂಡಸಾಲೆಗಳನ್ನು ಸ್ಥಾಪಿಸಿದರು. ಗೋವೆಯಿಂದಲೂ ಕೊಚ್ಚಿಯಿಂದಲೂ ಮಿಶನರಿಗಳು ಹೊರಟು, ಈ ಭಂಡಸಾಲೆಗಳ ವ್ಯವಹಾರಕ್ಷೇತ್ರದಲ್ಲಿ ಮಾತ್ರವಲ್ಲ, ಒಳಪ್ರಾಂತ್ಯದಲ್ಲಿಯೂ ಮತಪ್ರಚಾರವನ್ನು ಮಾಡತೊಡಗಿದರು. ಕೊಂಚ ಕಾಲದಲ್ಲಿಯೇ ಈ ಪಟ್ಟಣಗಳಲ್ಲಿ ಈ ಕರಾವಳಿ ಜಿಲ್ಲೆಗಳ ಒಳಪ್ರಾಂತ್ಯದಲ್ಲಿರುವ ಬೇರೆ ಬೇರೆ ಊರುಗಳಲ್ಲಿ ಕ್ರೈಸ್ತರ ಗುಡಿಗಟ್ಟುಗಳು ತಲೆ ಎತ್ತಿದವು. ಮರಾಟೆಯವರು ಗೋವೆಯನ್ನು ನುಗ್ಗಿ ಹಾವಳಿ ಮಾಡಿ ಪೋರ್ತುಗೀಸರ ವ್ಯಾಪಾರವನ್ನು ತಗ್ಗಿಸಲಿಕ್ಕೆ ಹವಣಿಸಿದರು. ಅಂಥ ಕಷ್ಟಕಾಲದಲ್ಲಿ ಅನೇಕ ಕ್ರೈಸ್ತರು ಗೋವೆಯನ್ನು ಬಿಟ್ಟು ಪಶ್ಚಿಮ ಕರಾವಳಿಯ ಬೇರೆ ಬೇರೆ ಪಟ್ಟಣಗಳಲ್ಲಿ ಬಂದು ವಾಸಮಾಡ ತೊಡಗಿದರು. ಕ್ರಿ. ಶ. 1265—1760ರ ವರೆಗೆ ಕನ್ನಡ ಜಿಲ್ಲೆಯನ್ನು ಆಳಿದ ಬಿದನೂರಿನ ರಾಜರು ಇವರನ್ನು ಆದರಪೂರ್ವಕವಾಗಿ ಸ್ವಾಗತ ಮಾಡಿದರು. ಮತ್ತು ಅವರಿಗೆ ಜಮೀನುಗಳನ್ನು ಇನಾಮು ಕೊಟ್ಟರು ಅಥವಾ ತಮ್ಮ ಸೈನ್ಯದಲ್ಲಿ ಸೇರಿಸಿಕೊಂಡರು. ಹೀಗಾಗಿ 17ನೇ ಶತಮಾನದ ಮಧ್ಯಕಾಲದಲ್ಲಿ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತರೇ ವಾಸಮಾಡುವ ಸುಮಾರು 25 (ಪೆರಿಷ್) ಗ್ರಾಮಗಳು ಇದ್ದವು. ಪೋರ್ತುಗೀಸರು ಬಿದನೂರಿನ ರಾಜರೊಡನೆ ಕ್ರಿ. ಶ. 1671, 1678, 1707, 1714ನೇ ಇಸವಿಗಳಲ್ಲಿ ಪ್ರತ್ಯಪ್ರತ್ಯೇಕವಾಗಿ ಮಾಡಿದ ಒಪ್ಪಂದಗಳಲ್ಲಿ ಕ್ರೈಸ್ತ ಜನರ ಹಕ್ಕುಗಳನ್ನು ಸುರಕ್ಷಿತ

Father Muller and some of his Lepers.

**Fr. Muller and the Lepers.**
ಫಾದರ್ ಮುಲ್ಲರರೂ ಅವರ ಕುಷ್ಠಾಶ್ರಮವಾಸಿಯರೂ—ಕಂಕನಾಡಿ, ಮಂಗಳೂರು.



**St. Joseph's Seminary, Jeppoo.**
ಜಪ್ಪುವಿನಲ್ಲಿರುವ ಸೈಂಟ್ ಜೊಸೆಪ್ಸ್ ಸೆಮಿನರಿ.

ಪಡಿಸುವ ಶರತ್ತುಗಳು ಕಂಡುಬರುವುದರಿಂದ 18ನೇ ಶತಮಾನದ ಆರಂಭದಲ್ಲಿಯೇ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಜಾತಿಯವರ ಸಂಖ್ಯೆಯು ಸಾಕಷ್ಟು ದೊಡ್ಡದಿದ್ದು, ಅವರು ಪ್ರಾಮುಖ್ಯತೆಗೆ ಬಂದಿದ್ದರೆಂದು ತಿಳಿಯಬೇಕಾಗಿಯದೆ. ಬಿದನೂರಿನ ಅರಸರು ತಮ್ಮ ಕ್ರೈಸ್ತ ಪ್ರಜೆಗಳಿಗೆ ಆದರಭಾವದಿಂದ ಕಾಣುತಿದ್ದರು. ಮಂಗಳೂರಿನಲ್ಲಿ ಮಿಲಾಗ್ರಿ ಇಗರ್ಜಿ ಮುಂತಾದ ಇಗರ್ಜಿಗಳಿಗೆ ಉಂಬಳಿ ಉತಾರುಗಳನ್ನು ಬಿಟ್ಟ ಸಂಗತಿಯು ಬಿದನೂರಿನ ರಾಜರಿಗೆ ಕ್ರೈಸ್ತ ಜನರ ಮೇಲೆ ಇದ್ದ ಆದರವನ್ನು ವ್ಯಕ್ತಗೊಳಿಸುತ್ತದೆ. ಕ್ರಿ. ಶ. 1760ರಲ್ಲಿ ಬಿದನೂರಿನ ವಂಶವನ್ನು ಮುರಿದ ಮೇಲೆ ಹೈದರಾಲಿಯು ತನ್ನ ಹಿಂದಿನ ರಾಜರು ಕೊಟ್ಟಂಥಾ ಉಂಬಳಿಗಳನ್ನು ಸ್ಥಿರಪಡಿಸಿದನು. ಇದಕ್ಕಾಗಿ ಈ ಕ್ರೈಸ್ತರು ಹೈದರಾಲಿಗೆ ಅಚಲವಾದ ಶ್ರದ್ಧೆಯಿಂದಲೂ ರಾಜಭಕ್ತಿಯಿಂದಲೂ ಕಾಣುತಿದ್ದರು. ಟಿಪ್ಪುವಿನ ಕಾಲದಲ್ಲಿ ಹೇಗೆ ಈ ಕ್ರೈಸ್ತರನ್ನು ಸೆರೆ ಹಿಡಿದು ಶ್ರೀರಂಗಪಟ್ಟಣಕ್ಕೆ ಸಾಗಿಸಿದರು, ಮತ್ತು ಅವರ ಪೈಕಿ ಕೆಲವೇ ಕೆಲವು ಮಂದಿ ಜೀವಂತವಾಗಿ ಉಳಿದು ಎಷ್ಟೋ ಕಷ್ಟಗಳಿಗೆ ಒಳಗಾಗಿ ಹೇಗೆ ಕನ್ನಡ, ಮಲಬಾರು ಮತ್ತು ಕೊಡಗು ಜಿಲ್ಲೆಗಳಿಗೆ ಹಿಂತಿರುಗಿ ಬಂದರೆಂಬುದು ಇತ್ತಲಾಗೆ ನಡೆದ ಸಂಗತಿಯಾಗಿ ಎಲ್ಲರಿಗೂ ಚೆನ್ನಾಗಿ ತಿಳಿದೇ ಇದೆ.

16 ಮತ್ತು 17ನೆ ಶತಮಾನಗಳಲ್ಲಿ ಗೋವೆಯಲ್ಲಿಯೂ ಪೋರ್ತುಗೀಸರ ಅಧಿಕಾರದಲ್ಲಿರುವ ಇತರ ಪ್ರಾಂತ್ಯಗಳಲ್ಲಿಯೂ ಕ್ರೈಸ್ತ ಮಿಶನೆರಿಗಳ ಸಾಹಸವು ಯಶಸ್ವಿಯಾಯಿತು. ಮತ್ತು ಪೋರ್ತುಗೀಸರ ಅಧಿಕಾರಕ್ಕೆ ಒಳಪಡದ ಪ್ರಾಂತ್ಯಗಳಲ್ಲಿಯೂ ಈ ಮಿಶನೆರಿಗಳ ಸಾಹಸವು ಹಿಂದುಸ್ಥಾನದಲ್ಲಿ ಬ್ರಿಟಿಷರ ಆಳಿಕೆಯಲ್ಲಿ ಇದ್ದುದಕ್ಕಿಂತಲೂ ಹೆಚ್ಚಿನ ಉನ್ನತಿಗೆ ಬಂದಿತ್ತು. ಇದಕ್ಕೆ ಕಾರಣಗಳನ್ನು ಗೊತ್ತು ಹಚ್ಚುವುದು ಕಷ್ಟವಿಲ್ಲ. ಸೆಂಟ್ ಫ್ರಾನ್ಸಿಸ್ ಕ್ಸೇವಿಯರ್, ಸೆಂಟ್ ಜ್ಹೋನ್ ಬ್ರಿಟೊ ಮುಂತಾದ ಪಾದರಿಗಳು ಮರಣದ ಭಯವಿಲ್ಲದೆ ಮಳೆಗಾಳಿ, ಕಾಡುಮೃಗಗಳು ಮುಂತಾದವುಗಳ ಹಾವಳಿಗೆ ಲಕ್ಷಿಸದೆ, ಮತಪ್ರಚಾರಕ್ಕಾಗಿ ಎಷ್ಟು ಸಾಹಸವನ್ನು ಮಾಡಿದ್ದಾರೆಂಬದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ. ದೇಶಭಾಷೆಗಳಲ್ಲಿ ವಿಚಿತ್ರ ರೀತಿಯಲ್ಲಿ ಪರಿಶ್ರಮ ಮಾಡಿದ ನೋಬಲ್, ಬೇಷಿ, ಸ್ಟೀಪನ್ಸ್ ಮುಂತಾದ ಕವಿಗಳೂ ಗ್ರಂಥಕಾರರೂ ಇಂತಹ ಮಿಶನೆರಿಗಳೇ. ಸಾವಿರಾರು ಮೈಲು ದೂರದಲ್ಲಿರುವ ತಮ್ಮ ಮನೆಮಾರುಗಳನ್ನು ತ್ಯಜಿಸಿ, ತಮಗೆ ಪ್ರಿಯವಾದ ಸರ್ವ ಸುಖಕ್ಕೂ ತಿಲಾಂಜಲಿಯನ್ನು ಕೊಟ್ಟು ತಾವು ಕ್ರೈಸ್ತ ಮತಕ್ಕೆ ಸೇರಿಸಿದ ಜನರ ಸುಖವನ್ನು ತಮ್ಮ ಸುಖವಾಗಿ ಭಾವಿಸಿ, ಕೃಷಿ, ಕೈಗಾರಿಕೆ ಮೊದಲಾದ ವೃತ್ತಿಗಳಲ್ಲಿ ಈ ಜನರನ್ನು ಹಚ್ಚಿ, ಅವರನ್ನು ಸುಧಾರಣೆಗೆ ತಂದವರು ಇಂಥ ಮಿಶನೆರಿಗಳೇ. ಈ ರೀತಿಯಲ್ಲಿ ಕ್ರೈಸ್ತ ಮತವನ್ನು ಪ್ರಸರಿಸುವಾಗ ತಮ್ಮ ಮತದ ತತ್ವಗಳಿಗೆ ತೀರಾ ವಿರೋಧವಾಗುವ ಕ್ರಮಗಳನ್ನು ಉಳಿದು, ದೇಶಿಯರ ಕಟ್ಟುಕಟ್ಟಳೆಗಳಿಗೆ ಎಷ್ಟರ ಮಟ್ಟಿಗೆ ಈ ಮಿಶನೆರಿಗಳು ಸಹನಾಭಾವವನ್ನು ತೋರಿಸುತಿದ್ದರೆಂಬದನ್ನು ಇಲ್ಲಿ ಎತ್ತಿಕೊಳ್ಳ ಬೇಕಾಗಿದೆ. ಇಹ ಪರಗಳಲ್ಲಿ ಅತೀ ಉಚ್ಚವಾದ ಸೌಕರ್ಯಗಳಿಗೆ ಉಚ್ಚ ಜಾತೀಯವರು ಮಾತ್ರ ಅಧಿಕಾರವುಳ್ಳವರು ಎಂಬ ತತ್ವವನ್ನು ಮಾತ್ರ ಅವರು ಒಪ್ಪಿಕೊಳ್ಳುತಿದ್ದಿಲ್ಲ. ಆದರೆ ಕ್ರೈಸ್ತ ಮತಕ್ಕೆ ಸೇರಿದ ಬೇರೆಬೇರೆ ಜಾತಿಗಳೊಳಗೆ ಆಹಾರ ವ್ಯವಹಾರ, ವಿವಾಹ ಮೊದಲಾದವುಗಳು ಮತದ ದೃಷ್ಟಿಯಿಂದ ನಿಷೇಧಿಸಲ್ಪಡದಿದ್ದರೂ ಪೂರ್ವಾಚಾರದ ಕಟ್ಟಳೆಗಳನ್ನು ಮೀರಿ ಇಂತಹ ಪರಸ್ಪರ ವ್ಯವಹಾರಗಳು ನಡೆಯುವುದು ತೀರ ಅಸಾಧ್ಯವಾಗಿ ಬಂತು. ಒಂದು ವೇಳೆ ಆ ರೀತಿಯ ಸಾಂಕರ್ಯಗಳು ಉಂಟಾದಲ್ಲಿ ಪೂರ್ವ ಪದ್ಧತಿಯಂತೆ ಪ್ರಾಯಶ್ಚಿತ್ತಗಳಿಗೂ ಬಹಿಷ್ಕಾರಗಳಿಗೂ ಈ ಕೆಥೊಲಿಕ್ ಮಿಶನುಗಳು ತಲೆಬಾಗಿಸಿದರು. ಹಂಟರರ "ಬ್ರಿಟಿಷ್ ಎಂಪಾಯರ್" ಎಂಬ ಪುಸ್ತಕದಲ್ಲಿ ಬರೆದಂತೆ ಕೆಥೊಲಿಕ್ ಗುರುಗಳೂ ಪಾದರಿಗಳೂ ಅಶನ, ವಸನಗಳಲ್ಲಿ ಮತ್ತು ಇತರ ಲೌಕಿಕ ಕ್ರಮಗಳಲ್ಲಿ ತೀರ ಹಿಂದೀ ಜನರಂತೆ ಇದ್ದರು. ಹೀಗಾಗಿ ಮೇಲು ಮತ್ತು ಕೀಳು ಜಾತಿಯವರಲ್ಲಿಯೂ ಅವರ ವರ್ತನವು ಆದರಣೀಯವಾಯಿತು. ಪಶ್ಚಿಮ ಕರಾವಳಿಯ ಕೊಂಕಣಿ ಕ್ರೈಸ್ತರಲ್ಲಿ ಈ ರೀತಿಯಲ್ಲಿ ಜಾತಿ ಮತ್ತು ಕಟ್ಟಳೆಗಳ ವ್ಯತ್ಯಾಸವನ್ನು ಊರ್ಜಿತವಿರಿಸಿದ್ದು ಈ ಪೋರ್ತುಗೀಸ್ ಮಿಶನರಿಗಳ ಸಹನಾಭಾವದ ನಿದರ್ಶನವಾಗಿದೆ. ಮುಂಬಾಯಿ ಸಂಸ್ಥಾನದ ಖಾನೇಶುಮಾರಿಯು ಅತೀ ವಿಚಿತ್ರ ರೀತಿಯಲ್ಲಿ ರಂಜಕವಾಗಿ ಬರೆದ

ರಿಪೋರ್ಟಿನಲ್ಲಿ ಕಾಣುವಂತೆ ಪೋರ್ತುಗೀಸರ ಅಧಿಕಾರದಲ್ಲಿ ಬಲಾತ್ಕಾರದಿಂದ ಈ ಬೇರೆ ಬೇರೆ ಜಾತಿಗಳನ್ನು ಕ್ರೈಸ್ತಮತಕ್ಕೆ ಸೇರಿಸಿದರೆಂಬದಕ್ಕೆ ಆಧಾರಗಳಿಲ್ಲ. ಪೋರ್ತುಗೀಸರು ತಮ್ಮ ಅಧಿಕಾರದೊಳಗಿರುವ ಪ್ರದೇಶದಲ್ಲಿ ದೇವಸ್ಥಾನಗಳನ್ನು ನಾಶ ಪಡಿಸುವುದು, ಬಹಿರಂಗವಾಗಿ ಹಿಂದೂ ಜನರು ತಮ್ಮ ದೇವಾರಾಧನೆಗಳನ್ನು ಮಾಡದಂತೆ ನಿರ್ಬಂಧಿಸುವುದು, ಮುಂತಾದ ರೀತಿಯಲ್ಲಿ ಪೋರ್ತುಗೀಸರು ಬಲಾತ್ಕಾರವನ್ನು ಪ್ರಯೋಗಿಸಿದರೂ ಅವರ ಇತರ ಹಕ್ಕುಗಳನ್ನು ಕಿತ್ತು ಹಾಕಲಿಕ್ಕೆ ಎಂದೆಂದಿಗೂ ಪ್ರಯತ್ನಿಸಲಿಲ್ಲ. ಹೇಗಿದ್ದರೂ ಮಧುರೆ, ಬಿಜಾಪುರ ಮುಂತಾದ ಮತ್ತು ಪೋರ್ತುಗೀಸರ ಆಶ್ರಯದೊಳಗೆ ಇರದ ಹಿಂದೀ ರಾಜರ ಸಂಸ್ಥಾನಗಳಲ್ಲಿ ಈ ಬಗೆಯ ಬಲಾತ್ಕಾರವನ್ನು ಅವರು ಪ್ರಯೋಗಿಸಲಿಲ್ಲ. ಆದರೂ ಅಲ್ಲಿ ಅನೇಕಾನೇಕ ಜನರನ್ನು ಕ್ರೈಸ್ತ ಮಿಶನರಿಗಳು ತಮ್ಮ ಮತಕ್ಕೆ ಸೇರಿಸಿದರು.

ಮುಂಬಯಿ ಗೆಜಿಟಿಯರದ ಗ್ರಂಥಕಾರರು ಕನ್ನಡ ಜಿಲ್ಲೆಯ ಕ್ರೈಸ್ತರ ಮೂಲವನ್ನು ಶೋಧಿಸುವಾಗ ಅವರಲ್ಲನೇಕರು ಮತಾಂತರ ಹೊಂದಿದ ಸ್ಥಳೀಯ ನಿವಾಸಿಗಳ ವಂಶಸ್ಥರೆಂದು ಬರೆದಿದ್ದಾರೆ. ಆದರೆ ಇದು ತಪ್ಪು ಗ್ರಹಿಕೆ. ವಸ್ತುತಃ ಅವರು ಕನ್ನಡ ಜಿಲ್ಲೆಯಲ್ಲಿ ಬಂದು ನಿವಾಸ ಮಾಡಿದ ಗೋವಾ ಕ್ರೈಸ್ತರ ವಂಶಸ್ಥರೆಂದು ತಿಳಿಯಬೇಕು. ಕೊಂಕಣಿ ಭಾಷೆಯು ಪೋರ್ತುಗೀಸರ ಆಗಮನಕ್ಕೆ ಪೂರ್ವದಲ್ಲಿ ಗೋವೆಯ ಪ್ರಾಂತವನ್ನು ಒಳಕೊಂಡ ದಕ್ಷಿಣ ಕೊಂಕಣದಲ್ಲಿ ವ್ಯಾಪಿಸಿತ್ತು. ಆಗ್ಗೆ ಕನ್ನಡ, ತುಳು, ಮಲೆಯಾಳಿ ಭಾಷೆಗಳನ್ನೇ ಆಡುವ ಜನರನ್ನು ಗೋವೆಯ ಮಿಶನರಿಗಳು ಕ್ರೈಸ್ತರಾಗಿ ಮಾಡಿದ್ದರೆ ಅಷ್ಟು ದೊಡ್ಡ ಸಮುದಾಯಕ್ಕೆ ಅಷ್ಟೊಂದು ಸಂಸ್ಕೃತಿಯಿಲ್ಲದ ಕೊಂಕಣಿ ಭಾಷೆಯನ್ನು ಕಲಿತುಕೊಂಡು ಮಾತೃಭಾಷೆಯಾಗಿ ಇಟ್ಟುಕೊಳ್ಳಲು ಒತ್ತಾಯ ಪಡಿಸಲಿಕ್ಕೆ ಸಾಧ್ಯವಿರಲಿಲ್ಲ. ಕನ್ನಡ ಜಿಲ್ಲೆಯ ಕೆಥೊಲಿಕರಿಗೆ ಸಾರ್ವತ್ರಿಕವಾಗಿ ಕೊಂಕಣಿ ಭಾಷೆಯೇ ಮಾತೃಭಾಷೆಯಾಗಿರಬೇಕಾದರೆ ಈ ಜಿಲ್ಲೆಯಲ್ಲಿ ಗೋವೆಯ ಕ್ರೈಸ್ತರೆ ತಂಡತಂಡವಾಗಿ ಬಂದು ನೆಲೆನಿಂತು ಗುಡಿಕಟ್ಟು ಮಾಡಿಕೊಂಡಿರಬೇಕು. ಪ್ರಾಚೀನ ಇತಿಹಾಸವು ಅವರನ್ನು ಗೋವೆಯವರೆಂದು ಹೇಳುತ್ತದೆ. ಹಲವರು ತಮ್ಮ ಹಿರಿಯರು ಗೋವೆಯ ಯಾವ ಹಳ್ಳಿಯಿಂದ ಬಂದು ಇಲ್ಲಿ ನೆಲಸಿದರು ಎಂದು ಸಹ ಹೇಳ ಬಲ್ಲರು. ಗೋವೆಯ ಹಳ್ಳಿಯಲ್ಲಿ ತಮಗೆ ಪೂರ್ವಾಚಾರದಿಂದ ನಡೆದು ಬಂದ 'ಜೊನ್' ಎಂಬ ಗ್ರಾಮಮಾನ್ಯದ ಅಂಶವೇ ಇತ್ತೀಚೆಗಿನ ವರೆಗೆ ಕೆಲವು ಕುಟುಂಬಗಳಿಗೆ ಸಲ್ಲುತಿತ್ತು. ಹೀಗೆ ಗ್ರಾಮ ಪದ್ಧತಿಯೂ ಇತಿಹಾಸವೂ ಕೊಂಕಣಿ ಕ್ರೈಸ್ತರ ಮತ್ತು ಬ್ರಿಟಿಷ ಹಿಂದುಸ್ಥಾನದಲ್ಲಿರುವ ಇತರ ಹಿಂದು ಕೊಂಕಣಸ್ಥರ ಮಾತೃಸ್ಥಾನವು ಗೋವೆ ಎಂದು ಪ್ರತಿಪಾದಿಸುತ್ತವೆ.

ಬೊಂಬೈ ಗೆಜಿಟಿಯರದಲ್ಲಿ ಕೊಂಕಣಿ ಕ್ರೈಸ್ತರ ಮೂಲವನ್ನು ಕುರಿತು ಇನ್ನೊಂದು ಮಾತನ್ನು ಹೇಳಿದೆ. ಈ ಅಭಿಪ್ರಾಯವು ಹುಟ್ಟಲಿಕ್ಕೆ ಕಾರಣವನ್ನೂ ಹೇಳಬೇಕಾಗಿದೆ.

"16ನೆ 17ನೆ ಶತಮಾನಗಳಲ್ಲಿ ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರ ಮತ್ತು ಇತರ ಉದ್ದೇಶಗಳಿಗಾಗಿ ಬಂದು ನೆಲಸಿದ ಪೋರ್ತುಗೀಸರ ರಕ್ತವು ಕೂಡಾ ಕನ್ನಡ ಕ್ರೈಸ್ತರ ನಾಡಿಗಳಲ್ಲಿ ಒಂದಂಶ ಹರಿಯುತ್ತದೆ ಎಂದು ತಿಳಿಯುತ್ತಾರೆ" ಎಂದು ಆ ಗ್ರಂಥಕಾರನು ಅಂದಿದ್ದಾನೆ. ಹೀಗೆ ಯುರೋಪಿಯನ ರಕ್ತವು ಕೆಲವೇ ಕೆಲವು ಪ್ರತ್ಯೇಕ ಇಂಡೊ ಯುರೊಪಿಯನ, ಇಂಡೊ ಪೋರ್ತುಗೀಸ ಅಥವಾ ಯೂರೋಪಿಯನರ ದೇಹದಲ್ಲಿ ಮಾತ್ರ ಹರಿಯುತ್ತದೆಂಬುದೇನೊ ನಿಜ. ಮಲಬಾರದಲ್ಲಿ ಇವರನ್ನು ಯೂರೇಶಿಯನ್ ಅಥವಾ ಎಂಗ್ಲೊ ಇಂಡಿಯನ್ ಎಂದು ಕರೆಯುತ್ತಾರೆ. ಉತ್ತರ ಕನ್ನಡದಲ್ಲಿ ಇವರನ್ನು ಪೋರ್ತುಗೀಸರೆಂದೆ ಕರೆಯುತ್ತಾರೆ. ಗೋವೆಯಲ್ಲಿಯೂ ಅವರನ್ನು 'ಮೆಸ್ತಿಕೊ' ಅಥವಾ ಮಿಶ್ರವಂಶಸ್ಥರೆಂದೆನ್ನುವರು. ಗೋವೆಯಲ್ಲಾಗಲಿ ಕನ್ನಡ ಮತ್ತು ಮಲಬಾರ ಜಿಲ್ಲೆಗಳಲ್ಲಾಗಲಿ ಅವರು ದೇಶೀಯ ಸ್ತ್ರೀಯರಲ್ಲಿ ಪೋರ್ತುಗೀಸ ಆಫಿಸರರಿಂದ, ಸಿಪಾಯಿಗಳಿಂದ, ಅಥವಾ ವರ್ತಕರಿಂದ ಹುಟ್ಟಿದವರು. ಇಂಥ ಪಾಣಿಗ್ರಹಣವನ್ನು ಆ ಕಾಲದ ಗೋವೆಯ ಸರಕಾರವಾಗಲಿ ಕ್ರೈಸ್ತ ಮತದ ಗುರುಗಳಾಗಲಿ ಮನ್ನಿಸುತಿದ್ದರು. ಆದರೆ ಮೇಲ್‌ಜಾತಿಯ ಹಿಂದುಗಳೊಡನೆ ಮಾತ್ರ ಇಂಥ ನೆಂಟಸ್ಥಿಕೆಯನ್ನು ಬೆಳೆಯಿಸುವುದಕ್ಕೆ ಸಮ್ಮತಿ ಕೊಡುತಿದ್ದರು. ಪೋರ್ತುಗೀಸರು ಬರೆ ಕೆಲವು ಮಂದಿ ಮಾತ್ರ ಹಿಂದು

ಸ್ಥಾನದಲ್ಲಿ ಬಂದು ನೆಲಸಿದ್ಧರಿಂದ ಇಂಥ ಮಿಶ್ರ ವಿವಾಹಗಳ ಸಂಖ್ಯೆ ತೀರಾ ಕಡಿಮೆಯಾಗಿತ್ತು. ಈ ಕೊಂಕಣಿ ಯುರೋಪಿಯನರು ಬಹಳ ಪುರಾತನದಿಂದಲೇ ಯುರೋಪಿಯನ್ ರೀತಿಯಲ್ಲಿ ಉಡಿಗೆ ತೊಡಿಗೆಗಳನ್ನು ಧರಿಸಿ ಅವರ ರೀತಿನೀತಿಗಳನ್ನು ಕೈಕೊಂಡಿದ್ದು ಇತ್ತಲಾಗಿನ ವರೆಗೆ ಒಂದು ಬಗೆಯ ಪೊರ್ತುರ್ಗೀಸ ಮಿಶ್ರವಾದ ಕೊಂಕಣಿ ಭಾಷೆಯನ್ನು ಆಡುತಿದ್ದರು. ಆದರೆ ಅವರಲ್ಲನೇಕರು ತಾಜಾ ಗೋವೆಯ ರೋಮನ ಕೆಥೊಲಿಕರಾಗಿದ್ದು ಯುರೋಪಿಯನ್ ರೀತಿನೀತಿಗಳನ್ನು ಅನುಸರಿಸಿ ಹುಟ್ಟು ಯೂರೋಪಿಯನರಲ್ಲವಾದರೂ ಯೂರೋಪಿಯನರೆಂತೆ ಅನ್ನಿಸಿಕೊಳ್ಳುತ್ತಾರೆ. ಇವರೆಲ್ಲರನ್ನು ಬಿಟ್ಟರೆ ಉಳಿದ ಕನ್ನಡ ಜಿಲ್ಲೆಯ ಕೊಂಕಣಿ ಕ್ರೈಸ್ತರು ನಿಜವಾಗಿಯೂ ದೇಶೀಯರಾಗಿದ್ದು ಮತ ಮತ್ತು ಆಚಾರಗಳಲ್ಲಿ ವಿನಾ ಸರ್ವ ವಿಧಗಳಲ್ಲಿ ಅಲ್ಲಿರುವ ಹಿಂದುಗಳನ್ನು ಹೋಲುವುದಲ್ಲದೆ ಅವರ ಉಡಿಗೆತೊಡಿಗೆಗಳನ್ನು ಧರಿಸುತ್ತಾರೆ; ಮತ್ತು ತಮ್ಮಲ್ಲಿ ಜಾತಿ ಭೇದಗಳನ್ನೂ ಅನುಸರಿಸುತ್ತಾರೆ, ಅವರ ಪೂರ್ವಜರನ್ನು ಕ್ರೈಸ್ತ ಮತಕ್ಕೆ ಸೇರಿಸುವಾಗ ಧಾರ್ಮಿಕ ರಕ್ಷಕರಾಗಿ ನಿಂತ ಪೋರ್ತುರ್ಗೀಸರ ಹೆಸರುಗಳನ್ನು ಅವರು ತಮ್ಮ ಹೆಸರುಗಳಿಗೆ ಹಚ್ಚಿಕೊಂಡಿರುವುದೇನೋ ನಿಜ. ಆದರೆ ಇತ್ತೀಚಿಗೆ ವರೆಗೆ ಮತ್ತು ಕೆಲವರು ಈಗಲೂ ತಮ್ಮ ಹಿಂದು ಗೋತ್ರದ ಅಥವಾ ಪ್ರವರದ ಹೆಸರಿಂದಲೇ ಕರೆಯಲ್ಪಡುತ್ತಾರೆ. ಲೌಕಿಕ ವಿಚಾರಗಳಲ್ಲಿಯೂ ರಕ್ತದಲ್ಲಿಯೂ ಅವರು ಹಿಂದುಗಳು, ಮತ ಮತ್ತು ಧಾರ್ಮಿಕ ವಿಚಾರಗಳಲ್ಲಿ ಅವರು ಕ್ರೈಸ್ತರು. ಒಂದನೇಯದು ಅವರಿಗೆ ಅವರ ಪೂರ್ವಜರಿಂದ ಪಾರಂಪರ್ಯವಾಗಿ, ಎರಡನೆಯದು ಪೋರ್ತುರ್ಗೀಸರಿಂದ ಬೆಂಬತ್ತಿ ಬಂದಿದೆ.



# ಸೈಂಟ್ ಎಗ್ನೆಸ್ ಕೊಲೆಜ್, ಮಂಗಳೂರು

(ದಕ್ಷಿಣ ಕನ್ನಡ ಜಿಲ್ಲೆಯ ಹೆಮ್ಮಕ್ಕಳ ಮಹಾ ವಿದ್ಯಾಲಯ)

ಲೇಖಕ: ಶ್ರೀ। ಎಮ್. ಎನ್. ಕಾಮತ್, ಮಂಗಳೂರು.

'ಕರ್ಣಾಟಕದಲ್ಲೆಷ್ಟೋ ಊರುಗಳಲ್ಲಿ ಮೂಲಪಾಠ ಶಾಲೆಗಳೇ ಇಲ್ಲ; ಇದ್ದರೂ ಕೆಲವು ಊರುಗಳಲ್ಲಿ ಕನ್ನಡವನ್ನೆ ಕಲಿಸುತ್ತಿಲ್ಲ' ಎಂಬ ಉದ್ಗಾರವೂ, 'ಬಾಲಿಕಾಶಿಕ್ಷಣವು ನಮ್ಮ ಪ್ರಾಂತ್ಯದಲ್ಲಿ ಮುಂದುವರಿಯುತ್ತಿಲ್ಲ ಎಂಬ ಟೀಕೆಯೂ, 'ಹೆಮ್ಮಕ್ಕಳೇನು ಬಿ. ಎ. ಗಳಾಗಿ ಡೆಪ್ಯೂಟಿ ಕಲ್ಲೆಕ್ಟರ ಹುದ್ದೆ ಪಡೆಯಬೇಕೆ' ಎಂಬ ಪ್ರಶ್ನೆಯೂ, ಕೇಳಿಸುತ್ತಿರುವ ಈ ದಿನಗಳಲ್ಲಿ, ಮಂಗಳೂರಲ್ಲಿ ಕೆಥೊಲಿಕ ಸನ್ಯಾಸಿನಿಯರು ಸಂಸ್ಥಾಪನೆಗೊಳಿಸಿ ನಡೆಸುತಿರುವ ಸೈಂಟ್ ಎಗ್ನೆಸ್ ಕೊಲೆಜಿನ ವಿಷಯವಾಗಿ ಕೆಲವು ವಿಚಾರಗಳನ್ನು ಇಲ್ಲಿ ಬರೆವುದು ಉಪಯುಕ್ತವಾಗ ಬಹುದಾಗಿ ಭಾವಿಸುತ್ತೇನೆ.

ಮದ್ರಾಸು ಸಂಸ್ಥಾನದ ಪಶ್ಚಿಮ ಕರಾವಳಿಯ ಜಿಲ್ಲೆಗಳಲ್ಲಿ ಸ್ತ್ರೀ ಶಿಕ್ಷಣವು ಬಹಳವಾಗಿ ಪ್ರಚಾರಗೊಂಡಿದೆ ಎಂಬದು ವಿದ್ಯಾಖಾತೆಯ ಟಿಪ್ಪಣಿಗಳಿಂದ ಗೊತ್ತಾಗುತ್ತಿದೆ. ಮೂಲಶಾಲೆಗಳ ಮಾತನ್ನು ಬಿಟ್ಟರೆ,—ಮಾಧ್ಯಮಿಕ ತರಗತಿಯ ಸ್ತ್ರೀ ಶಿಕ್ಷಣವನ್ನು ಈ ಸನ್ಯಾಸಿನಿಯರ ಮಠವೇ ವಹಿಸಿಕೊಂಡಿರುವಂತೆ ತೋರುವುದು. ಸನ್ಯಾಸಿನೀ ಧರ್ಮದಂತೆ ಸದ್ಬೋಧೆಯನ್ನೀಯುವುದೇ ಇವರ ಉದ್ದೇಶವಾಗಿಯೂ, ಗೃಹಸ್ಥಾಶ್ರಮಿಗಳಿಗೆ ಇರತಕ್ಕ ಇತರ ಸಂಸಾರ ತಾಪತ್ರಯಗಳೇ ಇಲ್ಲದ ಆಶ್ರಮ ಸ್ಥಿತಿಯು ಇವರ ಅನುಕೂಲತೆಯಾಗಿಯೂ ಇರುವ ಕಾರಣ, ಶಿಕ್ಷಣ ಪ್ರಚಾರ

ಕಾರ್ಯವು ಪೂರ್ಣ ಮನಸ್ಸಿನಿಂದಲೂ ಸಾಂಗವಾಗಿಯೂ ಇವರ ಕೈಯಿಂದ ನಡೆಯುವುದು ತೀರ ಸಹಜವಾಗುತ್ತದೆ.

ಚಿರ ಕುಮಾರೀ ವ್ರತವನ್ನು ಅಂಗೀಕರಿಸಿರುವ ಅಪೊಸ್ತೊಲಿಕ್ ಕಾರ್ಮೆಲ್ ಮಠದ ಕೆಥೊಲಿಕ್ ಭಗಿನೀ ವೃಂದದವರು ಇಲ್ಲೇ ಬಹು ವರ್ಷಗಳಿಂದ ಅವರು ನಡೆಸಿ ಬರುತ್ತಿರುವ ಸೈಂಟ್ ಎನ್ಸ್ (ಬಾಲಿಕಾ) ಹೈ ಸ್ಕೂಲನ್ನು ಕೊಲೆಜಾಗಿ ಮಾರ್ಪಡಿಸಬೇಕೆನ್ನುವ ವಿಷಯವನ್ನು ಎಂಟು ವರ್ಷಗಳ ಹಿಂದೆ ಪರ್ಯಾಲೋಚನೆಗೆ ತಂದುಕೊಂಡರು. ದಕ್ಷಿಣ ಕನ್ನಡಾ ಮತ್ತು ಮಲಬಾರು ಜಿಲ್ಲೆಗಳಲ್ಲಿಯೂ ಮುಂದಣ ನಾಡುಗಳಲ್ಲೂ ಇವರು ಹೊಸ ಬಾಲಿಕಾ ಪಾಠಶಾಲೆಗಳನ್ನು ಏರ್ಪಡಿಸಬೇಕಾಗಿ, ಅಲ್ಲಲ್ಲಿನ ನಿವಾಸಿಗಳ ಮನವಿಗಳೂ ಸೂಚನೆಗಳೂ ಇವರಿಗೆ ಬರುತ್ತಲೇ ಇದ್ದದರಿಂದ, ಕೊಲೆಜ್ ತರಗತಿಗೆ ಹೈ ಸ್ಕೂಲನ್ನು ಏರಿಸಿ, ಆ ತರಗತಿಗಳನ್ನು ಕಲಿಸುವರ ಯೋಗ್ಯರಾದ ಭಗಿನಿಗಳನ್ನು ಇಲ್ಲಿರಿಸಿಕೊಳ್ಳಲು ಉಪಾಯ ಕಾಣದೆಂದು ಅವರಿಗೆ ಚಿಂತೆ ಹಿಡಿದಿದ್ದಿತು. ಆದರೆ ಈ ಸನ್ಯಾಸಿಯರಲ್ಲಿ ಕೆಲವರು ಉಪಾಧ್ಯಾಯಿನಿಯರಾಗಿ ಕೆಲಸವನ್ನು ನಿರ್ವಹಿಸುತ್ತಲೂ ಅದೇ ಕಾಲದಲ್ಲಿ ಮೇಲ್ತರಗತಿಯ ಪರೀಕ್ಷೆಗಳಿಗೆ ತಾನೇ ಓದುತ್ತಲೂ ಇರುವುದಕ್ಕೆ ಸಿದ್ಧರಾದರು. ಸೈಂಟ್ ಆಲೋಸಿಯಸ್ ಕೊಲೆಜಿನ (ಫಾದರ್) ಧರ್ಮಗುರುಗಳು ಇವರಿಗೆ ಬೇಕಾಗುವ ಸೌಕರ್ಯಗಳನ್ನು ಒದಗಿಸಿ ಕೊಡಲೊಪ್ಪಿದರು. ಇದಲ್ಲದೆ, 1920ನೇ ಇಸ್ವಿಯಲ್ಲಿ S. S. L. C. ಪರೀಕ್ಷೆಯಲ್ಲಿ ಉತ್ತೀರ್ಣೆಯರಾದ ಎಂಟು ಮಂದಿ ಬಾಲಿಕೆಯರು ತಾವೇ ಒಂದು ಪಂಗಡವನ್ನು ಮಾಡಿಕೊಂಡು, ತಮ್ಮಷ್ಟಕ್ಕೆ ಇಂಟರ್‌ಮೀಡಿಯೆಟ್ ಪರೀಕ್ಷೆಗಾಗಿ ಸಿದ್ಧರಾಗುತ್ತ ಬಂದರು. 1920ನೇ ಇಸ್ವಿಯ ಒಕ್ಟೋಬರ ತಾ 16ರಲ್ಲಿ,—ಸೇಂಟ್ ಎನ್ಸ್ ಹೈ ಸ್ಕೂಲನ್ನು ಎರಡನೇ ಗ್ರೇಡಿನ ಕೊಲೆಜಾಗಿ ಅಂಗೀಕರಿಸಿಕೊಳ್ಳಲು ಅಗತ್ಯವಿರುವ ಮಾಹಿತಿಪೂರ್ಣವಾದ ಮನವಿಯು ಮದ್ರಾಸು ಯುನಿವರ್ಸಿಟಿಯ ಅಧಿಕಾರಿಗಳಿಗೆ ಸಮರ್ಪಿಸಲಾಯಿತು. ಕಳೆದ ಐವತ್ತು ವರ್ಷಗಳಿಂದ ಮಲಬಾರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಈ ಸನ್ಯಾಸಿನೀ ಮಠವೇ ನಡೆಸಿಕೊಂಡು ಬರುತ್ತಿರುವ ಹಲವು ಹೈ ಸ್ಕೂಲುಗಳಲ್ಲಿನ ವಿದ್ಯಾರ್ಥಿನಿಯರ ಪ್ರೌಢ ವಿದ್ಯಾಭ್ಯಾಸದ ಸೌಕರ್ಯಕ್ಕಾಗಿ ಈ ಕೊಲೆಜಿನ ಸ್ಥಾಪನೆಯೆಂದೂ, ಸದ್ಯಕ್ಕೆ ಇದು ಇಂಟರ್‌ಮಿಡಿಯಟ್ ಪರೀಕ್ಷೆಗೆ ಮೂರನೆಯ ಗ್ರೂಪಿಗೆ ಮಾತ್ರ ವ್ಯವಸ್ಥಿತವಾಗಿದೆಯೆಂದೂ, ಕನ್ನಡ ಮಲೆಯಾಳಿ ಮತ್ತು ಫ್ರೆಂಚ್ ಭಾಷಾ ಸಾಹಿತ್ಯಗಳನ್ನು ಇಲ್ಲಿ ಕಲಿಸಲಾಗುವುದೆಂದೂ ಸೂಚಿಸಲಾಯಿತು. ಕೆಥೊಲಿಕ ಬಾಲಿಕೆಯರ ಬಗ್ಗಾಗಿಯೆ ಈ ಕೊಲೆಜು ಸ್ಥಾಪಿತವಾವಾಗುವುದಾದರೂ ಎಲ್ಲಾ ಸಮಾಜಗಳ ಹೆಮ್ಮಕ್ಕಳಿಗೆ ಇಲ್ಲಿ ವಿದ್ಯಾದಾನ ಕೊಡಲಾಗುವುದಾಗಿ ನಿರ್ಷರ್ಪಿಸಲಾಯಿತು. ಅದಾದ ಮೂರು ತಿಂಗಳ ಬಳಿಕ ಯುನಿವರ್ಸಿಟಿ ಸಿಂಡಿಕೇಟಿನ ತರಫಿನಿಂದ ಮೂವರು ವಿದ್ಯಾವಂತೆಯರಾದ ಮಹಿಳೆಯರು ಇಲ್ಲಿಗೆ ಬಂದು, ಕೊಲೆಜು ವಿಚಾರವಾಗಿ ತುಂಬಾ ವಿಮರ್ಶೆಮಾಡಿದರು. ಸ್ತ್ರೀಯರ ಸಲುವಾಗಿ ಇಲ್ಲಿ ಒಂದು ಪ್ರೌಢ ವಿದ್ಯಾಲಯ ಸ್ಥಾಪಿಸುವ ಅಗತ್ಯವಿದೆ, ಪಶ್ಚಿಮ ಕರಾವಳಿಯಲ್ಲಿ ಬಾಲಿಕಾ ಪಾಠಶಾಲೆಗಳಿರುವಲ್ಲೆಲ್ಲ ಮಕ್ಕಳ ಹೆತ್ತವರು ಇಂಥದೊಂದು ಕೊಲೆಜು ಬೇಕಾಗಿದೆ ಎಂಬುದನ್ನು ಪರೀಕ್ಷಕರಿಗೆ ಸೂಚಿಸುತ್ತಲೇ ಇದ್ದಾರೆ ಎಂಬ ಶಿಫಾರಸನ್ನು ಈ ಮಹಿಳೆಯರು ಬರೆದುಕೊಂಡರು. ಅದರಂತೆ 1921ನೇ ಇಸ್ವಿ ಎಪ್ರಿಲ್ ತಾ. 14ರಲ್ಲಿ ಈ ಕೊಲೆಜು ಸರಕಾರದಿಂದ ಮಂಜೂರಾತಿಯನ್ನು ಪಡೆಯಿತು. ಕ್ರೈಸ್ತ ಧರ್ಮಾನುಸಾರವಾಗಿ ಪೂಜಾ ಪ್ರಾರ್ಥನೆಗಳು ನಡೆದ ಬಳಿಕ ಕೊಲೆಜು ತೆರೆಯಲಾಯಿತು. "ಇಂದಿನ ಹೆಮ್ಮಕ್ಕಳೂ ನಾಳಿನ ತಾಯಂದಿರೂ ಮನುಷ್ಯ ಸಂಬಂಧವಾದ ಮತ್ತು ದೈವಿಕ ಅಧಿಕಾರವನ್ನು ಗೌರವಿಸಲಿ! ಭಗವಂತನನ್ನು ಭಯಭಕ್ತಿಗಳಿಂದ ವಂದಿಸಿ, ರಾಜನನ್ನು ಪೂಜ್ಯತೆಯಿಂದ ಮನ್ನಿಸಲಿ!" ಎಂಬೋಕ್ತಿಯೇ ಈ ಕೊಲೆಜ್ ಅಧಿಕಾರಿಗಳ ಮೊದಲನೆ ಮಾತು.

ಅದೇ ವರ್ಷದ ಜುಲೈ ತಿಂಗಳ 2ನೇ ತಾರೀಕಿನಲ್ಲಿ 24 ವಿದ್ಯಾರ್ಥಿನಿಯರ ಸಮ್ಮೇಲನವೇ ಆ ದಿನದ ಇಂಟರ್‌ಮೀಡಿಯೆಟ್ ತರಗತಿಯಾಗಿ ಶಿಕ್ಷಣಕ್ಕಾರಂಭವಾಯಿತು. ಅದಾದ ಮೂರು ವರ್ಷಗಳಲ್ಲಿ 1924 ಜನವರಿ ತಾ. 28ರಲ್ಲಿ ಸರಕಾರವು ಈ ಕೊಲೆಜನ್ನು ಮೊದಲನೆ ವರ್ಗದ ಕೊಲೆಜಾಗಿ ಅಂಗೀಕರಿಸಲು ಅಪ್ಪಣೆ ಕೊಟ್ಟಿತು. ಆ ವರ್ಷದ ಜುಲೈ 2ನೇ ತಾರೀಕಿನಲ್ಲಿ ಹದಿನೆರಡು ವಿದ್ಯಾರ್ಥಿನಿಯರು ಸೇರಿದ

ಬಿ. ಏ. ತರಗತಿಯನ್ನು ಪ್ರಾರಂಭಿಸಿದ್ದಾಯಿತು. ಅದು ವರೆಗೆ ಸೈಂಟ್ ಏನ್ಸ್ ಹೆಸರಲ್ಲಿ ಎಷ್ಟೋ ವಿದ್ಯಾ ಸಂಸ್ಥೆಗಳಿರುವ ಕಾರಣ, ಈ ಕೊಲೆಜನ್ನು ಸೈಂಟ್ ಎಗ್ನೆಸ್ ಕೊಲೆಜ್ ಎಂದು ನಾಮಕರಣ ಮಾಡಿದ್ದಾಯಿತು.

ಕೊಲೆಜ್ ತರಗತಿಗಳಲ್ಲಿ ವಿದ್ಯಾರ್ಥಿನಿಯರ ಸಂಖ್ಯೆಯು ಏರುತ್ತ ಬಂದಿದೆ:

ಜುಲೈ 1921...24
,, 1922...37
,, 1923...43
,, 1924...65
,, 1925...70
,, 1926 ಮತ್ತು 1927ರಲ್ಲಿ ಸಂಖ್ಯೆಯು ಸರಾಸರಿಯಾಗಿ ಇಷ್ಟಕ್ಕೇ ಉಳಿದಿದೆ. ಕಳೆದ ಮಾರ್ಚಿಯಲ್ಲಿ 69 ವಿದ್ಯಾರ್ಥಿನಿಯರು ಇದ್ದರು. ಇವರೊಳಗೆ 38 ಮಂದಿ ಮಾತ್ರ ಕೆಥೊಲಿಕರು. ಮೂವತ್ತೊಂದು ವಿದ್ಯಾರ್ಥಿನಿಯರು ಮಂಗಳೂರಿನ ಹೊರ ಪ್ರಾಂತ್ಯಗಳಿಂದ ಇಲ್ಲಿಗೆ ವಿದ್ಯಾಭ್ಯಾಸಕ್ಕಾಗಿಯೆ ಬಂದಿರುವರೆಂಬುದನ್ನು ಓದಿದರೆ, ಈ ಕೊಲೆಜಿನ ಉಪಯೋಗವನ್ನು ಇತರರು ಎಷ್ಟಕ್ಕೆ ಪಡೆಯುತ್ತಾರೆಂಬದು ತಿಳಿಯದೆ ಇರಲಾರದು.

ವಿದ್ಯಾರ್ಥಿನಿಯರ ಸೌಕರ್ಯಕ್ಕಾಗಿ ವಿದ್ಯಾರ್ಥಿನಿಯರ ವಸತಿ ಗೃಹವೂ ಇದೆ. ಯುರೋಪಿಯನ್ ಕ್ರಮವಾಗಿ ಜೀವಿಸುವವರಿಗೆ ರೂ. 12ರಿಂದ 24ರ ವರೆಗೂ, ಹಿಂದೂ ಕ್ರಮದಲ್ಲಿರುವವರಿಗೆ ರೂ. 12ರಂತೆಯೂ ಪ್ರತಿ ತಿಂಗಳ ಊಟ ಮತ್ತು ಬಿಡಾರದ ಖರ್ಚು ತಗಲುತ್ತದೆ.

ಕೊಲೆಜಿನಲ್ಲಿ ಇರುವಷ್ಟು ಕಾಲದಲ್ಲಿ, ವಿದ್ಯಾರ್ಥಿನಿಯರು ಉಡಿಗೆ ತೊಡಿಗೆಗಳ ವಿಷಯವಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾಗಿರುವ ನಿಯಮಗಳುಂಟು. ತೊಡಿಗೆಯ ಕೊರಳಪಟ್ಟಿಯು ಕೊರಳನ್ನು ಮುಚ್ಚಿರಬೇಕು; ಅಂಗಿಗಳ ಕೈಗಳು ಮೊಳಕೈಯಿಂದ ಎರಡಂಗಲ ಕೆಳಕ್ಕೆ ನೀಡಿರಬೇಕು; ಗೌನು ಮೊದಲಾದವು ಮೊಳಕಾಲಿನಿಂದ ಇನ್ನೂ ಕೆಳಕ್ಕೆ ಇಳಿದು ಉದ್ದವಿರಬೇಕು; ಅತಿ ತೆಳ್ಳಗಾದ ಬಟ್ಟೆಗಳನ್ನು ಉಪಯೋಗಿಸಿಕೊಳ್ಳಕೂಡದು. ಫೆಶನಿನಿಂದಲೂ ವೈಯಾರಗಳಿಂದಲೂ ಎಳೆ ಮಕ್ಕಳನ್ನು ತಪ್ಪಿಸುವುದಕ್ಕಾಗಿ ಈ ಸೂತ್ರಗಳನ್ನು ಸರ್ವರೂ ಅಂಗೀಕರಿಸಲೇ ಬೇಕಾಗಿ ವಿಧೇಯರಾಗಿಯೆ ನಡೆಯಬೇಕೆಂದೂ ತೀಕ್ಷ್ಣವಾದ ನಿಯಮ.

ವಿದ್ಯಾರ್ಥಿನಿಯರು ಪರೀಕ್ಷೆಗಳಲ್ಲಿ ಅತಿ ನಿಪುಣತೆಯಿಂದ ಉತ್ತೀರ್ಣರಾಗುತ್ತಾರೆಂಬುದಕ್ಕೆ ಇಲ್ಲಿನ ಪರೀಕ್ಷಾಫಲಗಳೇ ಸಾಕ್ಷಿ. 1922ನೇ ಇಸ್ವಿಯ ಇಂಟರ್‌ಮಿಡಿಯಟ್ ಪರೀಕ್ಷೆಯಲ್ಲಿ ಶ್ರೀಮತಿ ಸ್ಟೆಲ್ಲಾ ಡಿ'ಸೋಜ ಎಂಬಾಕೆಯು ಇಂಗ್ಲಿಷನಲ್ಲಿ ವಿಶಾರದೆ ಎಂದು ಮದ್ರಾಸು ಯುನಿವರ್ಸಿಟಿಯವರು ಆಕೆಗೆ ಕೃಷ್ಣಾಬಾಯಿ ಸ್ವರ್ಣ ಪದಕವನ್ನು ಬಹುಮಾನವಾಗಿತ್ತರು. ಇದೇ ರೀತಿ 1926ರಲ್ಲಿ ಶ್ರೀಮತಿ ಕ್ಲೊಟಿಲ್ಡ್ ಆಲ್ಬುಕೆರ್ಕ್ ಎಂಬಾಕೆಯೂ ಅದೇ ಸ್ವರ್ಣ ಪದಕವನ್ನು ಗೆದ್ದುಕೊಂಡಿರುವಳು. ಇದಲ್ಲದೆ ಕೆಳಗೆ ಕೊಟ್ಟಿರುವ ಪಟ್ಟಿಯಿಂದ ಇಲ್ಲಿನ ಶಿಕ್ಷಣದ ಫಲಗಳು ಗೊತ್ತಾಗುವುವು.

### ಇಂಟರ್‌ಮಿಡಿಯೆಟ್

| ವರ್ಷ. | ಕಳಿಸಿದ್ದು. | ಉತ್ತೀರ್ಣದಾದುದು. | I ಕ್ಲಾಸ್. | ವಿಶೇಷ ನಿಪುಣತೆ |
|---|---|---|---|---|
| 1922 | 6 | 5 | 3 | 1 |
| 1923 | 10 | 4 | — | — |
| 1924 | 21 | 11 | 2 | 3 |
| 1925 | 15 | 12 | — | — |
| 1926 | 22 | 20 | 6 | |

### ಬಿ. ಏ.

| | | | |
|---|---|---|---|
| 1926 | 10 | 10 | (ಇಂಗ್ಲಿಷ ಭಾಷಾ ಸಾಹಿತ್ಯ) |
| | 11 | 10 | (ಇತಿಹಾಸ) |

ವಿದ್ಯಾರ್ಥಿನಿಯರಿಗೆ ಸರಕಾರವು ಕೆಲವು ವೇತನಗಳನ್ನು ಕೊಡುತ್ತಿದೆ. ಕೊಲೆಜಿನವರೇ ಅವರಿಗೆ ಧರ್ಮಿಷ್ಟರು ಒಪ್ಪಿಸಿ ಕೊಟ್ಟಿರುವ ಹಣದಿಂದ ಕೆಲವು ವೇತನಗಳನ್ನು ಕೊಲೆಜು ತರಗತಿಗಳಿಗೆ ಶೆರುವುದುಂಟು.

ವಿದ್ಯಾರ್ಥಿನಿಯರಿಗೆ ಬಹುಮಾನಗಳನ್ನು ಕೊಡುವ ಬದಲಾಗಿ, ಪರೀಕ್ಷೆಯಲ್ಲಿ ಅವರು ಪಡೆದ ಸ್ಥಾನವು ಯಾವುದೇ ಇರಲಿ, ಪರೀಕ್ಷೆಗಳೇ ಯಾವಾಗಲೂ ನಿಜವಾದ ಯೋಗ್ಯತೆ ಸೂಚಿಸುವುದಿಲ್ಲವಾದ ಕಾರಣ, ಅವರು ಬಿ. ಏ. ಪದವೀ ಏರಿದೊಡನೆ, ಒಂದೊಂದು ಚಿನ್ನದ ಬ್ರೂಚ ಆಭರಣವನ್ನು ಕೊಲೆಜಿನ ಸ್ಮಾರಕವಾಗಿ ಅವರಿಗೆ ಕೊಡುವರೆ ಕೊಲೆಜಿನ ಅಧಿ



Our Maiden batch of Graduates, 1926

ಕಾರಿಗಳ ನಿರ್ಣಯವಿದೆ. ಇದರಿಂದ ಹಳೇ ವಿದ್ಯಾರ್ಥಿನಿಯರಿಗೂ ಕೊಲೆಜಿಗೂ ಪರಸ್ಪರಾನುರಾಗ ಬೆಳೆವುದೆಂದು ವಿಶ್ವಾಸ.

ಕೊಲೆಜು ಇರುವ ಸ್ಥಳವು ಎತ್ತರವಾಗಿದ್ದು, ಅದರ ಸುತ್ತಲೆಲ್ಲ ನೋಟಕ್ಕೆ ರಮಣೀಯವಾಗಿದೆ. ಆರೋಗ್ಯಪಾಲನೆಗೆ ಇಂಥ ವಿಶಾಲವಾದ ಸ್ಥಳಗಳೇ ಅಗತ್ಯ. ಬೆಡ್‌ಮಿಂಟನ್ ಮತ್ತು ಟೆನ್ನಿಸ್ ಆಡುವುದಕ್ಕೆ ವಿದ್ಯಾರ್ಥಿನಿಯರಿಗೆ ಬೇಕಾದಷ್ಟು ಸೌಕರ್ಯಗಳಿವೆ. ಅಧ್ಯಾಪನೆಯ ಕೆಲಸದಲ್ಲಿ ಸೇರಿರುವ ಸನ್ಯಾಸಿನಿಯರು ಯಾವಾಗಲೂ ಕೊಲೆಜಿನಲ್ಲೇ ಇರುವ ಕಾರಣ, ವಿದ್ಯಾರ್ಥಿನಿಯರನ್ನು ತಮ್ಮ ಮಕ್ಕಳಂತೆ ಜತನದಿಂದ ಕಾಣುತ್ತ, ಅವರ ಮಾನಸಿಕ ದೈಹಿಕ ಮತ್ತು ನೈತಿಕ ಬೆಳವಣಿಗೆಯ ವಿಚಾರಗಳಲ್ಲಿ ಎಚ್ಚರದಿಂದಿರುವರು. ಕೊಲೆಜಿನ ಆದರ್ಶಗಳನ್ನು ಸೂಚಿಸುವ ಕೆತ್ತನೆಯ ಒಡ್ಯಾಣದ ಮೇಲೆ, ಕೊಲೆಜಿನ ಅಭಿಮಾನ ದೇವತೆಯೆನ್ನುವ ಸೈಂಟ್ ಎಗ್ನೇಸಳ ವಿಗ್ರಹವೂ, ಕಲ್ಪವೃಕ್ಷವೂ, ಕುರಿಮರಿಯೂ, ಇದ್ದು, Deus Fortitudo Mea ಎಂಬ ಲತೀನ ವಾಕ್ಯವಿದೆ. ಬರೇ 13 ವರ್ಷ ಪ್ರಾಯದ ಎಗ್ನೆಸ ಕುಮಾರಿಯು ರಕ್ತಸಾಕ್ಷಿಯಾಗಿ ಮಡಿದಾಗ, ಅವಳ ಬಾಯಿಂದ ಹೊರಟ 'ದೇವರೇ ನನ್ನ ಬಲವು' ಎಂಬ ನುಡಿಯೇ ಈ ದಿವ್ಯ ವಾಕ್ಯವು.

ಇಷ್ಟು ಶ್ರದ್ಧಾಬಲವೂ ಪ್ರಕೃತಿ ಬಲವೂ ದೇವಬಲವೂ ಉಳ್ಳ ಈ ವಿದ್ಯಾಲಯವು ಇನ್ನೂ ಇನ್ನೂ ಅತಿಶಯವಾಗಿ ಕೀರ್ತಿಲಾಭವನ್ನೂ ಪಡೆಯುತ್ತ, ನಮ್ಮೂರ ಬಾಲಿಕಾವೃಂದಕ್ಕೆ ಕಲ್ಯಾಣವನ್ನುಂಟುಮಾಡಿ, ಕನ್ನಡ ಜಿಲ್ಲೆಗೆ ಹೆಸರು ತರುವುದೆನ್ನುವುದಕ್ಕೆ ಬೇರೊಂದು ಉದ್ಗಾರವನ್ನೆತ್ತುವ ಅಗತ್ಯವಿಲ್ಲ.



# ತುಳುನಾಡಿನ ಕೆಲವು ಪ್ರಾಚೀನ ಕವಿಗಳು

ಲೇಖಕ : ಶ್ರೀ। ಯಮ್. ಜಿ. ಐಗಳ್ ಅಧ್ಯಾಪಕ, ಬಂಟವಾಳ

ತುಳು ದೇಶವು ಬಹಳ ಪುರಾತನ ಕಾಲದಿಂದಲೂ ಕರ್ನಾಟಕ ರಾಜ್ಯದ ಒಂದು ಭಾಗವಾಗಿಯೇ ಇತ್ತು. ಅದುದರಿಂದ ಈ ದೇಶದ ಎಲ್ಲ ಗ್ರಂಥಗಳನ್ನು ಕನ್ನಡ ಭಾಷೆಯಲ್ಲಿಯೇ ಬರೆದಿರುತ್ತಾರೆ. ಕನ್ನಡ ರಾಜ್ಯದಲ್ಲಿ ಹಲವು ಕವಿಗಳು ಆಯಾ ಸಮಯದಲ್ಲಿ ಹುಟ್ಟಿ ಹಲವು ಗ್ರಂಥಗಳನ್ನು ಬರೆದಿರುವರು.

ತುಳು ದೇಶದಲ್ಲಿಯೂ ಹಲವು ಕವಿಗಳು ಪುರಾತನ ಕಾಲದಿಂದಲೂ ಹುಟ್ಟಿ ಹಲವು ಕಾವ್ಯ ಗ್ರಂಥಗಳನ್ನು ಬರೆದಿರುವರು. ಈ ಕವಿಗಳಲ್ಲಿ ಕೆಲವರು ಜೈನ ಕವಿಗಳು, ಕೆಲವರು ವೈಷ್ಣವ ಕವಿಗಳು, ಕೆಲವರು ಸ್ಮಾರ್ತರು. ಜೈನ ಕವಿಗಳು ಇಲ್ಲಿಯ ತುಳು ಜೈನ ಅರಸರಾದ ಬಂಗರ ಅರಸರು, ಚೌಟರು, ಕಾರ್ಕಳ ಬೈರರಸ ಒಡೆಯರು, ಭಟ್ಕಳದ ಭಾರಸ ಕುಟುಂಬದ ರಾಣಿಯಾದ ಭೈರಾದೇವಿ, ಸುರಾಲ ತೋಳಹಾರರು, ಮುಲಿಕೆ ಸಾವಂತರು, ಮುಂತಾದವರ ಉದಾರಾಶ್ರಯದಿಂದ ದೊಡ್ಡ ದೊಡ್ಡ ಜಿನಮತ ಸಂಬಂಧವಾದ ಹಲವು ಕಾವ್ಯಗಳನ್ನು ಬರೆದಿರುವರು.

## (1) ಜೈನ ಕವಿಗಳು

**ಕಲ್ಯಾಣ ಕೀರ್ತಿ.** ಈ ಕವಿಯು 1439ರಲ್ಲಿ ಇದ್ದಂತೆ ಕಾಣುತ್ತದೆ. ಇವನು ಜೈನ ಕವಿಯಾಗಿರುವನು. ಇವನ ದೀಕ್ಷಾ ಗುರುವು ಮೂಲಸಂಘದ ದೇಶಿಯಗಣದ ಲಲಿತ ಕೀರ್ತಿ ಎಂಬವರು. ಈ ಕವಿಯು ಕಾರ್ಕಳ ಜೈನರಾಜನಾದ ಪಾಂಡ್ಯ ರಾಯನ ಕಾಲದಲ್ಲಿದ್ದನು. ಇವನು ಜ್ಞಾನ ಚಂದ್ರಾಭ್ಯುದಯ, ಕಾಮನ ಕಥೆ, ಅನುಪ್ರೇಕ್ಷೆ, ಜಿನಸ್ತುತಿ, ತತ್ವ ಭೇದಾಷ್ಟಕ, ಸಿದ್ಧರಾಶಿ ಎಂಬ ಗ್ರಂಥಗಳನ್ನು ಬರೆದಿರುವನು. ಜ್ಞಾನ ಚಂದ್ರಾಭ್ಯುದಯ ಎಂಬ ಗ್ರಂಥವನ್ನು ವಾರ್ಧಿಕ, ಭಾಮಿನಿ, ಪರಿವರ್ಧಿನಿ ಷಟ್ಪದಿಗಳಲ್ಲಿ ಬರೆದಿದೆ. ಇದನ್ನು ಸಂಧಿಗಳಾಗಿ

ವಿಭಾಗಿಸಲಿಲ್ಲ. ಇದರಲ್ಲಿ 908 ಪದ್ಯಗಳಿವೆ. ಇದರಲ್ಲಿ ಜ್ಞಾನ ಚಂದ್ರನೆಂಬ ರಾಜನು ತಪಸ್ಸು ಮಾಡಿ ಮುಕ್ತಿಯನ್ನು ಪಡೆದ ಕಥೆ ಇದೆ. **ಕಾಮನ ಕಥೆ.** ಇದನ್ನು ಸಾಂಗತ್ಯದಲ್ಲಿ ಬರೆದಿದೆ. ನಾಲ್ಕು ಸಂಧಿಗಳಿವೆ. 331 ಪದ್ಯಗಳು ಇವೆ. ಅಲ್ಲಲ್ಲಿ ಕಂದ ಮತ್ತು ಷಟ್ಪದಿ ವಚನಗಳೂ ಇವೆ. ಇದರಲ್ಲಿ ಜೈನಮತಾನುಸಾರವಾಗಿ ಕಾಮನ ಕಥೆಯನ್ನು ವಿವರಿಸಿ ಬರೆದಿದೆ. ಕವಿಯು ಗ್ರಂಥಾವತಾರದಲ್ಲಿ ನೇಮಿ ಜಿನ, ಸರಸ್ವತಿ, ಜಿನ ಮುನಿ, ತನ್ನ ಗುರುವಾದ ಲಲಿತ ಕೀರ್ತಿ ಇವರನ್ನು ಹೊಗಳಿದ್ದಾನೆ. **ಅನುಪ್ರೇಕ್ಷೆ.** ಈ ಗೃಂಥದಲ್ಲಿ 74 ಪದ್ಯಗಳಿವೆ. **ಜಿನಸ್ತುತಿ.** ಇದರಲ್ಲಿ 27 ಕಂದಗಳವೆ.

**ಕೋಟೀಶ್ವರ.** ಈ ಕವಿಯು 1500ರ ಕಾಲದಲ್ಲಿ ಇದ್ದಂತೆ ಕಾಣುತ್ತದೆ. ಇವನ ತಂದೆಯಾದ ತಮ್ಮಣ ಸೆಟ್ಟಿಯು ತೋಳಹಾರ ಅರಸರ ರಾಜ್ಯದಲ್ಲಿ ಬಯಿಂದೂರು ಕೋಟೆಯ ಸೇನಾಧಿಪತಿಯಾಗಿದ್ದನು. ಇವನ ತಾಯಿಯ ಹೆಸರು ರಾಮಕ್ಕೆ. ಇವಳು ಸಂಗೀತಪುರದ ಸಾಹುಕಾರನಾದ ಕಾಮಣ ಸೆಟ್ಟಿಯ ಸಹೋದರಿ. ಈ ಕವಿಯು ಶ್ರವಣಬೆಳುಗುಳದ ಪಂಡಿತ ಯೋಗಿಯ ಶಿಷ್ಯನಾದ ಪ್ರಭಾಚಂದ್ರನ ಶಿಷ್ಯನು. ಇವನು ಹೈಗದೇಶದ ಮಂಡಲೇಶ್ವರನಾದ ಸಂಗಮನ ಆಜ್ಞಾನುಸಾರವಾಗಿ **ಜೀವಂಧರ ಷಟ್ಪದಿ** ಯನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿರುತ್ತಾನೆ. ಇದರಲ್ಲಿ 10 ಸಂಧಿಗಳು ಇವೆ. ಈ ಗ್ರಂಥದಲ್ಲಿ ಜೀವಂಧರನ ಕಥೆ ಹೇಳಿದೆ. ಗ್ರಂಥದ ಆದಿಯಲ್ಲಿ ಜಿನಸ್ತುತಿ. ಬಳಿಕ ಕವಿ ಸಿದ್ಧಾದಿಗಳು, ರತ್ನತ್ರಯ ಸರಸ್ವತಿ, ಯಕ್ಷಯಕ್ಷಿಯರು, ಇವರನ್ನು ಸ್ತುತಿಸಿ, ನಂತರ ಕೊಂಡಕುಂದ ಸಮಂತಭದ್ರ ಪಂಡಿತಮುನಿ ಧರ್ಮ ಭೂಷಣ ಭಟ್ಟಾ ಕಳಂಕ ದೇವಕೀರ್ತಿ, ಮುನಿಭದ್ರ, ಲಲಿತಕೀರ್ತಿ, ವಿಜಯಕೀರ್ತಿ ಈ ಗುರುಗಳನ್ನು ಹೊಗಳುತ್ತಾನೆ.

**ರತ್ನಾಕರವರ್ಣಿ.** ಇವನು ಜೈನಕವಿ. ಇವನಿಗೆ ರತ್ನಾಕರಸಿದ್ಧ, ರತ್ನಾಕರ ಅಣ್ಣಗಳು, ಎಂಬ ಹೆಸರು ನಿರಂಜನ ಸಿದ್ಧ ಎಂಬ ಬಿರುದು ಇದ್ದಂತೆ ತೋರುತ್ತದೆ. ಇವನು ತುಳು ದೇಶದ ಮೂಡಬಿದರೆಯಲ್ಲಿ ಸೂರ್ಯವಂಶದ ಅರಸರಾದ ಚೌಟ ಅರಸರ ವಂಶದ ದೇವರಾಯನ ಮಗನು. ಇವನು ಚಿಕ್ಕ ಪ್ರಾಯದಲ್ಲಿಯೇ ಕಾವ್ಯಾಲಂಕಾರ ಲಕ್ಷಣ ಶಾಸ್ತ್ರದಲ್ಲಿ ಬಹಳ ನಿಪುಣನಾಗಿ, ಸಾರತ್ರಯಕ್ಕೆ ಕೇಶವವರ್ಯರು ರಚಿಸಿದ ವ್ಯಾಖ್ಯಾನಗಳನ್ನು, ಕುಂದ ಕುಂದಾರ್ಯೋಕ್ತ ಅಧ್ಯಾತ್ಮ ಸಿದ್ಧಾಂತಕ್ಕೆ ಪ್ರಭೆಂದು ಎಂಬವರು ಮಾಡಿದ ಟೀಕೆಯನ್ನೂ ಸಮಾಧಿಶತಕ, ಏಕಸಸ್ತುತಿ, ಸ್ವರೂಪ ಸಂಭೋದನೆ ಮೊದಲಾದ ಅನೇಕ ಆಗಮಗಳನ್ನು ಚೆನ್ನಾಗಿ ಕಲಿತು, ಕವೀಶ್ವರನಾದನು. ಅನಂತರ ಇವನು ಕಾರ್ಕಳದ ಚಂದ್ರವಂಶದ ಅರಸನಾದ ಭೈರಸ ಒಡೆಯನ ಸಭೆಯಲ್ಲಿ ಶೃಂಗಾರ ಕವಿ ಎಂದು ಹೆಸರು ಪಡೆದನು. ವಿದ್ವಾಂಸರಲ್ಲಿ ಅತಿ ಶ್ರೇಷ್ಠನಾಗಿದ್ದು, ಯೋಗರತ್ನಾಕರ ಶ್ರಾಸವನ್ನು ಅಭ್ಯಾಸಮಾಡಿದನು. ಅನಂತರ ಈ ಕವಿಗೆ ರತ್ನಾಕರ ಎಂಬ ಹೆಸರು ಬಂತು. ಇವನು ಆಸ್ಥಾನ ಕವಿಯಾಗಿರುವಾಗ ಭರತ ಒಡೆಯನ ಮಗಳು ಇವನನ್ನು ಮೋಹಿಸಲು ಇವನು ಯೋಗ ಸಾಧನೆಯಿಂದಲೇ ಅವಳು ಮಾಳಿಗೆಯಲ್ಲಿ ಮಲಗಿರುವ ಕೋಣೆಗೆ ಹೋಗುತಿದ್ದನು. ಕವಿಯು ಈ ಕೆಲಸವು ಅರಸನಿಗೆ ತಿಳಿದೊಡನೆ ಅವನನ್ನು ರಾತ್ರೆಯಲ್ಲಿ ಹಿಡಿಯಬೇಕೆಂದು ಅರಸನು ಆಲೋಚಿಸಿದನು. ಆಗ ರತ್ನಾಕರ ವರ್ಣಿಯು ಅದೇ ರಾತ್ರೆ ತನ್ನ ಗುರುವಾದ ಮಹೇಂದ್ರ ಕೀರ್ತಿಗಳಿಂದ ಸನ್ಯಾಸಧೀಕ್ಷೆಯನ್ನು ಪಡೆದು ಆಗಮಗಳನ್ನು ಕಲಿತು ಅತಿ ನಿಪುಣನಾದನು.

ಈ ಸಮಯದಲ್ಲಿ ವಿಜಯಕೀರ್ತಿಗಳೆಂಬ ಪಟ್ಟಾಚಾರ್ಯರ ಶಿಷ್ಯರಾದ ವಿಜಯಣ್ಣಗಳು ದ್ವಾದಶಾನುಪ್ರೇಕ್ಷೆ ಎಂಬ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಸಂಗೀತ ವೃತ್ತವಚನದಿಂದ ಬರೆದರು ಅದಕ್ಕಾಗಿ ಅವರನ್ನು ಆನೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿಸಿದರು. ಈ ಸಂಗತಿಯು ರತ್ನಾಕರ ವರ್ಣಿಯವರಿಗೆ ತಿಳಿದು ಇವರು ಭರತೇಶ್ವರ ವೈಭವ ಎಂಬ ಗೃಂಥವನ್ನು ಬರೆದರು. ಆಗ ಇವರನ್ನು ಆನೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿಸಬೇಕೆಂಬ ಆಲೋಚನೆಯಾಗಲು ಅದರಲ್ಲಿ ಎರಡು ಮೂರು ವಾಕ್ಯಗಳು ಪುರಾಣಕ್ಕೆ ವಿರೋಧವಾಗಿವೆ ಎಂದು ವಾದಿಸಿದರು. ಇದನ್ನು ಕೇಳಿ ರತ್ನಾಕರ ವರ್ಣಿಯವರಿಗೆ ಬೇಸರವುಂಟಾಯಿತು. ಕಾರ್ಕಳದಲ್ಲಿದ್ದ 700 ಜೈನರ ಮನೆಗಳಲ್ಲಿ ಒಬ್ಬರಾದರೂ ಇವರಿಗೆ ಭಿಕ್ಷೆಯನ್ನು ಕೊಡದಿರಲು ತನ್ನ ತಂಗಿಯ ಮನೆಗೆ ಹೋಗಿ ಭಿಕ್ಷೆಯನ್ನು ಮಾಡಿ ಜೈನ ಮತವೇ ತನಗೆ ಬೇಡವೆಂದು ವೀರಶೈವನಾದರು. ಅನಂತರ ಅಪರಾಜಿತೇಶ್ವರ ಶತಕೆ, ತ್ರಿಲೋಕ ಶತಕ, ಅಧ್ಯಾತ್ಮಗೀತ ಎಂಬ ಗ್ರಂಥಗಳನ್ನು ಬರೆದರು.

**ಭರತೇಶ್ವರ ಚರಿತೆ**ಯನ್ನು ಸಾಂಗತ್ಯದಲ್ಲಿ ಬರೆದಿದೆ. ಇದರಲ್ಲಿ 80 ಸಂಧಿಗಳು ಇವೆ. 9969 ಪದ್ಯಗಳಿವೆ. ಇದಕ್ಕೆ ಭರತೇಶ್ವರ ವೈಭವ, ಭರತೇಶ ಸಂಗತಿ ಎಂಬ ಹೆಸರುಗಳೂ ಇವೆ. ಇದರಲ್ಲಿ ಪ್ರಥಮ ತೀರ್ಥಂಕರರಾದ ಪುರುಪರಮೇಶ್ವರನ ಹಿರಿಯ ಕುಮಾರ ಭರತನು ಎಲ್ಲ ತರದ ರಾಜ್ಯ ಸುಖಗಳನ್ನು ಬಿಟ್ಟು ಜಿನನಾದ ಸಂಗತಿಯು ಹೇಳಿದೆ. ಗ್ರಂಥದ ಆದಿಯಲ್ಲಿ ಆಧಿನಾಥನಸ್ತುತಿ ಇದೆ. ನಂತರ ನವಕೋಟಿ ಮುನಿಗಳು, ಹಂಸನಾಥಗುರು, ಸರಸ್ವತಿ ಇವರ ಸ್ತುತಿಯಿದೆ. **ತ್ರಿಲೋಕ ಶತಕ** ಇದ ಕಂದದಲ್ಲಿ ಬರೆದಿದೆ. 128 ಪದ್ಯಗಳಿವೆ ಈ ಗ್ರಂಥದಲ್ಲಿ ಜೈನಮತಾನುಸಾರವಾಗಿ ಪ್ರಪಂಚದ ಸ್ಥಿತಿ ಹೇಳಿದೆ. ಗ್ರಂಥವು ನರಕ, ಭುವನ ಲೋಕ, ನರಲೋಕ, ವೈಂತರ ಲೋಕ, ಜ್ಯೋತಿಲೋಕ, ಸ್ವರ್ಗ ಲೋಕ, ಭೋಗಭೂಮಿ, ನಿಗೋದ, ಸಿದ್ಧಲೋಕ ಇತ್ಯಾದಿ ವಿಭಾಗಗಳನ್ನು ಒಳಕೊಂಡಿದೆ. **ಅಪರಾಜಿತೇಶ್ವರ ಶತಕ.** ಇದನ್ನು ವೃತ್ತದಲ್ಲಿ ಬರೆದಿದೆ. ಇದರಲ್ಲಿ 127 ಪದ್ಯಗಳಿವೆ. ಪ್ರತಿ ಪದ್ಯವೂ ಅಪರಾಜಿತೇಶ್ವರಾ ಎಂದು ಮುಗಿಯುತ್ತದೆ. ಇವು ಗಳಲ್ಲದೆ ಇವರು ಹಾಡುಗಳನ್ನು ಬರೆದಿರುವರು. ಇವುಗಳ ಅಣ್ಣಗಳ ಪದಗಳು ಅಥವಾ ರತ್ನಾಕರಣ್ಣಗಳ ಪದ ಜಾತಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ನೀತಿಯನ್ನೂ ತತ್ವವನ್ನೂ ಬೋಧಿಸುತ್ತವೆ.

## ಚಂದ್ರಮ

ಇವನು ಜೈನ ಕವಿ. ಇವನು ಕಾರ್ಕಳ ಭೈರವರಾಯುರ ಕುಟುಂಬದ ಇಮ್ಮಡಿ ಭೈರವರಾಯನ ಕಾಲದಲ್ಲಿದ್ದನೆಂದು ಹೇಳಬಹುದು. ಇವನ ವಿದ್ಯಾಗುರು ಶ್ರುತಸಾಗರ. ವ್ರತ ಗುರು ಮಹೇಂದ್ರ ಕೀರ್ತಿ. ಈ ಕವಿಯು ಕಾರ್ಕಳ ದಾನಶಾಲೆಯು ಮಠದ ಗುರುಗಳಾದ ಲಲಿತ ಕೀರ್ತಿ ಭಟ್ಟಾರಕನ ಆಜ್ಞಾನುಸಾರವಾಗಿ ಕಾರ್ಕಳ ಗೋಮಟೇಶ್ವರ ಚರಿತೆಯನ್ನು ಬರೆದಿರುವನು.

**ಕಾರ್ಕಳ ಗೋಮಟೇಶ್ವರ ಚರಿತೆ:** ಇದನ್ನು ಸಾಂಗತ್ಯದಲ್ಲಿ ಬರೆದಿದೆ. ಸಂಧಿಗಳು 17 ಇವೆ. 2318 ಪದ್ಯಗಳು ಇವೆ. ಇದರಲ್ಲಿ ಭುಜಬಲಿಯ ಚರಿತ್ರೆಯೂ ಕಾರ್ಕಳದಲ್ಲಿ ಅವನ ವಿಗ್ರಹವನ್ನು ಪ್ರತಿಷ್ಠೆ ಮಾಡಿದ ವಿಷಯವೂ ಇದೆ. ಗ್ರಂಥದ ಆದಿಯಲ್ಲಿ ನೇಮಿಜಿನ ಸ್ತುತಿ ಇದೆ. ಬಳಿಕ ಭುಜಬಲಿ, ಚಂದ್ರನಾಥ, ಸಿದ್ಧಾದಿಗಳು, ಯಕ್ಷಯಕ್ಷಿಯರು, ಬೆಟ್ಟದ ಬ್ರಹ್ಮ, ಭೈರವರಾಯನ ಕುಲದೇವತೆಯಾದ ಪೊಂಬುಜ್ಜ ಪದ್ಮಾಂಬೆ, ಇವರನ್ನು ಹೊಗಳಿ ಮಹೇಂದ್ರ ಕೀರ್ತಿಯಿಂದ ಶ್ರುತಸಾಗರನ ವರೆಗೆ ಗುರುಗಳನ್ನು ಸ್ಮರಿಸಿದ್ದಾನೆ.

## ಆದಿಯಪ್ಪ

ಇವನು ಜೈನ ಕವಿ. ಈ ಕವಿಯು ಭಟ್ಕಳದ ಭಾರಸ ಕುಟುಂಬದ ಭೈರವರಾಯನ ಗುರುವಾದ ವೀರಸೇನನ ಆಜ್ಞಾನುಸಾರವಾಗಿ ಧನ್ಯ ಕುಮಾರ ಚರಿತ್ರೆಯನ್ನು ಬರೆದಿರುವನು. ಈ ಗ್ರಂಥವನ್ನು ಸಾಂಗತ್ಯದಲ್ಲಿ ಬರೆದಿದೆ. 410 ಪದ್ಯಗಳಿವೆ.

## ಚಂದ್ರಮ

ಇವನು ಜೈನ ಕವಿ. ಇವನು ತುಳು ಮಧುರೆ ದೇಶದ ಅಂದರೆ ಬಾರ್ಕೂರು ಸಂಸ್ಥಾನದ ಅಳಿಯರ ಪುರದವನು. ಇವನು **ಲೋಕಸ್ವರೂಪ** ಎಂಬ ಗ್ರಂಥವನ್ನು ಬರೆದಿರುತ್ತಾನೆ. ಚಂದ್ರಕೀರ್ತಿ ಯೋಗೀಶ್ವರರ ಶಿಷ್ಯನಾಗಿರುತ್ತಾನೆ. **ಲೋಕ ಸ್ವರೂಪ.** ಇದನ್ನು ಕಂದ ಪದ್ಯದಲ್ಲಿ ಬರೆದಿದೆ. 140 ಪದ್ಯಗಳಿವೆ. ಇದರಲ್ಲಿ ಮೂರು ಲೋಕಗಳ ಸ್ಥಿತಿ ವರ್ಣಿತವಾಗಿದೆ.

## ಪದ್ಮನಾಭ

ಇವನು ಜೈನ ಕವಿ. ತುಳು ದೇಶದ ಮೂಲಿಕೆ ಸಾವಂತರ ಆಶ್ರಯದಲ್ಲಿದ್ದು ಈ ಅರಸರ ಕುಲದೇವಿಯಾದ ಪದ್ಮಾವತಿ ಅಮ್ಮನವರ ವಿಷಯ ಪದ್ಮಾವತಿ ಚರಿತೆಯನ್ನು ಬರೆದಿರುವನು. ಈ ಗ್ರಂಥಕ್ಕೆ ಜಿನದತ್ತರಾಯ ಚರಿತ್ರೆ ಎಂಬ ಹೆಸರು ಇದೆ. ಇದರಲ್ಲಿ 12 ಸಂಧಿಗಳೂ 1671 ಪದ್ಯಗಳೂ ಇವೆ.

## ಚಂದ್ರಶೇಖರ

ಇವನು ಜೈನ ಕವಿ. ಇವನು ತುಳು ಜೈನರಾಜರಾದ ಬಂಗರಸರಲ್ಲಿ ಒಬ್ಬರಾದ 1700ರಲ್ಲಿ ಆಳಿಕೊಂಡಿದ್ದ ಲಕ್ಷ್ಮಪ್ಪರಸ ಬಂಗ ರಾಜನ ಕಾಲದಲ್ಲಿ ವಾಣಿಮಂಗಳೂರಿನ ಹತ್ತಿರವಿರುವ ನಂದಾವರ ರಾಜಧಾನಿಯಲ್ಲಿಯಿದ್ದು ಬಂಗರಸರ ಅಪ್ಪಣೆ ಪ್ರಕಾರ ರಾಮಚಂದ್ರ ಚರಿತವೆಂಬ ಕಾವ್ಯವನ್ನು ಬರೆದನು. ಈ ಗ್ರಂಥದ 16 ಸಂಧಿಗಳಲ್ಲಿ 2151 ಪದ್ಯಗಳನ್ನು ಬರೆದನು. ಅನಂತರ ಬಂಗರ ಅರಸರಿಗೆ ಕಠಿಣತರದ ಕಷ್ಟಗಳು ಬಂದು ರಾಜ್ಯವೂ ನಷ್ಟವಾಯಿತು. ಅರಸರನ್ನು ಸೆರೆ ಹಿಡಿದು ಇಕ್ಕೇರಿಗೆ ಕೊಂಡು ಹೋದರು. ಎಲ್ಲ ಕೆಲಸವು ನಿಂತು ಹೋಯಿತು. ಕಾವ್ಯವನ್ನು ಪೂರ್ಣ ಮಾಡಲು ಸಾಧ್ಯವಾಗಲಿಲ್ಲ, ಅನಂತರ ಪದ್ಮನಾಭನೆಂಬ ಕವಿಯು ಇದನ್ನು ಪೂರ್ಣಮಾಡಿದನು.

## (2) ವೈಷ್ಣವ ಕವಿಗಳು

### ವಾದಿರಾಜ ಸ್ವಾಮಿಯವರು

ಇವರು ಉಡುಪಿಯ ಅಷ್ಟ ಮಠಗಳಲ್ಲಿ ಒಂದಾದ ಸೋದೆ ಮಠದ ಸ್ವಾಮಿಯಾಗಿದ್ದರು. ಇವರು ಮಾಧ್ವ ಕವಿ. ಉತ್ತರ ಕನಡ ಜಿಲ್ಲೆಯ ಸೋದೆಯಲ್ಲಿ ಇವರ ವೃಂದಾವನವಿದೆ. ಇವರು 1607ರಲ್ಲಿ ಗತಿಸಿದರು. ಇವರ ಗ್ರಂಥಗಳಲ್ಲಿ ಹಯವದನ ಎಂಬ ಅಂಕಿತವು ಇದೆ.

ಇವರು ವೈಕುಂಠ ವರ್ಣನೆ, ಸ್ವಪ್ನಗದ್ಯ, ಲಕ್ಷ್ಮಿಯಶೋಭಾನೆ, ಕೀರ್ತನೆಗಳು, ಭಾರತ ತಾತ್ಪರ್ಯ ನಿರ್ಣಯ ಟೀಕೆ ಎಂಬ ಗ್ರಂಥಗಳನ್ನು ಬರೆದಿದ್ದಾರೆ. **ವೈಕುಂಠ ವರ್ಣನೆ.** ಇದು ಸಾಂಗತ್ಯ, ಮತ್ತು ಹಾಡು ಇವುಗಳನ್ನು ಒಳಕೊಂಡಿದೆ. ನಾಲ್ಕು ಸಂಧಿಗಳಿವೆ. ಇದಕ್ಕೆ ತತ್ವಸಾರದ ಸೊಬಗಿನ ಸೋನೆ ಎಂಬ ಹೆಸರೂ ಉಂಟು. ಆರಂಭದಲ್ಲಿ ವಿಷ್ಣು ವೇದವ್ಯಾಸ, ಸರಸ್ವತಿ, ಆನಂದತೀರ್ಥ ಇವರ ಸ್ತುತಿ ಇದೆ. **ಸ್ವಪ್ನ ಗದ್ಯ.** ಇದಕ್ಕೆ ಗದ್ಯ ಎಂಬ ಹೆಸರಿದ್ದರೂ ಇದರಲ್ಲಿ 45 ಭಾಮಿನಿ ಷಟ್ಪದಿಗಳಿವೆ. **ಲಕ್ಷ್ಮಿಯ ಶೋಭಾನೆ.** ಇದರಲ್ಲಿ 112 ಪದಗಳಿವೆ. **ಭಾರತತಾತ್ಪರ್ಯ ನಿರ್ಣಯ ಟೀಕೆ.** ಇದು ಮಧ್ವಗುರುಗಳು ರಚಿಸಿದ ಭಾರತ ತಾತ್ಪರ್ಯ ನಿರ್ಣಯಕ ಕನ್ನಡ ವ್ಯಾಖ್ಯಾನವಾಗಿದೆ. **ಕೀರ್ತನೆಗಳು.** ಇವು ವಿಷ್ಣು ಸ್ತುತಿ ರೂಪವಾಗಿಯೂ ವೇದಾಂತ ಬೋಧಕವಾಗಿಯೂ ಇವೆ.

## ಮಾಧ್ವದಾಸ.

ಇವನು ಮಾಧ್ವಕವಿ. ಇವನ ಊರು ಧರ್ಮಸ್ಥಳ. ಇವನ ಪದಗಳಲ್ಲಿ ಕುಡುಮ ಪುರೇಳ ಎಂಬ ಮುದ್ರಿಕೆಯು ಇದೆ. ಧರ್ಮಸ್ಥಳದ ಮುಂಚಿನ ಹೆಸರು ಕುಡುಮ.

---

## ಯಕ್ಷಗಾನ ಕವಿಗಳು.

ಯಕ್ಷಗಾನ ಕವಿಗಳಲ್ಲಿ ತುಳುದೇಶದ ಮೂಲಿಕೆರಾಜ್ಯದಲ್ಲಿ ವೆಂಕಣ ಕವೀಶ್ವರರೂ, ಮಟ್ಟಿ ವಾಸುದೇವ ಪ್ರಭುಗಳೂ ಹಲವು ಯಕ್ಷಗಾನ ಪ್ರಸಂಗಗಳನ್ನು ದಾಸರ ಪದಗಳನ್ನು ರಚಿಸಿರುವರು. ಇವರು ಗೌಡಸಾರಸ್ವತ ಕವಿಗಳು.

ಕುಂಬಳೆಯ ಅರಸನ ಮುಖ್ಯಪಟ್ಟಣವಾದ ಕುಂಬಳೆಯ ಹತ್ತಿರವಿರುವ ಕೇಡಿಕಾವಿನ ಶಿವಬ್ರಾಹ್ಮಣ ಜಾತಿಯವರಾದ ಕವಿ ಪಾರ್ತಿ ಸುಬ್ಬನವರು ಪುತ್ರಕಾಮೇಷ್ಟಿ, ಪಂಚವಟಿ ವಾಲಿಸುಗ್ರೀವ ಕಾಳಗ ಉಂಗುರ ಸಂಧಿ, ಸೇತುಬಂಧನ, ಅಂಗದ ಸಂಧಾನ ಮುಂತಾದ ಯಕ್ಷಗಾನ ಪ್ರಸಂಗಗಳನ್ನು ಬರೆದಿರುವರು. ಇವುಗಳಲ್ಲದೆ ಸಭಾಲಕ್ಷಣವೆಂಬ ಗ್ರಂಥವನ್ನು ಬರೆದಿರುವರು. ಇದರಲ್ಲಿ ದಶಾವತಾರ ಆಟ ಶುರುವಾಗುವ ಸಮಯದಿಂದ ಪ್ರಸಂಗ ಪೀಠಿಕೆಯ ವರೆಗೆ ಹೇಳಬೇಕಾದ ಗಣಪತಿ, ಷಣ್ಮುಕ, ಅರ್ಧನಾರೀಶ್ವರ ಮುಂತಾದವರ ಸ್ತುತಿ ಮುಂತಾದವುಗಳು ಅಡಕವಾಗಿವೆ. ಇವರು ಬರೆದ ಪ್ರಸಂಗಗಳಲ್ಲಿ ಕಣ್ವಪತಿ ಕೃಷ್ಣ ಎಂಬ ಮುದ್ರಿಕೆಯಿದೆ.

Printed at the Codialbail Press, Mangalore, S. K.

# ಹಳೆಯ ನಾಣ್ಯ

ಆಂಗ್ಲಕವಿ 'John Keats' ಎಂಬವನ 'Ode to a Grecian Urn'

ಎಂಬ

ಕವಿತೆಯನ್ನು ಅನುವರ್ತಿಸಿ ಬರೆದುದು.

ಇನ್ನುಮೇತಕೆ ನಿನ್ನ ಮುಸುಕುಮೌನವ ತೂರೆಯೆ?
ಮುಚ್ಚಾಲೆಯಾಡಿ ದೊಲ್ಲಯಿಸುವೇಕೆನ್ನ?
ತಳಮಳಿಪುದೆನ್ನ ಮನ ನಿನ್ನ ತೆರೆಯಂ ಹರಿಯೆ-
ನಿಲುಕದಲೆ ತಡೆವೆ; ಬುಲ್ಲಯಿಸುವೇಕೆನ್ನ? ।
ಸೊಲ್ಲಿಲ್ಲದುಲಿಗಳಿಂದುಲಿವ ನಿನ್ನಯ ಸೊಲ್ಲ
ಸೆಲೆಯಿಂದ ಹಾಡುಲಿಯಬಲ್ಲುದೇನೆನ್ನ?
ಸರಿಗೆ ಕುಕಿಲಿನ ಕೊರಳ ಕನಸನೆತ್ತಲು ಸಲ್ಲ!
ಕೊಳದ ಕೆಳವೆರೆಯಂಬರದ ಚಂದ್ರನೆನ್ನ? ॥
ಏಗಾಲಮಿಂತು ವೆಂಟಣಿಸಿ ನೀ ಮುದಿಯಾ
ಮರಿಯಂತೆ ಕಾವೆ ಪಳನನಸಿನೀ ನಿಧಿಯಾ?
ನಿನಗಲ್ಲದರ್ಥದಿಂದೇವಾಳ್ತೆ ನಿನಗೆ?-
ಹೆರಗೀರ್ಯದರ್ಥಮೇಂ ದೊರೆವುದೇ ತನಗೆ?॥೧॥

ನೀನೆನಿತೊ ಚರಿತಕಾರನಿಗೀವೆ ಸಂತಸವ-
ಚೊಚ್ಚಲನ್ನೀಯೆ ಸನಿಹಿಸಿದ ತಾಯ್ಮೊಗಸಂ,
ದೂರದಿಂ ತಾವರೆಯ ಸೋಂವಿನಳಿನಿಯ ಪಸವ
ನದರ ಸರಿದೋರೆ ಮಿಗುಗುಮೆಯುವನ ಸೊಗಸಂ?।
ನೋಂತಿರುವೆ ನೀ ಮೌನಮಾದೊಡಂ, ಮುಂದಾರೆ
ಭಾಸ್ಕರನ ಬಿಜಯದುಕ್ಕಡವ ತೆರೆವಂತೆ,
ನನಸುಕನಸುಗಳ ದರ್ಶನವನೇಂ ತರಲಾರೆ,
ಬಿಂಗುಸುಬು ಬಂಗಾರದಿರವನೊರೆವಂತೆ! ॥
ಮಿಸುನಿಮುಸಿಯಿಂ ಬರೆದುದಿದರ ಬಿನ್ನಣಮೇಂ?
ನಿನ್ನ ಕಥನಕೆ ಕಾಲನಿಟ್ಟ ಟಿಪ್ಪಣಮೇಂ?
ಮುನ್ನನಿಂದಿಗೆ ಸಾಲವಿತ್ತ ಬರವಣವೋ?
ನಿಜತೆಗೆ ನಮ್ಮನೋಲಯ್ಸಲವುತಣವೋ ॥ ೨ ॥

ಕಂಡ ಚೆಲುವಿನಿದು ಕಾಣದ ಚೆಲುವು ಮಿಗಿಲೆನಲು,
ಕನಸುಕಂಗಳಿಗೆ ಸಿಲುಕಿದ ಚೆಲುವು ಕಿರಿದೇ?
ಅದುಕತದಿ ನಿನ್ನ ಸಸಿನೆದೆಯೊಳೋರೆಮೆಯ ನಲು
ಮೆಯ ನೀಡು! ಕನಸುಕಾಂಬೆನು ನಿನ್ನನಿರದೆ! ।
ಭೋರ್ಗರೆವ ಕಡಲ ನಿಸ್ಸೀಮ ಕೋಲಾಹಲಂ
ಶಂಖದೆಣೆಮುರಿಯ ಮುರಿಸುಯ್ಯುಯ್ಗಳಲ್ಲಿ,
ಉರಿದು ಪೊಡೆದಬ್ಬರಿಪ ಸಿಡಿಲ ದಾಹಾನಲಂ
ಮಿಂಚುಹುಳುವಿನ ಮಿಣುಕುಕಿಡಿಕಿಡಿಗಳಲ್ಲಿ ॥
ಬಿನ್ನನೆಚ್ಚರುವಂತೆ, ಸೋಜಿಗದ ಸುಳಿವಂ
ಕಾಣದಂತೆನಿತೊ ಬಚ್ಚಿಹೆ! ಬದುಕಿನೊಳವಂ
ಕಡೆಗಣ್ಣಕೂಡಲಿಂದರಿವಂತೆ ನಲ್ಲೆ,
ನಿನ್ನೊಳವನೇತರಿಂ ನಾನರಿಯ ಬಲ್ಲೆ? ॥ ೩ ॥

ಆವ ಮರಮಿದು? ಮರಧ ಬುಡದೊಳಿಹ ನೀನಾರು?
ಸಕಲರಿತುವೊಳು ಪೂವ ಪಣ್ವ ಮರಮೇನು?
ಒಂಟಿ ಕುಕಿಲಿದು ಕೂಗದೇಕೆ? ಬಿರಿನನೆ ನಾರು
ಬೀರದೇಂ? ತಟಕದೀ ಎಲೆವನಿಯಿದೇನು? ।
ಎಲೆ ಮರುಳೆ, ಬರಿದುಮೊಡಗಾಲ ಮಂಡಿಯನಿಕ್ಕಿ,
ಬಲಗೆಯ್ಯನೆಳೆದು, ಕಿವಿಗಾನಿಸುವೆ ಸರಳಂ!
ಬರಿದೆ ಪೇಚಾಡದಿರು, ನಿನ್ನಂಬು ಹೆದೆಮಿಕ್ಕಿ
ಮಿಸುಕದ್ದೆ! ಮೇಣೆರಿಗುಮೆಂತರಿಯ ಕೊರಳಂ? ॥
ಆದೊಡಂ ಮರುಗದಿರು! ನಿಕ್ಕುವಂ ಮುನ್ನೇ
ನಿನ್ನ ಪಗೆಯುಳಿವೋದನಾತನಂ ನೀನೇ
ತರಿದೆಯೆಂದಣಿಯುರಂ ತಣಿಯುದೊಡಮಿನ್ನು
ಪೆರತಂಬನೆಚ್ಚಬೇಕೆಂದಿಲ ನೀನು! ॥ ೪ ॥

ಏಸ್ನೇರಿದನೊ ಕುಡಿಯಲೀಯಲೊಂದೇ ಸಲಂ
ನಿನ್ನ ಮಿರುಮುದಿರೆಯಾ ಕಿಣ್ಣದಿನಿಸಾನುಂ!—
ಬೇರೊಡಲನಾಂತೊಡನೆಯುಪ್ಪಿನಂಗನೆ ವಲಂ
ನಿನ್ನಚ್ಚಿನರಸನರಸತಿಯಾಗಿ ನಾನು! ।
ಬಳಿಕಿಂತೊರೆವೆನಿನಿನೆಯ ನಾಣ್ಯವಿದರೊಪ್ಮೊಗದಿ
ನೆದ್ದುಬರುತಿದೆ ಕಣಾ ಪುತ್ತಳಿಗೆ ನಿನ್ನ!
ಅಕ್ಕರದ ಕರಡುಗೀಚೇಕೆ ಬೆನ್ನಲಿ? ಪೊಗದಿ
ಬೆಲೆಯೇರದಿಹುದೆ ಕೆತ್ತಿಸೆ ಚಿತ್ರವೆನ್ನ? ॥
ನನುಗಂದಿನಿಂದಗಲ್ಕೆಯುಲ್ಲರಗಳಿಲ್ಲ!
ಅಳಿವಾದೊಡಂ ನಡುವೆ ಬರಲಾರ್ಪನಲ್ಲ!
ನಿಚ್ಚತೆಯ ಸೆಳವಿನೀ ತೇಲುದೀವಿಯಲಿ
ಕಾಲನಂ ಮೂದಲಿಸುತಾಳ್ವ ಠೀವಿಯಲಿ! ॥ ೫ ॥

ಕೆಂಗರಿಗನುದಿರ್ಗರಿಯನೆಲರ ಸೀಗುರಿಯೆಂದು
ಮರೆದದಂ ಬರೆಯೆ ಲೆಕ್ಕಣಿಯೆಸಗುವನ್ನ,
ಕಾಲರೆಕ್ಕೆಯ ಕಾಲನಿಂ ಸಿಡಿದ ಗರಿಯೆಂದು
ನಿನ್ನನರಿಯದರೆಂತು ಬಳಿಸಿದರೊ ನಿನ್ನ? ।
ಇನ್ನೆವರಮೆಲ್ಲೆಲ್ಲಿ ತೊಳಲ್ದೆಯೇನೇಂ ಗೇದೆ?—
ನಿನ್ನ ನೀರಿಂದಾರ ಬೆಸಲಳಲ ತೊಳೆದೆ?
ಆವಾವ ಲಲನೆಯರ ಮುತ್ತಯ್ದೆತನಕಾದೆ?
ಕವಿಯಾರದೆಳಗೂಸಿನೊಳಗುಟ್ಟ ಸೆಳೆದೆ? ॥
ಆವಾವ ಹರಕೆಗಳ ಕಾಣಿಕೆಗೆ ಸಂದೆ?
ಬೇಹರವನೆಲ್ಲೆಲ್ಲಿ ಸಲುವರ್ಗೆ ತಂದೆ?
ನಿನ್ನೊಡಮೆಯಿಂದಾರಿನೇನ ಮಾಡಿಸಿದೆ?
ಆರ ತೊರೆದೆಂತು ಮನೆಮನೆಯ ಬೇಡಿಸಿದೆ?॥ ೬ ॥

ನಿನ್ನ ತಾಯ್ಗನಿಯೆಲ್ಲಿ? ಅಗೆದ ಗುದ್ದಲಿಯೆಲ್ಲಿ?
ಕರಗಿಸಿದ ಕೋವೆ, ಬಡಿದದ್ದಗಣಿಯೆಲ್ಲಿ?
ಹುಯ್ದ ಪಡಿಯಚ್ಚೆಲ್ಲಿ? ತಿಕ್ಕಿದರದಲಗೆಲ್ಲಿ?
ಕೆತ್ತಿದುಗುರುಳಿಯೊಪ್ಪನಿತ್ತ ಮಣಲೆಲ್ಲಿ? ।
ನಿನ್ನ ಮೋರೆಯ ಮೋರೆಯುಳ್ಳರಸನಿಂದೆಲ್ಲಿ?
ಅವನ ನಾಡವನ ಸಿರಿ ಹೆಚ್ಚಳಗಳೆಲ್ಲಿ?
ನೀಂ ಬಳಸಿದಾವಾವ ದೇಶಕಾಲಗಳೆಲ್ಲಿ?
ಬೊಕ್ಕಸದಿ ನಿನ್ನನಿಕ್ಕಿದ ಹರದರೆಲ್ಲಿ? ॥
ನಿನ್ನನೊಡ್ಡುತ ದುಡಿದ ಪಲಬಯಕೆಯೆಲ್ಲಿ?
ನಿನ್ನ ಪದೆವಂದೆರೆದ ಬಡತಿರುಕರೆಲ್ಲಿ?
ನಿನ್ನ ಕಂಡವರೆಲ್ಲಿ? ಬಳಿಸಿದವರೆಲ್ಲಿ?
ಅವರನಿಬರೆಲ್ಲಿ? ನೀನೋರ್ವನೇಕಿಲ್ಲಿ? ॥ ೭ ॥

ನಿನಗೆ ಸಾವಿಲ್ಲ! ಒದವಿದೆಯಲ್ತಳಿಯಲೆಂದು—
ಮೆಯ್ವಡೆದ ಮೌನ ನೀ! ಮೌನಕಳಿವುಂಟೇ?
ಗಳಹುತಾನ್ಮೆಯಿನಿಂದನೇ ನಾವು ಮರೆವಂದು,
ನಿನ್ನ ತಿಳಿತಾಳ್ಮೆಯೆಂದುಂ ಮಾಸಲುಂಟೇ? ।
ಎನಿತಿರವನೆನಿತರಿವನಡಸಿ ನೀನೆಯ್ತುಂದೆ —
ನೀನುಮವರೊಂದೆಂಬ ಮರುಳ್ತತನವನೊಲ್ಲೆ!
ಅಂದಂದು ಹೆರೆಕಳಚಿಬಿಡುವ ಹಾವ್ವೆರವೊಂದೆ—
ಹೆರೆವಾವೆರಳ್ತನದ ನೆರವ ನೀ ಬಲ್ಲೆ! ॥
ತಾನ್ಮೆಯಿಂದಳಿವೆಂದು ಬಲ್ಲ ನಿನಗಳಿವೇ?
ಮೌನಕಳಲುಂಟೆ? ತಾಳಿಮೆಗುಂಟೆ ಹಳವೆ?
ಮೌನದಿಂ ಮೂಗಾಲಮುಂ ತಾಳ್ದ ನಿನ್ನ
ಮುಂದೆಮ್ಮದಲ್ತೆ ಗುಳ್ಳೆಯ ಗಳಿಗೆಯನ್ನ? ॥ ೮ ॥

ನೋಡ ನೀಂ, ಕಾಲನೊಡ್ಡಿದ ಚೆನ್ನಮಣೆಯಲ್ಲಿ
ತಾನ್ಮೆಯೆಸುಗೆಗೆ ಸರಿವ ಕವಡಿಕೆಗಳಂತೆ,
ದನಿಯ ದುಡುಕಾಟದಿಂ ಬೋಕಿಬಿದ್ದಳಲ್ವಲ್ಲಿ,
ತೋರೆಮಗೆ ದಾಯದೆಲ್ಲೆಯ ಹಾಯುವಂತೆ! ।
ಅಂದಂದುಮುಂದಂದಿನಳಲಿಂದ ನಸಿವನ್ನ
ಮೆಮ್ಮ ತಾನ್ಮೆಯನೊಕ್ಕುತಳಲಿಂದ ನಲವಂ
ತಳೆವಂತೆ ತಾನ್ಮೆಯಚಾಚೆಯ ನನ್ನಿಯಿಂ ನಿನ್ನ
ನಮ್ಮಮಾಗಿಯಿನೆಚ್ಚರಿಸು ಸುಗ್ಗಿಯೊಲವಂ! ॥
"ಮೌನದಿಂ ನಿನ್ನೊಳಗುನನ್ನಿಯುಂ ನೋಡು,
ತಾನ್ಮೆಯಂ ಬಿರಿದು ತಾಳ್ಮೆಯಿನದಂ ಕೂಡು!—
ಚಿಪ್ಪಿನಾ ಮುಚ್ಚಿಕೆಯೊಳುಪ್ಪಹುದು ಮುತ್ತು!
ಕತ್ತಲಂ ತಾಳ್ದಿರುಳು ಮೂಡುವುದು ಹೊತ್ತು!" ॥ ೯ ॥

ಮಂಜೇಶ್ವರ

ಗೋವಿಂದ ಪೈ.

# ಹಾರುವ ಹಕ್ಕಿ

(ಪರಿವರ್ಧಿನಿಷಟ್ಪದಿ)

(ಶ್ರೀಯುತ ಮುಳಿಯದ ತಿಮ್ಮಪ್ಪಯ್ಯನವರಿಂದ)

ಬೇಸಗೆನಗಲೊಳು ಕುಟುಕಂ ಕೊಂಬೊಂ
ದಾಸೆಯೊಳರಗಿಳಿ ಹಾರುತಲೈತ
ಪ್ಪಾಸನುಯದಿ ಕಣ್ಣಿಗೆ ಕಾಣಿಕೆಯಾದುದು
ಹೊಸಹೊಲವೊಂದು ॥

ಬೇಸರಗಳೆಯಲು ತೆಂಗಿನ ಸೋಗೆಯೊ
ಳಾಸರೆವಡೆದೀಕ್ಷಿಸೆ ಮರೆವೆಯ ಮರೆ
ಯೋಸರಿತ್ತೆಳವೆಯ ನೆನಪೊಂದಿನ್ನೊಂದನ್ನೆಬ್ಬಿಸಿತು
॥ ೧ ॥

ಗಿರಿಯಲಿ ಪಂದಳಿರಂ ಮೇಯಲು ನೇ
ಸರಜಳವಂ ಸೈರಿಸದಂಬಾ ಎಂ
ದುರೆ ಸಂತಾಪದಿ ತಾಯೆಡೆಗೋಡುವ
ಹಸುಗೂಸುಗಳೆನಲು ॥

ತುರುಗಳು ಮನಬಂದೆಡೆಯಲಿ ಸುಸುಳಲು
ಬಿರುಸಿನ ಕೋಲುಂ ಬೇಲಿಯುಮಿಲ್ಲದೆ
ಕರುಣಾಮೃತವೀಂಟಸಿದೀ ಕೆರೆಗಗಳಿನ
ಸೆರೆಮನೆಯಾಯ್ತೆ ॥ ೨ ॥

ಈಗಳದೆಲ್ಲಿದೆ ಚೆಂದುಟದಳದಿಂ
ಮೇಗಣ್ಗೆ ಮುಗುಳ್ನಗುವಾ ತಾವರೆ
ಯಾಗಸದಿಂ ಗಾಳಿಯ ಮೇಳದೊಳಿಳಿವಚ್ಚರಿ
ದುಂಬಿಗಳ ॥

ಬೀಗದ ಗೀತಂ ಮಲ್ಲಿಗೆವಳ್ಳಿಯ
ದೇಗಂ ತಳ್ಕಿಸೆ ಗಿಳಿನುಡಿಯಿಂದಲಿ
ಜಾಗು ಭಲಾ ಎನ್ನುತ ತಲೆಯೊಲೆವಾ
ಸಂತಸದಿನ್ಮಾವು ॥ ೩ ॥

ಬಿಸಿಲ ಜಳಕೆ ಬಾಯಾರುತಲೋಡುತ
ಲಸವಸದಿಂ ನಲ್ಲನನೊಡಗೂಡುತ
ಲೊಸೆದೈತಂದಮೃತಾಂಬುವನೀಂಟುತ
ನೆರಳಿನ ಹಂದರದಿ ॥

ಹಸೆಗೊಳ್ಳುತ ಹಿಂದಣ ಸೊಗನಂ ಬಗೆ
ಗೊಸರಿಪವೊಲು ಮೇವಂ ಮೆಲುಕೊತ್ತುತ
ಲೆಸೆವಾ ಹುಲೆಗಳೆಣೆ ಸಂಸ್ಕೃತಿ ದೇವಿಯ
ಮಣೆಯೆಲ್ಲಿಹುದು ॥ ೪ ॥

ಮೊಲೆವಾಲೊಸರಿಂ ಪಾಲಿಸಿದೀ ತಾ
ಯ್ನೆಲಕೇಂ ತಳಿರೋ ಹೂವೋ ಹಣ್ಣೋ
ನಲಿದಿತ್ತರ್ಚಿಪ ಬಳ್ಳಿಮರಂಗಳ ಬೇರುಂ
ಕಾಣದಲಾ ॥

ಬಲವಂತನೆನುವ ಹೆಬ್ಬುಲಿಯಾ ಮುಖ
ಬಿಲವೆಂಬಂತಿದೆ ಕೆನ್ಮಣ್ಣಿನಗಳು
ಬಳಸಿದ ಕೆರೆ ನಾಲಗೆದೂಂಬಿಂ ಚಿಮ್ಮುತ್ತಿಹ
ನೀರಿಂದ ॥ ೫ ॥

ಇಲ್ಲಿದ್ದಿಮ್ಮಾವಿನ ಕೋಟರದಿಂ
ದೆಲ್ಲಿಗೆ ಕೊಂಡೊಯ್ದುರೊ ತಂದೆಯನಾ
ಖುಲ್ಲರೆಳೆಯನಾದೆನ್ನಯ ಕತದಿಂದಸುವಿಡಿದಾ
ವೂತೆ ॥

ಮೆಲ್ಲನೆ ಕಾಡಿನ ಮರಕೈದುತ ಕಡೆ
ಯಲ್ಲಾ ಮನುಜರ ನಾಡಂ ಹೊಗಬೇ
ಡೆಲ್ಲಿಯುಮೆಂದುದ ಮರೆತೆನೆ ಪಾಪದ
ಬಿತ್ತಂ ಬಿತ್ತಿದೆನೆ ॥ ೬ ॥

ಕೂಗುಂ ಕೇಳದ ಕೀಳ್ನೆಲೆಯವರಾ
ಭೋಗಕ್ಕೆನುತ ಬಲಾತ್ಕಾರದ ಫಲ
ವಾಗಿಯೆ ತನ್ನಾನಂದಂಗಳೆದೀ ವೇಷವನಾಂ-
ತಿರ್ದು ॥

ಏಗಳುಮೊಡೆಯನ ಕೈಯಿಂ ಬಂಧನ
ಕಾಗರವಹ ಕೆರೆಯೇ ನಿನ್ನಯ ಪೂ
ರ್ವಾಗಮಗಳ ನೆನೆವೆನ್ನೆದೆವೊಲು ಬಿಸಿಲಿಂ
ಬೇಗುದಿಗೊಂಬೈ ॥ ೭ ॥

ನಂಬಿ ಬರುತ ಮಾನನುಳಿದ ನೆಲವಂ
ಕಾಂಬುದುಮುಳಿಯುನದೇನೆಂಬೆಂ ದುಗು
ಡಂ ಬೊಗುತಿದೊ ಕೆರೆಯೇ ನಿನ್ನೊಳು ನಳಿನಿಯು
ಕಾಣದೆ ಮರುಗಿ ॥
ತುಂಬಿ ತುಳುಂಕುವ ನೀರೊಳು ಸ್ವಪ್ರತಿ
ಬಿಂಬವ ಕಂಡೆಮ್ಮಂದದ ಬಿಕ್ಕೆಗ
ರಿಂಬಿನ ಗುಡಿಯಾಯ್ತೇ ದಾನಿಯ ಮನೆಯೆನುತೈ
ದುವುದಳಲಿಂ ॥ ೮ ॥

ನೆಲನಿದು ಕೃಷಿಗೊಂಡುದೆನುತ ಹೇಳುವ
ಹಲವರಿರಲಿ ನಾನೆತ್ತಂ ನೋಡಲು
ಬಲವಂತನ ಕೈಯು ಬಲರ ಬಾಯುಂ ಬಲಿದುದನೇಂ
ಕಾಂಬೆಂ ॥
ಹಲವರ ಬಾಯೊಳಗಲೆವಾ ಧರ್ಮಂ
ಕೆಲಸದ ಮನೆಯೊಕ್ಕಲ್ಗೆಯ್ವನ್ನೆಗ
ಸಲದಿಲ್ಲಿಹುದೆನ್ನುತ ಹಾರುವ ಹಕ್ಕಿಯದೋ
ಹಾರಿದುದು ॥ ೯ ॥

---

# ಕನ್ನಡ ಜೈನರಾಮಾಯಣ

(ಲೇಖಕ:–ಎನ್. ಎಸ್ ಜೈನಿ, ನೆಲ್ಲಿಕಾರಪೇಟೆ, ಕಾರ್ಕಳ.)

ಭಾರತ ವರ್ಷದ ಸಮಸ್ತ ಭಾಷೆಗಳಲ್ಲಿ ರಾಮಾಯಣದ ಕಥೆಯು ಬರೆಯಲ್ಪಟ್ಟದೆ. ನಿಜವಾಗಿಯೂ ಭಾರತೀಯ ಆರ್ಯಸಭ್ಯತೆಯಲ್ಲಿ ರಾಮಾಯಣದ ಅತ್ಯಂತ ಮಹತ್ವಪೂರ್ಣವಾದ ಪ್ರಭಾವವು ಇದ್ದೇ ಇರುವುದು. ರಾಮಾಯಣವು ಯಾವುದೊಂದು ಪ್ರಾಂತ್ಯ ಅಥವಾ ಭಾಷೆಯ ಸಂಪತ್ತಲ್ಲ. ಅದು ಬೇರೆ ಬೇರೆ ಭಾಷೆಗಳಿಂದ ಕೂಡಿದ ಭಾರತೀಯರ ಅಮೂಲ್ಯವಾದ ಪೈತೃಕ ಸಂಪತ್ತು. ಉತ್ತರ ಭಾರತದಲ್ಲಿ ಪ್ರಚಾರದಲ್ಲಿರುವ ರಾಮಾಯಣಗಳೆಲ್ಲವೂ ವೈದಿಕ ಧರ್ಮಾವಲಂಬಿಗಳಿಂದಲೇ ಬರೆಯಲ್ಪಟ್ಟವೆ. ಪರಂತು ಇದರಿಂದ ರಾಮಾಯಣವು ಕೇವಲ ಹಿಂದೂಗಳ ವಸ್ತುವೆಂದೇ ತಿಳಿಯಬಾರದು. ಅನ್ಯಧರ್ಮಾವಲಂಬಿಗಳು ಕೂಡ ಅದನ್ನು ಬಹಳ ಗೌರವದಿಂದ ಓದುತ್ತಿರುವರು. ಬಂಗಾಳದ ಕಾವ್ಯಸ್ತಂಭದಂತಿದ್ದ 'ಮಾಇಕೆಲ್ ಮಧುಸೂದನ' ದತ್ತರವರು ಕ್ರೈಸ್ತ ಧರ್ಮೀಯರಾದ ಮೇಲೂ, ಬಾಇಬಿಲನ್ನು ಓದುವಷ್ಟೇ ಶ್ರದ್ಧೆಯಿಂದ ರಾಮಾಯಣವನ್ನೂ ಪಾರಾಯಣ ಮಾಡುತಿದ್ದರಂತೆ. ಉತ್ತರ ಭಾರತದ ಆರ್ಯಭಾಷೆಗಳಲ್ಲಿ ಬರೆಯಲ್ಪಟ್ಟ ರಾಮಾಯಣಗಳ ವಿಚಾರವಂತಿರಲಿ. ದಕ್ಷಿಣ ಭಾರತದ ದ್ರಾವಿಡ ಭಾಷೆಗಳಲ್ಲಿಯೂ ರಾಮಾಯಣದ ಕಥೆಗಳು ಬರೆಯಲ್ಪಟ್ಟವೆ. ಈ ಲೇಖದಲ್ಲಿ ಕನ್ನಡ ಭಾಷೆಯು ಜೈನ ರಾಮಾಯಣದ ಸಂಕ್ಷೇಪ ವರ್ಣನೆಯನ್ನು ಮಾಡುವೆನು.

ಕನ್ನಡ ಭಾಷೆಯಲ್ಲಿಯೂ ರಾಮಾಯಣದ ಕಥೆಯ ಆಧಾರದ ಮೇಲೆ ಅನೇಕ ಕವಿಗಳು ರಚನೆಯನ್ನು ಮಾಡಿರುವರು. ಕನ್ನಡ ಸಾಹಿತ್ಯವನ್ನು ಸಾಮಾನ್ಯವಾಗಿ ಜೈನ, ಲಿಂಗಾಯತ, ವೈಷ್ಣವ ಎಂಬ ಮೂರು ಭಾಗಗಳಲ್ಲಿ ವಿಭಾಗಿಸಬಹುದು. ಕನ್ನಡದ ಪ್ರಾಚೀನ ಸಾಹಿತ್ಯವು ಈ ಮೂರು ಧರ್ಮಗಳ ಕಥೆಗಳಿಂದಲೂ, ಗೀತಗಳಿಂದಲೂ, ಸ್ತೋತ್ರಗಳಿಂದಲೂ ಮಾಡಲ್ಪಟ್ಟದೆ. ಕರ್ನಾಟಕ ದೇಶದಲ್ಲಿ ಈ ಮೂರು ಧರ್ಮಗಳು ಹೆಚ್ಚು ಪ್ರಚಾರದಲ್ಲಿದ್ದುವು. ಕನ್ನಡ ಸಾಹಿತ್ಯದ ಹೆಚ್ಚಿನ ಭಾಗವು ಧಾರ್ಮಿಕವಾಗಿದೆ.

ವೈಷ್ಣವ ಧರ್ಮದಲ್ಲಿ ರಾಮಾಯಣಕ್ಕಿರುವ ಮಹತ್ವವನ್ನು ವರ್ಣನೆಮಾಡಬೇಕಾದ ಆವಶ್ಯಕತೆ ಇಲ್ಲ. ವೈಷ್ಣವರಿಗೆ ರಾಮಾಯಣವು ತಮ್ಮ ಪ್ರಾಣ

ಕ್ಕಿಂತಲೂ ಹೆಚ್ಚು ಪ್ರಿಯವಾದುದು. ಆದುದರಿಂದ ವೈಷ್ಣವ ಕವಿಗಳು ಕನ್ನಡ ಭಾಷೆಯಲ್ಲಿ ರಾಮ-ಕಥೆಯನ್ನು ಛಂದೋ-ಬದ್ಧಮಾಡಿರುವುದರಲ್ಲಿ ಆಶ್ಚರ್ಯವಿಲ್ಲ. ಸೋಲಾಪುರ ಜಿಲ್ಲೆಯ ತೊರವೆ ಗ್ರಾಮದಲ್ಲಿ ವೈಷ್ಣವ ಕವಿಯೊಬ್ಬನು 'ತೊರವೆ-ರಾಮಾಯಣ' ಎಂಬ ಹೆಸರಿನ ಗ್ರಂಥವನ್ನು ಬರೆದಿರುವನು. ಲೇಖಕನ ಹೆಸರೇನೆಂದು ತಿಳಿದುಬಂದಿಲ್ಲವಾದರೂ ಅವನಿಗೆ 'ಕುಮಾರ-ವಾಲ್ಮೀಕಿ' ಎಂಬ ಉಪಾಧಿ ಇದ್ದಿತು. ಇದರ ರಚನೆಯು ೧೬ನೆ ಶತಮಾನದ ಕೊನೆಯಲ್ಲಿ ಆಗಿದೆ. ೧೮ನೆ ಶತಮಾನದ ಪ್ರಾರಂಭದಲ್ಲಿ ತಿಮ್ಮಾರ್ಯನೆಂಬ ಕವಿಯು 'ಆನಂದ ರಾಮಾಯಣವನ್ನೂ, ತಿಪ್ಪನಾರ್ಯನು 'ಹನುಮದ್ವಿಲಾಸ'ವನ್ನೂ ತಿರುಮಲವೈದ್ಯನು 'ಉತ್ತರ ರಾಮಾಯಣ'ವನ್ನೂ ಬರೆದಿರುವರು.

ಮೇಲೆ ಬರೆದ ವೈಷ್ಣವ ಕವಿಗಳಲ್ಲದೆ ಜೈನ ಕವಿಗಳು ಕೂಡ ರಾಮಾಯಣದ ರಚನೆಮಾಡಿ, ತಮ್ಮ ಔದಾರ್ಯ ಹಾಗೂ ಕಾವ್ಯರಸಿಕತೆಯ ಪರಿಚಯವನ್ನು ಕೊಟ್ಟಿರುವರು. ಕುಮುದೇಂದು ಕವಿಯು ಸುಮಾರು ಸನ್ ೧೨೭೫ರಲ್ಲಿ ರಾಮಾಯಣವನ್ನು ಬರೆದಿದ್ದಾನೆ. ದೇವಚಂದ್ರನು ಸನ್ ೧೭೯೭ರಲ್ಲಿ 'ರಾಮ ಕಥಾವತಾರ'ವೆಂಬ ಗ್ರಂಥದಲ್ಲಿ ರಾಮಾಯಣದ ಕಥೆಯನ್ನು ಗದ್ಯರೂಪದಲ್ಲಿ ಬರೆದಿದ್ದಾನೆ. 'ಚಾಮುಂಡರಾಯರಚಿತ 'ಚಾಮುಂಡರಾಯಪುರಾಣ', ನಯಸೇನನ 'ಧರ್ಮಾಮೃತ,' ನಾಗರಾಜನ 'ಪುಣ್ಯಾಶ್ರವ' ಎಂಬ ಗ್ರಂಥಗಳಲ್ಲಿ ಕೂಡ ರಾಮಾಯಣದ ಕಥೆಯು ಸಂಕ್ಷೇಪವಾಗಿ ಉಂಟು. ನಮ್ಮ ಜಿಲ್ಲೆಯ ಮೂಲಿಕೆ (ಒಳಲಂಕೆ) ಚೆನ್ನರಾಯಸಾಮಂತರ ಆಸ್ಥಾನಕವಿಯಾಗಿದ್ದ ಪದ್ಮನಾಭನು ವಿಸ್ತಾರವಾಗಿ 'ರಾಮಚರಿತೆ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇವರೆಲ್ಲರೂ ಜೈನರಾಗಿದ್ದರು. ಪರಂತು ಕನ್ನಡ ಭಾಷೆಯಲ್ಲಿ 'ರಾಮಚಂದ್ರ-ಚರಿತ್ರ ಪುರಾಣ'ವೇ ಸರ್ವೋತ್ತಮ ರಾಮಾಯಣ ಗ್ರಂಥವಾಗಿದೆ. ಇದನ್ನು ರಚಿಸಿದವನು ಕೂಡ ಜೈನನು. ಇವನಿಗೆ ನಾಗಚಂದ್ರ ಅಥವಾ ಅಭಿನವಪಂಪ (ದ್ವಿತೀಯಪಂಪ) ಎಂಬ ಹೆಸರುಂಟು. ಪಂಪ ಎಂಬ ಹೆಸರಿನ ಒಬ್ಬ ಪ್ರಸಿದ್ಧ ಕವಿಯು ೧೦ನೆ ಶತಮಾನದ ಆರಂಭದಲ್ಲಿ 'ವಿಕ್ರಮಾರ್ಜುನವಿಜಯ'ವೆಂಬ ಕಾವ್ಯದಲ್ಲಿ ಮಹಾಭಾರತದ ಕಥೆಯನ್ನು ವರ್ಣನೆಮಾಡಿರುವನು. ಈ ಗ್ರಂಥವನ್ನೇ ಹೆಚ್ಚಾಗಿ 'ಪಂಪ-ಭಾರತ'ವೆನ್ನುವರು ಈ ಆದಿಪಂಪನ 'ಪಂಪಭಾರತ' ಗ್ರಂಥವನ್ನು ಆದರ್ಶವಾಗಿಟ್ಟುಕೊಂಡು ನಾಗಚಂದ್ರನು 'ರಾಮಚಂದ್ರ-ಚರಿತ್ರ-ಪುರಾಣ'ವನ್ನು ಬರೆದಿದ್ದಾನೆ. ಅಂದಿನಿಂದ ನಾಗಚಂದ್ರನಿಗೆ ಅಭಿನವ ಪಂಪ ಅಥವಾ ದ್ವಿತೀಯಪಂಪನೆಂದೂ ಅವನ ಗ್ರಂಥವನ್ನು 'ಪಂಪರಾಮಾಯಣ'ವೆಂದೂ ಹೇಳುವರು.

ನಾಗಚಂದ್ರನ ಜೀವನ ಸಂಬಂಧದ ವಿಚಾರದಲ್ಲಿ ನನಗೆ ಗೊತ್ತಿರುವ ಅಂಶವು ಬಹು ಕಡಿಮೆ. ನಾಗಚಂದ್ರನು ೧೨ನೆ ಶತಮಾನದ ಆದಿಯಲ್ಲಿ ದ್ವಾರಸಮುದ್ರದ ಬಲ್ಲಾಳರಾಜ ಬಿಟ್ಟದೇವ ಅಥವಾ ಬಿಟ್ಟಿಗನ ಆಸ್ಥಾನಕವಿಯಾಗಿದ್ದನೆಂದು ಕರ್ನಾಟಕ ಕವಿಚರಿತೆಯಿಂದ ತಿಳಿದು ಬರುತ್ತದೆ. ಬಲ್ಲಾಳರಾಜ ಬಿಟ್ಟದೇವನು ಇತಿಹಾಸದಲ್ಲಿ ಪ್ರಸಿದ್ಧ ವ್ಯಕ್ತಿ. ಅವನ ಕಾಲದಲ್ಲಿ ಹೊಯ್ಸಳ ವಂಶವು ಬಹಳ ಉನ್ನತಿಯನ್ನು ಹೊಂದಿತ್ತು. ಅವನು ೩೦ ವರ್ಷ ರಾಜ್ಯಭಾರಮಾಡಿದನು; ಅನೇಕ ಸುಂದರವಾದ ಅರಮನೆಗಳನ್ನೂ ದೇವಸ್ಥಾನಗಳನ್ನೂ ನಿರ್ಮಾಣಮಾಡಿಸಿದನು. ಇತಿಹಾಸದಲ್ಲಿ ಅವನ ಹೆಸರು ಚಿರಸ್ಥಾಯಿಯಾಗಿದೆ. ಆದರೆ ಅದಕ್ಕೆ ಕಾರಣವೇ ಬೇರೆ; ವೈಷ್ಣವ ಧರ್ಮ ಪ್ರವರ್ತಕನಾದ ರಾಮಾನುಜಾಚಾರ್ಯನು ಚೋಳರಾಜನಾದ ಅಧಿರಾಜೇಂದ್ರನ ರಾಜ್ಯದಲ್ಲಿ ಧರ್ಮಪ್ರಚಾರವನ್ನು ಮಾಡುತಿದ್ದನು. ಅಧಿರಾಜೇಂದ್ರನು ಶೈವನಾಗಿದ್ದನು. ಇದರಿಂದ ಅವನು ರಾಮಾನುಜಾಚಾರ್ಯನೊಡನೆ ಶತ್ರುತ್ವವನ್ನು ತೋರಿದನು. ಆದುದರಿಂದ ಚೋಳಮಂಡಳವನ್ನು ತ್ಯಾಗಮಾಡಿ, ಕರ್ನಾಟಕದಲ್ಲಿ ಬಲ್ಲಾಳರಾಜ ಬಿಟ್ಟದೇವನ ರಾಜ್ಯಕ್ಕೆ ಬಂದುಬಿಟ್ಟನು. ಬಿಟ್ಟದೇವನು ಜೈನನಾಗಿದ್ದನು. ರಾಮಾನುಜಾಚಾರ್ಯನ ಉಪದೇಶಗಳಿಂದ ಅವನು ವೈಷ್ಣವನಾಗಿ ವಿಷ್ಣುವರ್ಧನನೆಂಬ ಹೆಸರಿಟ್ಟುಕೊಂಡು ಪ್ರಸಿದ್ಧಿಗೆ ಬಂದನು.

ನಾಗಚಂದ್ರನು ಈ ಹೊಯ್ಸಳ ವಿಷ್ಣುವರ್ಧನನ ಸಭೆಯಲ್ಲಿದ್ದನು. ಅವನು 'ಮಲ್ಲಿನಾಥಪುರಾಣ' ಎಂಬ ಇನ್ನೊಂದು ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ೧೯ನೆ ತೀರ್ಥಂಕರರ ಚರಿತ್ರೆಯ ಉತ್ತಮ ವರ್ಣನೆಯುಂಟು. ಪರಂತು ಅವನ ಕೀರ್ತಿಗೆ ರಾಮಚಂದ್ರ-ಚರಿತ್ರ ಪುರಾಣವೇ ಮುಖ್ಯಾಧಾರವಾಗಿದೆ.

ಪಂಪರಾಮಾಯಣದ ಸಮಸ್ತ ವಾತಾವರಣವು ಜೈನಮಯವಾಗಿದೆ. ಅದರಲ್ಲಿ ಭಾರತ ವರ್ಷವು ಸರ್ವತ್ರ ಜೈನದೇಶವೆಂದು ತೋರಿಸಲ್ಪಟ್ಟದೆ; ಎಲ್ಲಿಯೂ ವೈದಿಕ ಧರ್ಮದ ಉಲ್ಲೇಖ ಕೂಡ ಇಲ್ಲ. ಅರಣ್ಯವಾಸಿಗಳಾದ ಯತಿಗಳೆಲ್ಲರೂ ಜೈನರೇ. ರಾಮ, ರಾವಣ ಮೊದಲಾದ ಎಲ್ಲಾ ಪಾತ್ರಗಳು ಜೈನರೇ ಆಗಿರುವರು ರಾಕ್ಷಸರನ್ನು ಕವಿಯು ಹೆಚ್ಚಾಗಿ ವಿದ್ಯಾಧರರೆಂದು ಹೇಳಿರುವನು. ಸುಗ್ರೀವ, ಹನುಮಂತ, ಅವರ ಸೈನಿಕರು ಮೊದಲಾದವರು ವಾನರರಲ್ಲ; ಅವರು ಸಾಧಾರಣ ಮನುಷ್ಯರೇ ಆಗಿರುವರು. ಕೇವಲ ವಾನರ-ಧ್ವಜವುಳ್ಳವರು. ಲಂಕೆಗೆ ಹೋಗುವುದಕ್ಕೆ ಸಮುದ್ರಕ್ಕೆ ಸೇತುವನ್ನು ಕಟ್ಟಲಿಲ್ಲ. ನಭೋಗಮನ ವಿದ್ಯೆಯ ಮೂಲಕ ಸಮಸ್ತ ಸೇನೆಯು ವಾಯುಮಾರ್ಗದಿಂದ ಸಮುದ್ರವನ್ನು ಪಾರಾಗುವುದು. ರಾವಣನಿಗೆ ದಶಾನನ ಎಂದು ಹೇಳಿದೆ. ಪರಂತು ಅವನಿಗೆ ನಿಜವಾಗಿ ೧೦ ಶಿರಗಳಿದ್ದುವೆಂಬ ಕಾರಣದಿಂದಲ್ಲ. ರಾವಣನು ಹುಟ್ಟದಾಗ ಪ್ರಸೂತ ಗ್ರಹದಲ್ಲಿ ಹತ್ತು ಮಣಿಗಳ ಒಂದು ದರ್ಪಣಮಣಿ ಇದ್ದಿತು. ಅದರಲ್ಲಿ ಅವನ ಶಿರದ ೧೦ ಪ್ರತಿಬಿಂಬಗಳು ಬಿದುದರಿಂದ ಅವನು ದಶಮುಖನೆನಿಸಿಕೊಂಡನು. ರಾಮಲಕ್ಷ್ಮಣರ ಅವತಾರವನ್ನೊಪ್ಪಿಕೊಳ್ಳಲಿಲ್ಲ. ಅವರನ್ನು ಕವಿಯು ಜೈನರ ಕಾರಣಪುರುಷರ ಸ್ಥಾನದಲ್ಲಿಟ್ಟಿರುವನು. ಲಕ್ಷ್ಮಣನ ಮೇಲೆ ಕವಿಯು ಹೆಚ್ಚು ಕೃಪೆಯನ್ನು ತೋರಿಸಿದ್ದಾನೆ. ವನವಾಸಕಾಲದಲ್ಲಿ ಲಕ್ಷ್ಮಣನೇ ರಾಮನ ಕಡೆಯಿಂದ ಎಲ್ಲಾ ಕೆಲಸಗಳನ್ನು ಮಾಡಿದ್ದಾನೆ ಯುದ್ಧಗಳಲ್ಲಿ ಕೂಡ ಅವನೇ ಮುಖ್ಯ ಪುರುಷನು. ಮಾತ್ರವಲ್ಲ, ಅವನೇ ರಾವಣನನ್ನು ಕೂಡ ವಧೆಮಾಡಿರುವನು. ಲಕ್ಷ್ಮಣಶತ್ರುಘ್ನರು ಒಂದೇ ತಾಯಿಯ ಮಕ್ಕಳಲ್ಲ. ರಾಮನ ತಾಯಿ ಕೌಸಲ್ಯೆ ಎಂಬಲ್ಲಿ ಅಪರಾಜಿತೆ ಎಂದಿದೆ. ಸೀತೆಗೆ ಪ್ರಭಾಮಂಡಲನೆಂಬೊಬ್ಬ ಅಣ್ಣನಿರುವನು. ಅವರಿಬ್ಬರೂ ಯಮಳರು. ಅವನನ್ನು ಹುಟ್ಟದಾಗಲೇ ಯಾರೋ ಕದ್ದೊಯ್ದಿರುವನು. ಸೀತೆಯ ಸ್ವಯಂವರ ಕಾಲದಲ್ಲಿ ಅವನು ಕೂಡ ಸೀತೆಯೊಡನೆ ವಿವಾಹದ ಆಶೆಯಿಂದ ಮಿಥಿಲೆಗೆ ಬಂದಿದ್ದಾಗ ಅವನ ಪರಿಚಯವಾಗುವುದು. ಈ ಮಾತುಗಳಿಂದ ಜೈನ ರಾಮಾಯಣದ ಕಥೆಯು ವಾಲ್ಮೀಕಿ ರಾಮಾಯಣದಿಂದ ಭಿನ್ನವಾಗಿದೆ.

ಪಂಪರಾಮಾಯಣದ ರಚನೆಯ ಕಾಲವು ಸುಮಾರು ಸನ್ ೧೧೦೫ ಎಂದು ಕರ್ನಾಟಕ ಕವಿಚರಿತೆಯ ಕರ್ತರು ಬರೆದಿರುವರು. ಇದು ಚಂಪೂ (ಗದ್ಯ ಪದ್ಯ ಮಿಶ್ರಿತ) ಗ್ರಂಥ. ಕೆಳಗೆ ರಾಮ-ರಾವಣರ ಯುದ್ಧವರ್ಣನೆಯ ಒಂದು ಭಾಗದ ಸಾರಾಂಶವನ್ನು ಬರೆದು ಈ ಲೇಖನವನ್ನು ಪೂರ್ತಿ ಮಾಡುವೆನು. ಇದರಿಂದ ಪಂಪರಾಮಾಯಣದ ವಾತಾವರಣವು ಜೈನಮಯ ಹಾಗೂ ಉಪದೇಶಪ್ರದವಾದುದೆಂದು ಗೊತ್ತಾಗುವುದು:—

"ಲಕ್ಷ್ಮಣನ ಗಾಯವು ಪೂರ್ಣ ವಾಸಿಯಾಗಿರುವುದೆಂದೂ ಅವನು ಪುನಃ ಯುದ್ಧದ ಸಿದ್ಧತೆಯನ್ನು ಮಾಡುತ್ತಿರುವನೆಂದೂ ರಾವಣನ ಮಂತ್ರಿಗಳು ತಿಳಿದು, ರಾವಣನಿಗೆ—ರಾಮಲಕ್ಷ್ಮಣರು ನಿನ್ನಿಂದ ಹೆಚ್ಚು ಬಲಶಾಲಿಗಳಾಗಿರುವುದರಿಂದ ಅಜೇಯರೆಂದೂ, ಸೀತೆಯನ್ನು ಆದರಪೂರ್ವಕವಾಗಿ ರಾಮನ ಬಳಿಗೆ ಕಳುಹಿಸಿ, ಅವನೊಡನೆ ಸಂಧಿಮಾಡಿಕೊಳ್ಳುವುದರಲ್ಲಿ ಹಿತ ಉಂಟೆಂದೂ ಹೇಳಿದಾಗ ಅವರ ಮಾತು ಕೇಳಿ, ರಾವಣನು ಕ್ರೋಧದಿಂದ ಹೇಳಿದನು—

ನಾನು ಇಂದ್ರನನ್ನು ಕೂಡ ಶರಣಾಗತನನ್ನಾಗಿ ಮಾಡಿಕೊಂಡಿರುವಾಗ ಈ ಪೋರ ರಾಜಕುಮಾರನಿಗೆ ಹೆದರಿ, ಅವನ ಅಧೀನತೆಯನ್ನೊಪ್ಪಿಕೊಳ್ಳುವುದು ಹೇಗಾದೀತು? ಇದರಿಂದ ನನ್ನ ಪ್ರಾಣಹೋಗುವುದು ಎಷ್ಟೋ ಮೇಲು. ನನ್ನಂತಹ ವೀರರಿಗೆ ಸ್ವಲ್ಪವೂ ಪ್ರಾಣದಾಶೆಯು ಇರಲಾರದು. ಕೇವಲ ಮಾನವೇ

ನನಗೆ ಬೇಕಾದುದು. ಆದರೂ ನನ್ನ ವಿಜಯುವನ್ನು ಪೂರ್ಣ ನಿಶ್ಚಯುಮಾಡಿಕೊಳ್ಳುವುದಕ್ಕಾಗಿ, ನಾನು ಮಂತ್ರಯೋಗದಿಂದ ಕಾರ್ಯಸಾಧನೆಮಾಡಿಕೊಳ್ಳು ವೆನು. ಅದರ ಬಲದಿಂದ ನಾನು ಬಹು ರೂಪಿಣೀ ಶಕ್ತಿಯ ಸಹಾಯದಿಂದ ಅನೇಕ ರೂಪಗಳನ್ನು ಧಾರಣೆಮಾಡಿಕೊಳ್ಳುವೆನು.

ಮಂತ್ರಯೋಗದ ಸಿದ್ಧಿಯಲ್ಲಿ ಯಾವ ವಿಘ್ನ ವಿಪತ್ತುಗಳುಂಟಾಗಬಾರದೆಂದು ರಾವಣನು ಸಮಸ್ತ ಲಂಕೆಯಲ್ಲಿ ಯಾವ ತರದ ಜೀವಹಿಂಸೆಯು ಉಂಟಾಗ ಬಾರದೆಂದೂ, 'ನಮ್ಮ ಸಮಸ್ತ ಸೈನಿಕರು ಸ್ವಲ್ಪಕಾಲ ಯುದ್ಧವನ್ನು ನಿಲ್ಲಿಸಬೇಕೆಂದೂ, ನಮ್ಮ ಎಲ್ಲಾ ಪ್ರಜೆ ಗಳು ಜೈನ ಪೂಜೆಯಲ್ಲಿ ನಿರತರಾಗಬೇಕೆಂದೂ' ಆಜ್ಞಾ ಪಿಸಿದನು.

ಆ ಮೇಲೆ ಅವನು ತನ್ನ ಅರಮನೆಯನ್ನು ಸೇರಿ, ಅಲ್ಲಿ ಭಗವಾನ್ ಶಾಂತೀಶ್ವರನಿಗೆ ವಂದನೆಯನ್ನು ಮಾಡಿದನು. . . . ವಿಧಿಪೂರ್ವಕ ಪೂಜೆಮಾಡಿ ಅವನು ಮೌನಧ್ಯಾನದ ವ್ರತವನ್ನು ಕೈಕೊಂಡನು; ಪದ್ಮಾಸನ ದಲ್ಲಿ ಕುಳಿತು ಏಕಾಗ್ರಚಿತ್ತದಿಂದ ಇಂದ್ರಿಯದಮನ ಮಾಡಿದನು.

ರಾವಣನು ಇಂತಹ ಕಠಿಣ ತಪಸ್ಸನ್ನಾಚರಿಸುವ ನೆಂದು ವಿಭೀಷಣನು ತಿಳಿದು, ರಾಮನ ಬಳಿಗೆ ಹೋಗಿ, ಅವನೊಡನೆ ರಾವಣನು ತಪಸ್ಸಿನ ಫಲ ಸ್ವರೂಪವಾಗಿ ಹೊಸಶಕ್ತಿಯನ್ನು ಪಡೆಯುವ ಮೊದ ಲೇ ಕೊಂದುಬಿಡಬೇಕೆಂದು ಪ್ರಾರ್ಥಿಸಿದನು. ಆದರೆ ರಾಮನು ಹೇಳಿದನು— ರಾವಣನು ವಿಧಿಯುಕ್ತವಾಗಿ ಜಿನೇಂದ್ರನ ಆರಾಧನೆಯನ್ನು ಮಾಡಿದ್ದಾನೆ. ತನ್ನ ಅಸ್ತ್ರಶಸ್ತ್ರಗಳನ್ನು ಕೆಳಗಿಟ್ಟು, ಧರ್ಮನಿರತನಾದ ಪುರುಷನನ್ನು ವಧೆಮಾಡುವುದು ಉಚಿತವಲ್ಲ. ನಾನು ಅವನ ಮಂತ್ರಯೋಗಕ್ಕೆ ಭಯಪಡುವುದಿಲ್ಲ. ಪರ ಸ್ತ್ರೀಯನ್ನು ಕದ್ದೊಯ್ದುವನಿಗೆ ಯಾವ ಮಂತ್ರ ಯೋಗವೂ ಫಲಕಾರಿಯಾಗಲಾರದು.

ಈ ಉತ್ತರದಿಂದ ವಿಭೀಷಣನಿಗೂ ಅಂಗದನಿಗೂ ಸಂತೋಷವಾಗಲಿಲ್ಲ. ಅವರು ರಾಮನಿಗೆ ಗೊತ್ತಾಗ ದಂತೆ ಸ್ವಲ್ಪ ವಾನರ-ಧ್ವಜ ಸೇನೆಯನ್ನು ರಾವಣನ ತಪಸ್ಸನ್ನು ಭಂಗಪಡಿಸುವುದಕ್ಕಾಗಿ ಕಳುಹಿದರು. ಆ ಸೈನಿಕರು ಲಂಕೆಯಲ್ಲಿ ದೊಡ್ಡ ಉತ್ಪಾತವನ್ನೇ ಮಾಡಿದರು. ಆದರೂ ರಾವಣನು ತನ್ನ ಜಪದಲ್ಲಿ ಮಗ್ನನಾಗಿದ್ದನು. ಅವನು ನಿಶ್ಚಲನಾಗಿ ಕುಳಿತಿದ್ದನು.

* * * * * * * *

ಆಗ ಕಿಷ್ಕಿಂಧೆಯ ಉತ್ತರಾಧಿಕಾರಿ ಅಂಗದನು ತನ್ನ ಕಿಷ್ಕಿಂಧ ಎಂಬ ಹೆಸರಿನ ಗಜವನ್ನೇರಿ, ರಾವಣನ ವ್ರತವನ್ನು ಭಂಗಮಾಡುವುದಕ್ಕಾಗಿ ಲಂಕೆಯ ಕಡೆಗೆ ನಡೆದನು. ಅಲ್ಲಿ ಶಾಂತೀಶ್ವರನೆದುರಿಗೆ ಕುಳಿತು ಧ್ಯಾನ ಮಾಡುತ್ತಿರುವ ರಾವಣನನ್ನು ಕಂಡು, ಕ್ರೋಧಾ ಶ್ಚರ್ಯಗಳಿಂದ ಹೀಯಾಳಿಸಿದನು-"ಎಲೇ ಪಾಷಂಡೀ! ಮೂರ್ಖ! ದುಷ್ಟ! ಈ ಪವಿತ್ರಸ್ಥಾನದಲ್ಲಿ ಕುಳಿತು ಉಪಾಸನೆಯ ಠಕ್ಕುಮಾಡುವುದರಲ್ಲಿ ನಿನಗೆ ನಾಚುಗೆ ಯಾಗುವುದಿಲ್ಲವೇ? ಎಲೇ ಅಧಮ! ಕುಲಕಲಂಕ! ನೀನು ಅನೇಕ ಧರ್ಮಾತ್ಮರನ್ನು ನಿರಪರಾಧಿಗಳನ್ನು ಬಂದೀಗೃಹದಲ್ಲಿಟ್ಟು ಪೀಡಿಸಿರುವೆ. ನೀನು ನಿನ್ನ ನೆರೆಯವನ ಸಾಧ್ವೀಸ್ತ್ರೀಯನ್ನು ಅಪಹರಿಸಿದೆ. ನೀನು ಶಾಂತೀಶ್ವರನ ಭವನದಲ್ಲಿ ಉಪಾಸನೆಮಾಡುವ ಎಂತಹ ದುಸ್ಸಾಹಸವನ್ನು ಮಾಡುತ್ತಿರುವೆ? ನಿನ್ನ ಪಾಪಗಳನ್ನು ಸ್ಮರಣೆಮಾಡು. ನೀನು ರಾಮನ ಬಾಣಕ್ಕೆ ತುತ್ತಾಗುವೆ. ಯಾವ ಮಂತ್ರಬಲವೂ ನಿನ್ನನ್ನು ರಕ್ಷಿಸಲಾರದು."

ಹೀಗೆ ಹೇಳಿ ಅಂಗದನು ರಾವಣನ ವಸ್ತ್ರವನ್ನೆ ಳೆದು ಅವನಿಗೆ ಮುಷ್ಟಿ-ಪ್ರಹಾರಮಾಡಿದನು! . . . . ಅವನು ರಾವಣನಿಗೆ ಅನೇಕ ಪ್ರಕಾರ ತೊಂದರೆ ಗಳುಂಟಾಗುವಂತೆ ಮಾಡಿದನು. ಸ್ತ್ರೀಯರು ಥರಥರ ನಡುಗುತ್ತ ಬಂದು ರಾವಣನನ್ನು ಧ್ಯಾನದಿಂದೆಬ್ಬಿಸುವು ದಕ್ಕಾಗಿ ಯತ್ನಿಸಿದರು. "ನಿನ್ನ ಈ ಜಪದಿಂದ ಲಾಭ ವೇನು? ಏಳು, ನಮ್ಮ ಮಾನವನ್ನು ಕಾಪಾಡು!" ಎಂದು ಬೊಬ್ಬಿಟ್ಟರು. ಆದರೆ ರಾವಣನಿಗೆ ಯಾವುದೂ ಕೇಳಲಿಲ್ಲ. ಅವನು ಧ್ರುವದಂತೆ ಅಚಲನಾಗಿದ್ದನು.

ಆಗ ಆಕಾಶದಲ್ಲಿ ಮಿಂಚುಹೊಳೆದಂತಾಯಿತು; ಅದರೊಡನೆ ಒಬ್ಬ ಯಕ್ಷಿಣಿಯು ಕೆಳಗಿಳಿದು, ರಾವಣನ

ಎದುರಿಗೆ ನಿಂತು ಹೇಳಿದಳು—"ನಾನು ನಿನ್ನ ಆಜ್ಞೆಯಿಂದ ಇಲ್ಲಿ ಉಪಸ್ಥಿತಳಾಗಿದ್ದೇನೆ; ನಿನ್ನ ಶತ್ರುಗಳನ್ನು ಈಗಲೇ ರಣಕ್ಷೇತ್ರದಲ್ಲಿ ಕೊಂದುಬಿಡುವೆನು. ಆದರೆ ರಾಮ, ಲಕ್ಷ್ಮಣ ಮತ್ತು ಹನುಮಂತ ಇವರನ್ನು ಮಾತ್ರ ಸಾಧ್ಯವಾಗಲಿಕ್ಕಿಲ್ಲ. ಏಕೆಂದರೆ ಅವರು ನನ್ನಿಂದಲೂ ಬಲವತ್ತರವಾದ ಶಕ್ತಿಯಿಂದ ಸುರಕ್ಷಿತರಾಗಿರುವರು."

ಆಗ ರಾವಣನು ಮ್ಲಾನಮುಖವುಳ್ಳವನಾಗಿ "ಆ ಮೂವರು ಬದುಕಿ ಇನ್ನೆಲ್ಲರು ಸಾಯುವುದರಿಂದ ಲಾಭವೇನು?" ಎಂದು ಉತ್ತರಕೊಟ್ಟನು.

ಮೇಲಿನ ಮಾತುಗಳಿಂದ ನಾಗಚಂದ್ರನ ವರ್ಣನೆಯು ಸಜೀವ ಹಾಗೂ ರೋಚಕವಾದುದೆಂದು ಗೊತ್ತಾದೀತು. ನಿಜವಾಗಿಯೂ ಅವನ ಕಾವ್ಯಕ್ಕೆ ಇದೇ ಪ್ರಧಾನಗುಣವಾಗಿದೆ.

---

## ಆನಂದ ಅಥವಾ ನೀನು

(ಮಚ್ಚಿಮಲೆ ಶಂಕರ ನಾರಾಯಣರಾವ್, ಪುತ್ತೂರು.)

॥ ಕು. ಷ. ॥

ಬಿರಿದ ಹೂವಿನ ಚೆಲುವಿ।
ನೊರತೆಯಲಿ ಹರಿಯುತಿಹೆ।
ಸರುಗಂಪು ಹೊಯ್ಲಿನಲಿ ನಲಿಯುತಿರುವೆ।
ಸುರಿಯುತಿಹೆ ಮಕರಂದ।
ಸರಿಗಳಲಿ ಸೊಬಗಿನಿಂ।
ಮೆರೆಯುತಿಹೆ ತಂಗಾಳಿಯಲೆಗಳಲ್ಲಿ ॥ ೧ ॥

ಮರದ ಕೊಂಬೆಯ ಮೇಲೆ।
ಕರಿಯ ಕೋಗಿಲೆ ಕರೆವ।
ಸರಸಸಂಗೀತದಲಿ ಹಾಡುತಿರುವೆ॥
ಮಿರುಗುವೆಳದಳಿರ ಹೊಸ।
ತರುಗಳೆಡೆಯಲಿ ನುಡಿಯು।
ವರಗಿಳಿಯ ಕಂಠದಲಿ ಸುಳಿಯುತಿರುವೆ ॥ ೨ ॥

ನೀಲಗಗನದಿ ಮೇಘ।
ಮಾಲೆಯೆಡೆಯಲಿ ತೊಳಗಿ
ತೇಲುವ ಸುಧಾಂಶುಮಂಡಲವ ಸುತ್ತಿ॥
ಸಾಲಾಗಿ ಸಂಚಲಿಪ।
ಕೋಲು ಮಿಂಚಿನ ಬಳ್ಳಿ।
ಗಾಳಿಯುಯ್ಯಾಲೆಯೊಳಗೋಲಾಡುವೆ ॥ ೩ ॥

ಸುರಸದಿಂ ತುಂಬಿಗತಿ।
ಯರಿದು ಹೃದಯದಿ ನೆರೆದು
ಸರಸರನೆ ಹಾಲುಕ್ಕುವಂತೆ ತುಳುಕಿ॥
ಹರಿವ ಸಂಗೀತ ಸಾ।
ಗರದಿಂಪಿನಾಲಾಪ।
ತೆರೆಗಳಲಿ ಹರುಷದಿಂದೋಡುತಿರುವೆ ॥ ೪ ॥

ಇಳೆಯ ಸುಖದುಃಖಗಳ।
ಕಳವು ಮರೆಮೋಸಗಳ।
ತಿಳುವಳಿಕೆ ಬಾರದಿಹ ಕೈಗೂಸಿನ॥
ಎಳದಳಿರ ಚೆಂದುಟಿಯ
ಸೆಳೆಗಳಲಿ ಕುಣಿವ ನಗೆ।
ಯೊಲುಮೆ ಮುದ್ದಿನ ಮೋಹದೊಡನಾಡುವೆ ॥ ೫ ॥

ಲಲನೆಯರ ಚಂಚಲ ಸು।
ಲಲಿತ ನೋಟಗಳಲ್ಲಿ।
ಹೊಳೆವ ಮೋಹನ ಬೆಡಗಿನೊಳಗಡಗಿಹೆ॥
ಎಳೆಯ ಮಕ್ಕಳ ತೊದಲು।
ಮೆಲುನುಡಿಯುಲಲ್ಲಿಗಳ।
ಬಳಗದೊಳು ಬಿದ್ದೇಳುತೊಪ್ಪುತಿರುವೆ ॥ ೬ ॥

ಕರಗಿಸಲು ನವನೀತ ।
ಪರಿಮಳದ ಘೃತವಾಗಿ ।
ಪರಿಣಮಿಸುವಂತೆ ನಿಜಹೃದಯದೊಳಗೆ ॥
ಇರುವ ನವಭಾವನೆಯು ।
ಕರಗಿ ನವರಸವಾಗಿ ।
ಸುರಿವ ಕವಿಜಿಹ್ವೆಯಲಿ ಶ್ರುತಿವಿಡಿಯುವೆ ॥ ೬ ॥

**ಸಾಂಗತ್ಯ:—**

ಆನಂದ ಲೀಲೆಗಳ್ನಿನ್ನೊಳಗಿಹವೊ? ಸ ।
ದಾನಂದದೊಳು ನಿನ್ನ ನೆಲೆಯೊ? ॥
ಜ್ಞಾನತತ್ವದಿ ನೋಡೆ ನಿರ್ಗುಣನೀ ಸಚ್ಚಿ ।
ದಾನಂದಮಯನಲ್ತೆ ದೇವ ॥

---

# ಸಮರ್ಪಣಾ

(ಲೇಖಕ:—ಪಾಂಡೇಶ್ವರ ಗಣಪತಿರಾವ್, ಬ್ರಹ್ಮಾವರ)

ಕಾಲಹೂವಳ್ಳಿಯೊಳಗರಳಿರುವ ದಿನವೆಂಬ
ಕುಸುಮ ತಾನೊಂದಿಂದು ಬಾಡಿಹೋಯ್ತು;
ಸಂಜೆಹೊಂಜೆರಗಿನಿಂ ಜಗವೆಲ್ಲವಡಗಿಸಿರೆ,
ಗಾಳಿಹೂವಾಳಾಗಿ ಬಳಲಿ ಹೋಯ್ತು. ॥ ೧ ॥

ಆಕಾಶಮಂಟಪದಿ ತೂಗಿಸಿಹ ತಾರೆಯೆಂ—
ಬಲರುಗಳ್ ತಾವರಳಿ ನಲಿಯುತಿಹವು;
ತಿರೆಯ ಕರುಮಾಡ ತಿಳಿ ಬಾನಿನೊಳ್ ತಂಗದಿರ
ನೆಂಬನೃಪನೊಸಗೆಯಿಂದೊಪ್ಪಿರುವನು. ॥ ೨ ॥

ಶಾಂತಿಸುಮಧುರ ಶೈಲಿಯಾಂತಿಹುದು ಧರೆಯೆಂಬ
ಬಿತ್ತರದ ಹೊತ್ತಗೆಯು; ಮತ್ತದರೊಳು
ಕಬ್ಬಿಗನ ಕಣ್ಬೊಗರು ಸೃಷ್ಟಿಸೌಂದರ್ಯವೆಂ—
ಬರ್ಥಸುಮಸಾರವಂ ಹೀರುತಿಹುದು. ॥ ೩ ॥

ಎಲ್ಲಿ ನೋಡಿದಡಲ್ಲಿ ನಿನ್ನ ಮಹಿಮೆಯ ಚಿತ್ರ
ಚೆಲ್ವೆಸೆಗಿ ಯೆಳೆಯುತಿಹುದೆನ್ನ ಬಗೆಯ;
ಭಾವನಾತೀತ ನೀನಿಲ್ಲದಿರುವಾ ತಾಣ
ವಾವುದಂ ಕಾಣೆ ನಾನೀ ತಿರೆಯೊಳು. ॥ ೪ ॥

ಧರೆಯ ಕರ್ಮಕ್ಷೇತ್ರದೊಳ್ ಕುಣಿದು ಬಳಲಿರುವ
ಎನ್ನಾತ್ಮ ಚಿರಶಾಂತಿಸುಖವ ಬಯಸಿ,
ಬಿರಿದ ಪೂಬಂಡುಳಿದು ಮುಗಿವನಿಚ್ಛಿಸುವಂತೆ,
ಚಿಗಿದಾಸೆಯೊತ್ತರದೊಳೆತ್ತಿರುವುದು. ॥ ೫ ॥

ಎದೆಯೆಂಬ ಕಿರಿಯರಳ ನಿನ್ನಡಿಯೊಳರಳಿಸುತ,
ನೆಚ್ಚಿನಚ್ಚಿನೊಳೆಳ್ದು ಅರ್ಪಿಸಿಹೆನು;
ಎದೆಮುಗುಳ್ ಬಲುಬಿರಿದು ಭಕ್ತಿಮಧುವಂ ಸೂಸಿ,
ತವಪಾದಪಾಂಸುಲದೊಳಾಡುತಿರಲಿ! ॥ ೬ ॥

ಮಧುಮಾಸ ಮಂದಾನಿಲನ ದೇಶ, ಸಂದೇಶ
ವಾದೇಶ ತವಹಾಸದೊಲುಮೆಯಾಗಿ,
ಮೃದುಮಧುರ ಪದಪುಂಜ ಪಂಜರದೊಳಂಜಿರುವ
ಹೃದಯಾಂತ ಪಕ್ಷಿಯಿದು ಮೊರೆಯಿಡುವುದು. ॥ ೭ ॥

ನಿನ್ನ ಕರೆ ಕಡಲಾಗಿ ಮಿಸುಪೆಲರು ಬೀಸುತಿರ—
ಲೆನ್ನ ಬನ್ನಣೆ ಮೋಡ ಮರೆಯುಪ್ಪುದು;
ಮುನ್ನಿನಾಶಾತಂತು ಹರಿಹರಿದು ರಜವಾಗಿ,
ಹೃತ್ಕುಸುಮ ಮಧ್ಯದೊಳ್ನೆಲಸಿಪ್ಪುದು. ॥ ೮ ॥

ಬಾಡಿ ಬಳಲುವ ಹೂವು, ಮೂಡಿಯಡಗುವ ತಾರೆ,
ಖೋಡಿವಡೆದೋಡುವಾ ಮೋಡದಳಿವು,
ಕಾಡುಬೀಡಾದ ಝುರಿ ಮಾಗಿಯೊಳ್ ಬತ್ತುವುದು,
ನಾಡೆ ನಶ್ವರ ಬಾಳ್ಕೆಯೆಂದಾಡುಗುಂ. ॥ ೯ ॥

ಕಡು ನೊಂದಡುಂ, ಕಣ್ಣನೀರ ಮಳೆಕರೆದೊಡುಂ,
ಒಡವೆ ತೊಡವಂ ಕಂಡು ಹರಿದೋಡುವಾ
ಜಡವಾದ ಬಗೆಯಿದಂ ತವ ಕೈಯ ಕೋಲದಿಂ—
ದೆಡೆವಿಡದೆ ಕಟ್ಟುವುದು ಅಳ್ತಿಯಿಂದ! ॥ ೧೦ ॥

ಬಾಂದಳದೊಳುದಿಸಿ ಹೊಳಪಿನ ಹೊನಲ ಬೀರುತುಂ,
ಶಾಂತಿಯಾವಾಸದೊಳ್ ತಳತಳಿಸುವ,
ತಿರೆಯ ಜಡಜೀವನಂ ಕಂಡು ನಗುವಾ ಉಡುವ
ಸರಿಸದೊಳ್ ಸೇರಿಸೆನ್ನಾತ್ಮವಿದನು! ॥ ೧೧ ॥

ಪೂವಿನೊಡನಾಡುವೆಂ, ತಾರೆಯೊಡನೋಡುವೆಂ,
ಕಾಳ್ಪುರದೊಳೊಂದಾಗಿ ಹಾಡಲಿಹೆನು;
ಕಾಡಿನರಮನೆಯೊಳಗೆ ಯೋಗಿನೃಪ ನಾನಾಗಿ
ಹಕ್ಕಿ, ಹೂ, ಹಣ್ಗಳನ್ನಾಳಲಿಹೆನು! ॥ ೧೨ ॥

ಭಾವಕರದೀಪದಿಂ ಭಾವನಾತೀತ ನಿ-
ನ್ನಾವಿರಾಜಿಪ ರೂಪ ನೋಡಲೆಳಸೆ,
ಭಾವವೆರಡುಂ ಕೂಡಿ, ಭಾವವೊಂದಾಗಿರಲ್
ಭಾವದೊಳ್ ನಿನ್ನ ಸವಿಯನುಭವಿಸಿದೆ! ॥ ೧೩ ॥

೨

ತಂಗಾಳಿ ತೆರೆಯೊಳಗೆ ಮುಂಗಾವಲಾಗಿನೀ
ನೀ ಗಗನರಂಗದೊಳಗೋಡುತಿರಲು,
ಕೋಗಿಲೆಯ ಕಲಕಂಠದಿಂಚರಂ ನಾನಾಗಿ
ಬೆಂಬತ್ತಿ, ನಿನ್ನೊಳು ವಿಲೀನನಾದೆ. ॥ ೧೪ ॥

ಮುಗಿದ್ಯೆದ ಪುಷ್ಪದೊಡಲೊಳಗೆ ಸೆರೆಯಾಳಾಗಿ
ಬೆಳಕಿನ ಪತಾಕೆಯಂ ನೋಡಲೆಳೆಪಾ
ಪರಮೆಯಂತೆನ್ನಾತ್ಮ ಷಡ್ವೈರಿತಳ್ಕೆಯೊಳ್
ಸಿಲುಕಿಹುದು, ಬಿಡುವಿನಾತುರದೊಳಿಹುದು. ॥ ೧೫ ॥

ಹಳೆಯ ಹಂಬಲದ ಹೊಂಭೇರಿ ದನಿದುಂಬಿಹುದು
ಬಾಳುಗಂಬದ ತುದಿಯೊಳುಣ್ಮುತಿಹುದು;
ಎಳೆಯನೆನ್ನೀಜೀವ ಕೇಳೀಸುರಂಗದೊಳ್
ಸುಳಿಸುಳಿದು ಹೋರಾಡಿ ಹಾಡುತಿಹುದು. ॥ ೧೬ ॥

ಅಂದು ಮರಿದಾರಕೆಯ ಕಿರಿಬೆಳಕ ಮಳೆಯಲ್ಲಿ,
ತಂಬೆಲರಕಡಲ ತಡಿಯಗಲದಲ್ಲಿ,
ನೊಂದ ನೋವನ್ನುಳಿದು, ಮೈಮರೆದು ನಿನ್ನಲ್ಲಿ
ಒಂದಾಗಿ ಬೆರೆತುದಾಂ ಮರೆವುದುಂಟೆ? ॥ ೧೭ ॥

ಅಂದು ಮಂದಾನಿಲನ ಗಂಧಧನವಂ ಸೆಳೆದು
ಚೆಂದದಿಂದೆನ್ನಾತ್ಮ ಪೂಜೆಗದನು
ತಂದರ್ಪಿಸಿರ್ಪೆನ್ನ ಗೈಮೆಯದನೇವೇಳ್ಪೆ-
ನಿಂದದಂ ಕಣ್ಣೆಲರು ನೋಡಲುಂಟೆ? ॥ ೧೮ ॥

ಒಡಲೆಂಬ ಪೊನ್ನಸರಿಯಾಣವಿದರೊಳಗಾತ್ಮ
ಫಲವನಿರಿಸುತ ನಿನ್ನ ಪಾದತಲದಿ,
ಅರ್ಪಿಸಿಹೆ ಯೆನ್ನಾತ್ಮದರ್ಪಣೆಯ ಗೀತದಿಂ-
ದರ್ತಿಯಿಂ ಸ್ವೀಕರಿಸು; ಹರಸೆನ್ನನೂ. ॥ ೧೯ ॥

---

# ಯಕ್ಷಗಾನವೂ ಬಯಲಾಟವೂ

(ಲೇಖಕ:-ಶ್ರೀ। ಮುಳಿಯದ ತಿಮ್ಮಪ್ಪಯ್ಯ)

ನಮ್ಮ ದಕ್ಷಿಣದೇಶದ ಪ್ರತಿಯೊಂದು ಭಾಷೆಯಲ್ಲಿಯೂ ವಿಶಿಷ್ಟವಾದೊಂದೊಂದು ಗಾನವಿದೆ. ಈ ದಕ್ಷಿಣದೇಶದ ದ್ರವಿಡಭಾಷೆಗಳೆಲ್ಲಾ ಹೇಗೆ ಏಕ ಭಾಷಾಜನ್ಯಗಳೊ ಹಾಗೆಯೆ ಈ ಗಾನಗಳೂ ಏಕ ಗಾನದಿಂದುದಿಸಿದುವೆಂಬುದರಲ್ಲಿ ಸಂದೇಹವಿಲ್ಲ. ತಮಿಳು ಮಲಯಾಳಗಳ ತರತರವಾದ "ಪಾಟ್ಟು"ಗಳೂ ತುಳುವಿನ ಪಾಡ್ದನವೂ ಕನ್ನಡದಲ್ಲಿ "ಪಾಡುಗಳಿಂದಂತರಿಸಲೆ, ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂಡಾಡುವ" ಪಾಡುಗಳೂ ಈ ಗಾನಕ್ಕೆ ಸೇರಿದುವುಗಳು. ಸಂಗೀತಶಾಸ್ತ್ರದಲ್ಲಿಯೂ, "ಗಾನ ವಾದ್ಯ

"ನೃತ್ಯ" ಗಳೆಂಬ ಮೂರು ಅಂಗಗಳಿಂದ ಕೂಡಿದ ಸಂಗೀತವು "ಮಾರ್ಗ, ದೇಶಿ" ಎಂದೆರಡು ವಿಧವಿದೆಯೆಂದು ಹೇಳಿದೆ. "ಮಾರ್ಗ" ಸಂಗೀತವು ದೇವತೆಗಳಲ್ಲಿ (ಶಾಸ್ತ್ರದಲ್ಲಿ ಮಾತ್ರವಿದ್ದು ಲೋಕರೂಢಿಗೊಳ್ಳದುದೊ?) ಮಾತ್ರ ರೂಢವಾಗಿರುವುದೆಂದೂ, ದೇಶಿಸಂಗೀತವು ಆಯಾದೇಶಗಳಲ್ಲಿ ಪ್ರಚಾರಗೊಂಡು ವಿಶಿಷ್ಟವಾಗಿರುವುದೆಂದೂ ಅದರಲ್ಲೇ ಕಾಣುತ್ತಿದೆ. ಆದರೆ ರಾಗಗಳಿಗೆಲ್ಲ ಮೂಲವಾದ ಪುರುಷರಾಗಗಳನ್ನು ವಿಚಾರಿಸಿದಲ್ಲಿ ಉತ್ತರದ ಮಾಳವಿ ಬಂಗಾಳಿರಾಗಗಳನ್ನು ಬಿಟ್ಟರೆ ನಾಟರಾಗವೊಂದೇ ದೇಶಿರಾಗವಾಗಿ ಕಾಣುತ್ತದೆ. "ನಾಟ"ವೆಂದರೆ ಕರ್ಣಾಟದೇಶವೆಂಬುದನ್ನು, ಬೇರೊಂದು ಲೇಖದಲ್ಲಿ ವಿಮರ್ಶಿಸಿರುತ್ತೇನಾದಕಾರಣ, ಈ ಚಿಕ್ಕ ಲೇಖದಲ್ಲಿ ಪುನಃ ಆ ವಿಷಯವನ್ನು ಚರ್ಚಿಸುವುದಿಲ್ಲ. ನಟನಪ್ರೋತ್ಸಾಹಕರವಾದ ಆ ನಾಟರಾಗದಿಂದ ಅನೇಕ ರಾಗಗಳು ಹುಟ್ಟಿಯೂ, ಅದರೊಡನೆ ಅನೇಕ ರಾಗಗಳು ಮಿಶ್ರಿತಗಳಾಗಿಯೂ ಅದೇ ಒಂದು ರಾಗಸಂತಾನವಾಗಿದೆ. ಆ ರಾಗಗಳೊಡನೆ ನಾಟದೇಶೀಯ ವಾದ್ಯಗಳೂ ನೃತ್ಯಗಳೂ ಸೇರಿ ಕಡೆಗೆ ಕರ್ಣಾಟಕ ಸಂಗೀತವೆಂಬುದೊಂದು ವಿಶಿಷ್ಟಸಂಗೀತವಾಯಿತು.

ಆದರೆ, ತಮಿಳು ಮಲಯಾಳಾದಿ ದೇಶಗಳಲ್ಲಿ ಹೀಗೆ ಪ್ರಸಿದ್ಧವಾದ ವಿಶಿಷ್ಟಸಂಗೀತವು ಆದಿಯಿಂದ ನೆಲೆಗೊಂಡಂತೆ ಕಾಣುವುದಿಲ್ಲ. ಆ ಮೇಲೆ ಹುಟ್ಟಿದ ರಾಗಗಳಲ್ಲಿ "ಅಂಧಾಳಿ" ಎಂಬುದೊಂದು ರಾಗವಿದೆ. ಇದು ಆಂಧ್ರದೇಶೀಯವಾಗಿರಬಹುದು. ಆದರೆ, ಮೇಲೆ ಹೇಳಿದಂತೆ ಸಂಗೀತದ ವೈಶಿಷ್ಟ್ಯಕ್ಕೆ ಬೇಕಾದ ಅನುಕೂಲತೆ ಅಲ್ಲಿದ್ದಂತೆ ತೋರುವುದಿಲ್ಲ. ಆದರಿಂದಲೆ ತೆಲುಗು, ತಮಿಳು ಮೊದಲಾದ ದಕ್ಷಿಣದೇಶಗಳ ಉತ್ಕೃಷ್ಟಸಂಗೀತಗಾರರೂ ಸಂಗೀತವಿಷಯದಲ್ಲಿ ಏನಾದರೊಂದು ಸಿದ್ಧಾಂತಗೊಳಿಸಬೇಕಾದರೆ ಕರ್ಣಾಟಕ ಸಂಗೀತವನ್ನೆ ಆಶ್ರಯಿಸುತ್ತಾರೆ.

ಹಾಗೆ ಗಂಧರ್ವಗಾನದಿಂದ ಕೂಡಿ ಆ ಮೇಲೆ ಪ್ರಸಿದ್ಧಿಗೊಂಡ ಕರ್ಣಾಟಕಗಾನಕ್ಕೇ ಆದಿಯಲ್ಲಿ "ಯಕ್ಷಗಾನ"ವೆಂದೋ, ಅಲ್ಲವೆ ಆ ಶಬ್ದದ ತದ್ಭವವಾದ "ಜಕ್ಕಗಾಣ" ಅಥವಾ "ಎಕ್ಕಗಾಣ"ವೆಂದೋ ಹೆಸರಿದ್ದಿರಬಹುದೆಂದು ತರ್ಕಿಸಬಹುದು ಯಕ್ಷಗಾನವೆಂದರೆ ಯಕ್ಷಗಾಣ ಪ್ರಬಂಧವೆಂಬರ್ಥವಲ್ಲ. ಗಂಧರ್ವರೆಂಬ ಜಾತಿಯವರು ಹಾಡಿದುದರಿಂದ "ಗಂಧರ್ವಗಾನ"ವೆಂಬ ಹೆಸರಾದಂತೆ ಯಕ್ಷರೆಂಬವರ ಸಂಬಂಧದಿಂದ ಉಂಟಾದ ಗಾನವೆಂದಿಷ್ಟೇ ಆ ಶಬ್ದದ ಅರ್ಥವು. ಮೇಲೆ ಸೂಚಿಸಿದ ಪಾಡುಗಬ್ಬದ ಭೇದಗಳನ್ನು ಹೇಳುವಾಗ ನೃಪತುಂಗನು "ಚತ್ತಾಣ, ಅಲ್ಲವೆ, ಜತ್ತಾಣ"ವೆಂದೂ "ಬೆದಂಡೆ"ಯೆಂದೂ ಎರಡು ಭೇದವಿತ್ತೆಂದು ಹೇಳುತ್ತಾನೆ. ಈ ಚತ್ತಾಣ, ಅಥವಾ, ಜತ್ತಾಣವು, "ಜಕ್ಕತಾಣ"ವೆಂಬ ಹೆಸರಿನಿಂದಿದ್ದು ಆ ಮೇಲೆ ಮತ್ತೂ ಸಂಕುಚಿತ ರೂಪವನ್ನು ಪಡೆದುದಾಗಿರಬಹುದೆ?

ಕನ್ನಡದ ಹಳೆಯ ಕಾವ್ಯಗಳಲ್ಲಿ ಅಂದವಾಗಿ ಹಾಡುವವನನ್ನು "ಎಕ್ಕಲಗಾಣಂ" ಎಂದು ಕವಿಗಳು ಕರೆಯುತ್ತಾರೆ. ಭರತೇಶ ವೈಭವದ ಪೂರ್ವ ನಾಟಕ ಸಂಧಿಯಲ್ಲಿ,

ಗಣಿಕೆಯರೆಕ್ಕಡಿಗರು ನಾಟ್ಯ ಶಾಸ್ತ್ರಲಾ ।
ಕ್ಷಣಿಕರು ಭಾವರಂಜಕರು ।
ಗುಣಿಗಳು ಮಂತ್ರಿಗಳರಸನ ಕಂಡು ತಿಂ ।
ತಿಣಿಯಾಗಿ ಕುಳಿತರೋಜೆಯೊಳು ॥ ೧ ॥

ಎಂದು ತೋರುತ್ತದೆ. ಇಲ್ಲಿ ಗಣಿಕೆಯರ ಮತ್ತು ನಾಟ್ಯಶಾಸ್ತ್ರಲಾಕ್ಷಣಿಕರ ನಡುವೆ ತೋರುವ "ಎಕ್ಕಡಿಗರೆಂ"ದರೆ ಒಂದು ರೀತಿಯ ಸಂಗೀತವನ್ನರಿತವರಲ್ಲದೆ ಬೇರೆಯಲ್ಲ. ಮೇಲೆ ತೋರುವ "ಎಕ್ಕಲಗಾಣ"ರೂ ಈ "ಎಕ್ಕಡಿ"ಗರೂ ಒಂದೇ ಜಾತಿಯ ಸಂಗೀತವನ್ನರಿತವರಾಗಿರಬಹುದೆಂದೂ, ಅವರೇ "ಯಕ್ಷಗಾನ" ಶಾಸ್ತ್ರಜ್ಞರಾಗಿರಬೇಕೆಂದೂ ತೋರುತ್ತದೆ.

ಇಂತಹ ಯಕ್ಷರ ಗಾನವು ಈ ದೇಶದಲ್ಲಿ ಹೇಗೆ ನೆಲೆಗೊಂಡುನು? ಪುರಾಣದೃಷ್ಟಿಯಿಂದ ನೋಡಿದರೆ ಯಕ್ಷರಾಜನಾದ ಕುಬೇರನೂ ಯಕ್ಷರೂ ಇರುವುದು ಉತ್ತರದಿಕ್ಕಿನಲ್ಲಿ. ಅಲ್ಲಿ ಈ ಯಕ್ಷಗಾನದ ಗಂಧಗಾಳಿಯೂ ಇಲ್ಲದೆ ಈ ದೂರದ ತೆಂಕಣ ನಾಡಿನಲ್ಲಿ ಅದು ಹೇಗೆ ಬೇರೂರಿ ವಿಸ್ತರಿಸಿತು? ಎಂಬ ಪ್ರಶ್ನೆಯುದಿಸುತ್ತದೆ.

ರಾಮಾಯಣವನ್ನು ನೋಡಿದರೆ ವಿಶ್ರವಸು ಪುತ್ರನಾದ ಆ ಯಕ್ಷಾಧಿಪತಿ ಕುಬೇರನು ಲಂಕೆಯನ್ನಾಳುತಿದ್ದಂತೆಯೂ, ಆ ಮೇಲೆ ಅವನ ಚಿಕ್ಕಮ್ಮನ ಮಗನಾದ ರಾವಣನು ಅವನನ್ನು ಓಡಿಸಿ ತಾನು ಆ ಲಂಕೆಗರಸಾದಂತೆಯೂ, ಕುಬೇರನು ಉತ್ತರದಿಕ್ಕಿನ ಅಳಕಾವತಿಗೈದಿ ಅಲ್ಲಿ ನೆಲಸಿದಂತೆಯೂ ತಿಳಿಯುತ್ತದೆ. ಅಳಕಾವತಿಯಲ್ಲಿ ಯಕ್ಷಗಾನಕ್ಕಿಂತಲೂ ಅಂದವಾದ ಗಂಧರ್ವಗಾನವು ನೆಲೆಗೊಂಡಿದ್ದುದರಿಂದ, ಸ್ವಲ್ಪ ಕೆಳಗಿನ ತರಗತಿಯ ಈ ಯಕ್ಷರ ಗಾನಕ್ಕೆ ಎಡೆದೊರೆಯದಿದ್ದುದರಿಂದ, ಅದು ಉತ್ತರಪ್ರಾಂತದಲ್ಲಿ ವಿಸ್ತರಿಸದಿರಲು ಕಾರಣವಾಗಿರಬಹುದು. ಇಲ್ಲಿಯಾದರೋ ಮೊದಲೆ ನೆಲೆಗೊಂಡು ಜನಸಾಮಾನ್ಯಕ್ಕೆ ಮನೋಹರವಾಗಿದ್ದ ಕಾರಣ ಆ ಯಕ್ಷಗಾನವು ಎಡೆಬಿಡದೆ ಈ ವರೆಗೂ ವಿಸ್ತರಿಸಿದೆಯೆಂದು ಹೇಳಬಹುದು.

ಚಾರಿತ್ರಿಕ ವಿಷಯವನ್ನು ನೋಡಿದರೂ ಕೆಲವು ಸಂಗತಿಗಳು ಗೊತ್ತಾಗುತ್ತವೆ. ಕ್ರಿಸ್ತ ಪೂರ್ವ ಮೂರನೆಯ ಶತಮಾನಕ್ಕಿಂತಲೂ ಮೊದಲು ಮಗಧದೇಶದ ಪಾಟಲಿಪುತ್ರವನ್ನಾಳುತಿದ್ದ ಚಂದ್ರಗುಪ್ತ ರಾಜನು ದ್ವಾದಶ ವರ್ಷ ಕ್ಷಾಮದಿಂದ ರಾಜ್ಯವನ್ನು ತ್ಯಜಿಸಿ, ಭದ್ರಬಾಹುವೆಂಬ ಜೈನ ಯತಿಯೊಡನೆ ಬಂದು, ನಮ್ಮ ಕರ್ಣಾಟಕದೇಶದ ಶ್ರವಣಬೆಳ್ಗೊಳದಲ್ಲಿ ನೆಲಸಿದಂತೆ ತಿಳಿದು ಬರುತ್ತದೆ. ಯಕ್ಷಿಯಕ್ಷರೆಂದರೆ ಜೈನರಿಗೆ ಪೂಜ್ಯಾರಾಧ್ಯ ದೇವತೆಗಳು. ಆ ಯಕ್ಷದೇವತಾಸಂಬಂಧವಾದ ಗಾನವೆ ಯಕ್ಷಗಾನವೆಂಬುದೂ ವಿಚಾರಾರ್ಹವಾಗಿದೆ. ಉತ್ತರದೇಶದಲ್ಲಿ ಜೈನರ ಸ್ಥಿತಿಯು ಕೆಟ್ಟುಹೋದುದರಿಂದಲೂ ದಕ್ಷಿಣದಲ್ಲಿ ಜೈನರಿಗೆಡೆಯೊದಗಿದುದರಿಂದಲೂ ಆ ಯಕ್ಷರಗಾನವು ಇಲ್ಲಿಯೆ ಉಳಿಯಿತೆಂದೆಣಿಸಲೂ ಬಹುದು.

ಯಕ್ಷರೆಂದರೆ ರಾಕ್ಷಸರಷ್ಟು ಕ್ರೂರ ಹೃದಯರಲ್ಲ. ಆದರೂ ಗಂಧರ್ವರಷ್ಟು ರಸಿಕರಾದವರೂ ನಾಗರಿಕರಾದವರೂ ಅಲ್ಲವೆಂದು ಪುರಾಣಗಳಿಂದ ಗೊತ್ತಾಗುತ್ತದೆ. ಆ ಯಕ್ಷರು ಪಿಶಾಚಿಗಳಂತೆ ಆವೇಶಗೊಂಡು ಮನುಷ್ಯರನ್ನು ಪೀಡಿಸುತ್ತಾರೆಂಬುದು ಲೋಕವಿದಿತವಾಗಿದೆ. ಹೀಗೆ ಗಂಧರ್ವರಷ್ಟು ಸಂಸ್ಕೃತರಲ್ಲದ ಯಕ್ಷರಗಾನವೂ ಅಷ್ಟು ಸಂಸ್ಕೃತವಾಗಿಲ್ಲದಿರುವುದು ಆಶ್ಚರ್ಯವಲ್ಲ. ಗಂಧರ್ವಗಾನದಲ್ಲಿ ಶೃಂಗಾರರಸಕ್ಕೆ ಮೇಲ್ಮೆಯಾದರೆ ಯಕ್ಷಗಾನದಲ್ಲಿ ವೀರರೌದ್ರರಸಗಳಿಗೆ ಶ್ರೇಷ್ಠತೆ. ಮೊದಲಿನದು ದಶವಿಧಗಮಕಗಳಿಂದ ನಿಬಿಡವಾದರೆ ಮತ್ತಿನದು ಹಾಗಿಲ್ಲವೆನ್ನಬಹುದು. ಒಂದನೆಯದರಲ್ಲಿ ಪ್ರಬುದ್ಧತೆ ನಿರಂತರಾಭ್ಯಾಸಕ್ಕೇ ಸಾಧ್ಯವಾದರೆ ಎರಡನೆಯದರಲ್ಲಿ ಜಾಣ್ಮೆ ಸಾಮಾನ್ಯಾಭ್ಯಾಸಕ್ಕೂ ಕೈಯೊಳಗಾಗಬಹುದು. ಒಂದನ್ನು ಕೇಳಿ ಸಂಸ್ಕೃತಿಗೊಂಡವನ ದುಃಖಮಗ್ನವಾದ ಮನಸ್ಸೂ ಕ್ಲೇಶಗಳನ್ನೆಲ್ಲಾ ಮರೆತು ಶಾಂತತೆಯ ಆನಂದದಲ್ಲಿ ತೇಲಾಡುವುದಾದರೆ, ಮತ್ತೊಂದನ್ನು ಕೇಳಿದರೆ ಹಾಗಾಗದು.

"ಆಟ" ಅಥವಾ "ಬಯಲಾಟ" ವೆಂದರೆ ಪೂರ್ವೋಕ್ತವಾದ ಯಕ್ಷಗಾನಾನುಸಾರವಾಗಿ ಬರೆದ ಹಾಡುಗಬ್ಬ ಅಥವಾ ಯಕ್ಷಗಾನ ಪ್ರಬಂಧಗಳನ್ನು ನಾಟಕದಂತೆ ಆಡಿತೋರಿಸುವ ಆಟವು; ಅಥವಾ ದೃಶ್ಯವು. ನಾಟಕವನ್ನು ಆದಕ್ಕಾಗಿ ಕಟ್ಟಿದ ನಾಟಕಶಾಲೆಗಳಲ್ಲಿ ಆಡುವುದರಿಂದಲೂ, ಇದು ತದ್ಭಿನ್ನವಾಗಿ ಬಯಲಲ್ಲಾಡುವ ಆಟವಾದುದರಿಂದಲೂ, ಇದಕ್ಕೆ ಬಯಲಾಟವೆಂಬ ಹೆಸರೊದಗಿತು. ಈ "ಆಟ" ಶಬ್ದವು ಕನ್ನಡದ "ಆಡು" ಎಂಬ ಧಾತುವಿನಿಂದ ರೂಪಗೊಂಡ ಕೃದಂತ ನಾಮಪದವು. ಸಂಸ್ಕೃತದಲ್ಲಿ ಗಮನಾರ್ಥದಲ್ಲಿ ಉಪಯೋಗಿಸಲ್ಪಡುವ "ಅಟ್" ಧಾತುವಿಗೂ ಈ "ಆಡು" ಧಾತುವಿಗೂ ಸಂಬಂಧವಿರಬಹುದು. ಅಥವಾ "ಕುಣಿ" ಎಂಬರ್ಥವುಳ್ಳ "ನಟ್" ಧಾತುವಿನಿಂದುಂಟಾದ "ನಾಟ" ಶಬ್ದದಿಂದ ಜನಿಸಿ "ಆಟ, ಆಡು" ಇತ್ಯಾದಿ ರೂಪಗಳುಂಟಾಗಿರಲೂಬಹುದು. ಕನ್ನಡದಲ್ಲಿ "ಆಡು, ಆಟ" ಎಂಬ ಶಬ್ದಗಳು ನೃತ್ಯಾರ್ಥದಲ್ಲಿ ಪ್ರಸಿದ್ಧಿಗೊಂಡಿದೆ.

**ಒಬ್ಬರೊಬ್ಬರು ಬಲಮುರಿ ಯೆಡಮುರಿಯಾಗಿ ।**
**ಸಬ್ಬವದೊಳು ಚಾರಿವರಿದು ॥**
**ಇಬ್ಬರು ಸುಳಿದಾಡಿ ನಿಂದಳೊಬ್ಬಳು ಹಿಂದೆ ।**
**ಮೊಬ್ಬಳಾಡಿದಳು ರಂಗದೊಳು ॥ ೧ ॥**
**ಗಾಡಿಕಾರನನೊಮ್ಮೆ ಕಂಡೆದೆ ಜುಮ್ಮೆಂದ-**
**ಪಾಡುಗಂಡಾಚದುರೆಯರು।**

**ಕೂಡೆಕೂಡೀಕ್ಷಿಸಲಾಟ ಮುರೆವುದೆಂದು ।**
**ನೋಡದಾಡಿದರೋರೆ ಮೊಗದಿ ॥ ೨ ॥**

ಇನ್ನೂ "ಗಡಬಡವಹುದಾಟವೆಂದು" "ಆಟದ ಚಿಂತೆಯೊಳಡಗಿರ್ದುದೆದೆಯಾಕೆ" ಎಂಬುದಾಗಿಯೂ, ಭರತೇಶ ವೈಭವದಲ್ಲಿ ಈ "ಆಡು, ಆಟ" ಶಬ್ದಗಳು ಬಹಳ ಕಡೆಗಳಲ್ಲಿ ಕಾಣುತ್ತವೆ. ರತ್ನಾಕರ ವರ್ಣಿ ಹೇಳುವ ಆಟ, ಅಲ್ಲವೆ, ನಾಟಕವು ನೃತ್ಯಾತ್ಮಕವಾದರೂ, ನೃತ್ಯವನ್ನೊಳಕೊಂಡ ನಮ್ಮ ಆಟ, ಅಥವಾ ಬಯಲಾಟಕ್ಕೂ ಅದಕ್ಕೂ ಸಂಬಂಧವಿದೆಯೆಂಬುದನ್ನು ಎಲ್ಲರೂ ಒಪ್ಪಬಹುದು.

ಯಕ್ಷಗಾನ ಪ್ರಬಂಧಾನುಸಾರವಾಗಿ ಬಯಲಲ್ಲಿ ಆಡಲ್ಪಡುವ ಆಟವು ಆಧುನಿಕವಾದರೂ, ಅದಕ್ಕೆ ಮೂಲವಾದ ಯಕ್ಷಗಾನವು ನಮ್ಮಲ್ಲಿ ಪೂರ್ವಕಾಲದಲ್ಲೆ ನೆಲೆಗೊಂಡಿರಬಹುದೆಂಬುದನ್ನು ಮೊದಲೆ ವಿಮರ್ಶಿಸಿದ್ದೇನೆ. ದೇಶೀಯವಾದ ಆ ಆಟದ ಮೂಲಸ್ವರೂಪವೂ, ಹಾಗೆಯೆ ಆದಿಯಿಂದಲೆ ಮೊದಲ್ಗೊಂಡಿದೆಯೆಂದು ತೋರುತ್ತದೆ.

ತಮಿಳುದೇಶದಲ್ಲ "ತಿರುಕ್ಕೂತ್ತು" (ಬೀದಿಯ ಕುಣಿತ) ಎಂಬ ನೃತ್ಯವೂ ಮಲೆಯಾಳದಲ್ಲಿ "ಚಾಕಿಯಾರ್ಕ್ಕೂತ್ತು" (ಯಕ್ಷರಕುಣಿತವೇ ಆಗಿರಬಹುದೆ?) ಎಂಬ ಕುಣಿತವೂ ಪ್ರಸಿದ್ಧವಾಗಿದೆ. ಸುಮಾರು ಎರಡನೆಯ ಶತಮಾನದ ಶೆಂಗುಟ್ಟುವನೆಂಬ ತಮಿಳುರಾಜನು ನೀಲಗಿರಿಯ ಕನ್ನಡರ ಕುಣಿತವನ್ನು ನೋಡಿ ಸಂತೋಷಪಟ್ಟನೆಂದು ತಿಳಿದುಬರುತ್ತದೆ. ಇದರಿಂದ ತಮಿಳರ ತಿರುಕ್ಕೂತ್ತಿಗಿಂತಲೂ ಕನ್ನಡರ ಕುಣಿತವು ಆಕರ್ಷಕವಾಗಿತ್ತೆಂದೂಹಿಸಬಹುದು. 'ನಟ್' ಧಾತುವಿನಿಂದುದಿಸಿ ಸಾರ್ಥಕವಾಗಿ "ನಾಟ"ವೆಂದು ಹೆಸರ್ಗೊಂಡ ಕನ್ನಡದೇಶದಲ್ಲಿ ಅಂಥ ನಟ್ಟುವರು ಇರುವುದಾಶ್ಚರ್ಯವಲ್ಲ. ಸಂಗೀತಾಂಗವಾದ ನೃತ್ಯವು ಕನ್ನಡ ನಾಡಿನಲ್ಲಿ ಎಷ್ಟರಮಟ್ಟಿಗೆ ಏಳಿಗೆಗೊಂಡಿತ್ತೆಂಬುದನ್ನು ಭರತೇಶ ವೈಭವದ ನಾಟಕಸಂಧಿಗಳಲ್ಲಿ ತೋರುವ ನೃತ್ಯವರ್ಣನೆಯಿಂದ ತಿಳಿಯಬಹುದು.

ಇಂತಹ "ಆಟ"ವು ಯಾವ ಯಾವ ರೀತಿಯಲ್ಲಿ ಎಂತೆಂತಹ ಆದರ್ಶಗಳ ಆಧಾರದಿಂದ ಈಗಿನ ರೂಪವನ್ನು ಪಡೆದಿರಬಹುದೆಂಬುದನ್ನೂಹಿಸುವುದು ಪ್ರಕೃತ ವಿಷಯವು.

ಕ್ರಿಸ್ತಪೂರ್ವದಲ್ಲೆ ಜೈನರು ಈ ತೆಂಕಣ ನಾಡಿಗೆ ಬಂದರೆಂಬುದನ್ನು ಚರಿತ್ರಕಾರರು ನಿರ್ಧರಿಸಿದ್ದಾರೆ. ಕ್ರಿಸ್ತಪೂರ್ವದವನಾಗಿಯೂ, ಚರಿತ್ರಕಾರರಿಗೆ ಪರಿಚಯವುಳ್ಳ ಸಂಸ್ಕೃತ ನಾಟಕಕಾರರೊಳಗೆ ಮೊದಲಿಗನಾಗಿಯೂ ಇರುವ ಭಾಸಕವಿಯ ನಾಟಕಗಳ ಮೂಲಪ್ರತಿಗಳೆಲ್ಲ ನಮ್ಮ ಕೇರಳದೇಶದಲ್ಲೆ ಸಿಕ್ಕಿದ ಕಾರಣ ಹಿಂದುಗಳೂ ಕ್ರಿಸ್ತಪೂರ್ವದಲ್ಲೆ ಇಲ್ಲಿ ನೆಲಸಿದ್ದರೆಂದು ಕಾಣುತ್ತದೆ. ರಾಮಾಯಣಕಾಲದಲ್ಲಿಯೆ ಈ ದಕ್ಷಿಣದೇಶದಲ್ಲಿ ಹಲವು ಬ್ರಾಹ್ಮಣ ಋಷಿಗಳು ವಾಸಿಸುತಿದ್ದರೆಂದೂ, ರಾವಣಾದಿಗಳೂ ಬ್ರಾಹ್ಮಣ ಋಷಿಯ ಮಕ್ಕಳೆಂದೂ ರಾಮಾಯಣದಲ್ಲಿ ತೋರುತ್ತದೆ. ತಮಿಳು ಭಾಷೆಯನ್ನೇಳಿಗೆಗೊಳಿಸಿದವನು ಅಗಸ್ತ್ಯನೆಂದು ತಮಿಳು ವಿದ್ವಾಂಸರ ನಂಬುಗೆ. ತೋಲ್ಕಾಪ್ಪಿಯಂ ಎಂಬ ತಮಿಳಿನ ಆದಿವ್ಯಾಕರಣವನ್ನು ಬರೆದವನು ಆ ಅಗಸ್ತ್ಯಶಿಷ್ಯನಾದ ತೋಲ್ಕಾಪ್ಪಿಯಾರೆಂಬ ಬ್ರಾಹ್ಮಣನು ಕ್ರಿಸ್ತಪೂರ್ವದವನೆಂದು ಹೇಳುತ್ತಾರೆ. ಇವೇ ಮೊದಲಾದ ಅನೇಕ ಕಾರಣಗಳಿಂದ ಜೈನರಿಗಿಂತಲೂ ಮೊದಲೆ ಇಲ್ಲಿ ವೇದಾನುಯಾಯಿಗಳಾದ ಬ್ರಾಹ್ಮಣ ವಿದ್ವಾಂಸರ ಸಮೂಹವು ನೆಲೆಗೊಂಡಿತ್ತೆಂಬುದು ಗೊತ್ತಾಗುತ್ತದೆ.

ಈ ಬ್ರಾಹ್ಮಣರೂ ಜೈನರೂ ತಂತಮ್ಮ ಮತಗಳನ್ನು ಅನೇಕ ರೀತಿಯಲ್ಲಿ ಜನಸಮೂಹಕ್ಕೆ ಬೋಧಿಸುತ್ತಿದ್ದರು. ಬ್ರಾಹ್ಮಣರು ದೇವಸ್ಥಾನಗಳನ್ನೂ, ಜೈನರು ಬಸದಿಗಳನ್ನೂ ಕಟ್ಟಿ, ಅವುಗಳಲ್ಲಿ ನಿಯಮಪ್ರಕಾರವಾಗಿ ಜರುಗುವ ಉತ್ಸವಾದಿಗಳ ಮೂಲಕವಾಗಿ ತಂತಮ್ಮ ಕರ್ಮಕಾಂಡಗಳನ್ನು ಚಿಗುರಿಸಿದರು. ಆಗಿನ ಭಿನ್ನಭಿನ್ನ ಮತೀಯರ ಕಟ್ಟೋಣಗಳು ವಿಚಿತ್ರವಾದ ಶಿಲ್ಪದಿಂದಲೂ ಕೆತ್ತನೆಯ ಕೆಲಸಗಳಿಂದಲೂ, ಈ ಹೊತ್ತಿನಲ್ಲಿಯೂ ದಕ್ಷಿಣದೇಶದ ಗತವೈಭವವನ್ನೂ ವಿಶಿಷ್ಟ ಸಂಸ್ಕೃತಿಯನ್ನೂ ಲೋಕಕ್ಕೆ ಸಾರುತ್ತಿವೆ. ದೇವಸ್ಥಾನಗಳ ತೇರುಗಳಲ್ಲಿಯೂ ಭೂತಸ್ಥಾನಗಳ ಬಂಡಿಗಳಲ್ಲಿಯೂ ಚಿತ್ರವಿಚಿತ್ರಗಳಾದ ದೇವದೈವಗಳ ಬೊಂಬೆಗಳನ್ನು ಮಾಡಿ ಇಟ್ಟು, ಉತ್ಸವಕಾಲಗಳಲ್ಲಿ ಆ ವಾಹನಗಳನ್ನು

ಎಳೆವುದು ಈಗಲೂ ರೂಢಿಯಲ್ಲಿದೆ. ಇದು ಆ ದೇವ ದೈವಗಳು ಭಕ್ತರಲ್ಲಿ ತಮಗಿರುವ ಕರುಣೆಯನ್ನು ನಟನ ಪೂರ್ವಕವಾಗಿ ಹೊರಪಡಿಸುವುದರಿಂದ ಬೊಂಬೆಯಾಟದ ಒಂದು ಪೂರ್ವರೂಪವೆಂದೇ ವ್ಯಕ್ತವಾಗುತ್ತದೆ.

ದೇವರ ಬಲಿ ಎರಡು ತೆರವಿದೆ. ಒಂದು ಬಲಿ ಮೂರ್ತಿಯನ್ನು ಹೊತ್ತು ಆಸರಣ್ಣ (ಆಸರ=ಆಶ್ರಯ. ಅಣ್ಣ=ಅಗ್ರಣಿ? ಪೂಜ್ಯಾರ್ಥದಲ್ಲಿಯೂ ಈ ಶಬ್ದವು ಪ್ರಯೋಗಿಸಲ್ಪಡುತ್ತದೆ. ಈ ಆಸರಣ್ಣನು ಉತ್ಸವಕಾಲದಲ್ಲಿ ಮಾತ್ರ ಬರುವವನು )ನು ದೇವಸ್ಥಾನಕ್ಕೆ ಸುತ್ತು ಬರುವುದು. ಇನ್ನೊಂದು, ದೇವರ ಅಟ್ಟೆ (ಮೂರ್ತಿಯನ್ನು ಸುತ್ತಲೂ ಬಟ್ಟೆಹೂಗಳಿಂದ ಅಲಂಕರಿಸಿ ಮಾಡುವ ಅಲಂಕಾರ.)ಯನ್ನು ಹೊತ್ತು ಉತ್ಸವಸಮಯದಲ್ಲಿ ಮಾತ್ರ ಬಲಿಬರುವುದು. ಮೊದಲನೆಯದನ್ನು ವೈದಿಕ ಕ್ರಮವೆನ್ನಬಹುದಾದರೆ ಎರಡನೆಯದನ್ನು ರಾಜಕೀಯದರ್ಬಾರಿನ ರೀತಿಯೆನ್ನಬಹುದು ಈ ಅಟ್ಟೆಗಟ್ಟದ ದೇವರ ಬಲಿಯ ಮುಂದುಗಡೆ ವಿಕಾರರೂಪವನ್ನೊದಗಿಸಿದ ಬೇತಾಳನೂ ಹಿಂದುಗಡೆಯಲ್ಲಿ ರಾಜದೈವವಾದ ಪಾತ್ರದಲ್ಲಾವೇಶಗೊಂಡ ಭೂತವೂ, ಸುತ್ತಲೂ ಜನಸಂದಣಿಯೂ ಇರುತ್ತದೆ. ಈ ಭೇತಾಳನು ವಿದೂಷಕನಂತೆಯೂ, ಹಿಂದಣ ಭೂತವು ಅನುಯಾಯಿಯಾದ ಬಂಟನ ಹಾಗೆಯೂ, ದೇವರನ್ನು ಹೊತ್ತವನು ಈ ಪರಿಜನರಿಂದೊಡಗೂಡಿದ ರಾಜನೋಪಾದಿಯಲ್ಲಿಯೂ ಇದ್ದು ಇದು ನೋಟಕರಿಗೊಂದು ಅಂದವಾದ ದೃಶ್ಯವಾಗುತ್ತದೆ. ಆ ಮೇಲೆ ನೆಲೆಗೊಂಡ ಹನುಮನಾಯಕ ಮಾಂಡಲಿಕರು ಮೊದಲಾದವರಿಂದ ಕೂಡಿದ ಬಯಲಾಟದ ಅರಸನ ಒಡ್ಡೋಲಗಕ್ಕೆ ಇದೂ ಒಂದು ಆದರ್ಶವಾಗಿರಬಹುದೆಂದರೆ ತಪ್ಪಾಗುವುದೆ?

ಈ ನಾಡ ದೈವೋತ್ಸವ ಪದ್ಧತಿಯನ್ನು ಕೆಲಮಟ್ಟಗೆ ಅನುಸರಿಸಿಯೆ ಬ್ರಾಹ್ಮಣರು ಇಂತಹ ದೇವೋತ್ಸವ ಕ್ರಮವನ್ನು ನೆಲೆಗೊಳಿಸಿದರೆಂದು ತೋರುತ್ತದೆ ಅಥವಾ ಬ್ರಾಹ್ಮಣನ ಕ್ರಮವನ್ನೆ ಈ ದೇಶೀಯರು ಅನುಸರಿಸಿದ್ದರೂ ಇರಬಹುದು. ಹೇಗೆಂದರೆ — ಭೂತೋತ್ಸವಗಳಲ್ಲಿಯೂ ಇದೇ ಕ್ರಮವಿದೆ. ಭೂತಪೂಜಕನೂ ಭೂತಾವೇಶಗೊಳ್ಳುವವನೂ ಆದ ಪೂಜಾರಿ (ಪಾತ್ರಿ) ಯೆಂಬ ಶೂದ್ರಜಾತಿಯವನು, ದೇವಸ್ಥಾನದಲ್ಲಿ ಪೂಜೆ ಮಾಡಿ ಆಗಾಗ ಬಲಿಮೂರ್ತಿಯನ್ನು ಹೊತ್ತು ಬಲಿ ಬರುವ ಅಡಿಗಳಂತಿರುತ್ತಾನೆ. ಅಣಿ (ಅಟ್ಟೆಯಂತಿರುವ ಭೂತದ ಕಿರೀಟ) ಗಟ್ಟ "ಕೋಲ, ಓಲಸರಿ" ಇತ್ಯಾದಿಯಾದನೈಮಿತ್ತಿಕೋತ್ಸವಗಳಲ್ಲಿ ರಾಜಠೀವಿಯಿಂದ ಪೂಜೆಗೊಳ್ಳುವ ಭೂತದ ವೇಷವನ್ನು ಕಟ್ಟುವ "ನಲಿಕೆಯವ ನಾಗಲಿ, ಪಂಬದನಾಗಲಿ" (ಇವರು ಚಂಡಾಲಜಾತಿಯವರು) ಅಟ್ಟೆಗಟ್ಟ ಮೂರ್ತಿಯನ್ನಲಂಕರಿಸಿ ಬಲಿಬರುವ ಆಸರಣ್ಣನಂತಿರುತ್ತಾನೆ. ದೇವರ ಅಟ್ಟೆಯೂ ಭೂತದ ಅಣಿಯೂ ಸುಮಾರು ಒಂದೇ ರೀತಿಯಲ್ಲಿದೆ. ಆಟದಲ್ಲಿ ಅರಸನಾದವನೂ, ರಾಕ್ಷಸರೂ ಇಡುವ ಉರುಟಾದ ಬಟ್ಟಲು ಕಿರೀಟಗಳನ್ನು ಈ ಅಟ್ಟೆಅಣಿಗಳ ದೃಷ್ಟಾಂತಗಳಿಂದವೆ ತಯಾರಿಸಿದರೆಂಬುದರಲ್ಲಿ ಸಂದೇಹವು ಕಾಣುವುದಿಲ್ಲ. ಬಯಲಾಟಗಳ ವೇಷಕ್ಕೆ ಬೇಕಾದ "ಅರಿದಾಳ ಇಂಗಲಿಕ" ಮೊದಲಾದ ಬಣ್ಣಗಳೂ, ಆ ಬಣ್ಣವು ಭೂತದ ವೇಷಕ್ಕೆ ಉಪಯೋಗಿಸುವ ಬಣ್ಣವೆ. ರಾಕ್ಷಸರೆ ಮೊದಲಾದ ಹಲವು ವೇಷಗಳು ಆ ಭೂತಗಳ ವೇಷಗಳಂತೆಯೆ ಕಾಣುತ್ತವೆ. ಉಡುಪುಗಳಲ್ಲಿಯೂ ಪರಸ್ಪರವಾದ ಹೋಲಿಕೆ ಸಂಪೂರ್ಣವಾಗಿದೆ. ಇಲ್ಲಿಯ ಮೂಲನಿವಾಸಿಗಳು ಮೈಮೋರೆಗಳನ್ನು ಕೀರಿ ಬಣ್ಣಗಳನ್ನು ಹಚ್ಚಿ ಎಂದೆಂದೂ ಸ್ಥಿರವಾಗಿ ನಿಲ್ಲುವಂತೆ ಮಾಡುತಿದ್ದರೆಂಬುದನ್ನು ಚಾರಿತ್ರಿಕರು ಕಂಡುಹಿಡಿದಿದ್ದಾರೆ. ಕೆಲಕೆಲವರು ಕೈಮೋರೆಗಳಲ್ಲಿ ಈಗಲೂ ಆ ರೀತಿಯಲ್ಲಿ ಬಳ್ಳಿಗಳಾಕಾರದಿಂದಲೂ ಚುಕ್ಕಿಗಳಾಗಿಯೂ ಬಣ್ಣ ವಿಡುವುದನ್ನು ಕಾಣಬಹುದು.

ಈ ನಾಡುಗಳಲ್ಲಿ ಬ್ರಾಹ್ಮಣಮತವು ಪ್ರಬಲ್ಲವಾಗಿ ಮೊದಲು ಮ್ಲೇಂಛರೆಂದು ಕರೆಯಲ್ಪಡುತ್ತಿದ್ದ ಮೂಲನಿವಾಸಿಗಳು ಹಿಂದುಗಳಾಗಿ ಮಾರ್ಪಟ್ಟು ಅವರ ಭೂತಗಳೂ ಬ್ರಾಹ್ಮಣದೇವತೆಗಳ ಅಡಿಯಾಳುಗಳಾದುವು ತ್ರಿಮೂರ್ತಿಗಳೆ ಪ್ರಧಾನವಾದ ಪೌರಾಣಿಕ ಮತವು ಜನಸಾಮಾನ್ಯರಲ್ಲಿ ಹಬ್ಬಿತು. ದೇವದೈವ ಸ್ಥಾನಗಳ ಉತ್ಸವಗಳೆಂಬ ಆಟಗಳು ಬರಿಯಭಕ್ತಿಯನ್ನಷ್ಟೆ ನೆಲೆಗೊಳಿಸಲು ಸಮರ್ಥಗಳಾದುವಲ್ಲದೆ, ಅದಕ್ಕನುವಾದ ಪ್ರಾಪಂಚಿಕ ಬೋಧನೆಗೆ ಆವು ಅಸಮರ್ಥ

ಗಳಾದುವು. ಆದರಿಂದ ಯಕ್ಷಗಾಣ ಪ್ರಸಂಗಗಳನ್ನಾಗಿ ರಚಿಸಿದ ಪೌರಾಣಿಕ ಕಥೆಗಳನ್ನು ದೃಶ್ಯವಾಗಿ ಬೋಧಿಸುವ ಬೊಂಬೆಯಾಟಗಳೂ, ಕೂತು ಅರ್ಥವನ್ನಾಡುವ "ತಾಳಮದ್ದಳೆ"ಗಳೆಂಬ ಕೂಟಗಳೂ, ಬಯಲಾಟಗಳೂ ನೆಲೆಗೊಂಡವು.

## ಕನ್ನಡ ನಾಡಿನ ಹಾಡುಗಳು.

# ಸಮುದ್ರಮಥನ

(ಲೇಖಕ:-ಗುಲ್ವಾಡಿ ಅಣ್ಣಾಜಿರಾವ್ ಎಮ್. ಎ. ಎಲ್. ಎಲ್. ಬಿ.

(**ಸೂಚನೆ:**— ರಾಷ್ಟ್ರೀಯ ಚಳವಳವನ್ನು ಸಮುದ್ರ ಮಥನಕ್ಕೆ ಹೋಲಿಸಿರಿ.)

ಘನದಿ[1] ಬಾರೇ ರಾಜ್ಯಲಕ್ಷ್ಮೀ—
ಮನೆಯ ಸೇರೇ ಭಾಗ್ಯಲಕ್ಷ್ಮೀ—
ಕಡಲ ಉದರದಿ ಮುಖವ ತೋರೇ—
ಮಡುವ ಹಾರೀ ಧರೆಗೆ ಬಾರೇ! ‖ ಪಲ್ಲ ‖

ಜಲಧಿಮಥನದ ವಾಳ್ಯೆ[2]ವನ್ಮಾ!
ತುಳುಕುತಿಹುದೂ[3] ಶರಧಿಯನ್ಮಾ!
ವಿಷದ[4] ಗಾಳಿಯು ಬೀಸುತಿಹುದೂ—
ಭಸುಮಗೈಯುತೆ ಸೂಸುತಿಹುದೂ! ‖ ೧ ‖

ದೇವದೈತ್ಯರು ಗೆಣೆಯಕೊಟ್ಟೊ,
ಭಾವಯೇಕದಿ ಹಗೆಯು ಬಿಟ್ಟೊ—
ಕೂಡಿ ಮುಂಥನ ಗೈದರನ್ಮಾ!
ನೋಡಲದುವೇ ಚೋದ್ಯವನ್ಮಾ! ‖ ೨ ‖

ಶರಧಿಮಥನಕೆ ಉರಗ ಹಗ್ಗಾ[5]!
ಶಿರದಿ ಮೆರೆದರು ದಿತಿಜ ವರ್ಗಾ!
ಕಾಳಕೂಟದ ವಿಷದ ಜ್ವಾಲೇ
ಬೀಳ ತೊಡಗಿತು ಜಗದ ವ್ಯಾಲೇ! ‖ ೩ ‖

ಬಿಡದೆ ತೊಡರೂ[6] ಬಂದಿತೆಂದೂ?
ಹಿಡಿದ ಕಾರ್ಯವ ಬಿಟ್ಟರೆಂದೂ![7]
ಕಷ್ಟ ಸಹಿಸೀ ಬಳಲ್ದರೆಲ್ಲಾ![8]
ಇಷ್ಟಸುಧೆಗೇ ತೊಳಲ್ದರೆಲ್ಲಾ[9]! ‖ ೪ ‖

ಊರ ದಹಿಪುದು ಕಾಳಕೂಟಾ—
ಯಾರು ಸಹಿಸಲಿ ವಿಷದ ಕಾಟಾ?
ಕಂಡ ಮೂರ್ತಿಯು ಬೆಂದು ಹೋಯ್ತೂ—
ಕೆಂಡದ್ವಾಂಗಿನ[10] ಉರಿಯು ಆಯ್ತೂ! ‖ ೫ ‖

ದೇವ ರಕ್ಕಸ ಛಲವು ಅಡಗೇ
ಕಾವ ದೇವನ[11] ಕಾಲ ಅಡಿಗೇ—
ಕಾಯ್ದು ಕೊಟ್ಟನು ವಿಷದ ಜ್ವಾಲೇ—
ಹೊಯ್ದು ಮಡುಹಿಲಿ ತರುಣಿ ಬಾಲೇ! ‖ ೬ ‖

ರನ್ನಕಲಶದಿ ಸುಧೆಯ ತಂದೇ,
ಪೊನ್ನಸೊಬಗಿನ ತರುಣಿ ಹಿಂದೇ!
ದೇವಕುಲಕೆ ಅಮರತನದೀ
ಸಾವ ತಪ್ಪಿಸಿ ಮೆರೆದೆ ಘನದೀ ‖ ೭ ‖

---

1. ಅಟ್ಟಹಾಸದಿಂದ ಗೌರವ ಯುಕ್ತಳಾಗಿ, 2. ವೇಳೆ. (ಗ್ರಾಮ್ಯ) 3. ಅಲ್ಲೋಲ ಕಲ್ಲೋಲವಾಗುತಿದೆ. 4. ಜಾತಿ ದ್ವೇಷವೆಂಬ ವಿಷ. 5. ಹಗ್ಗ (ಗ್ರಾಮ್ಯ). 6. ಸಂಕಷ್ಟ. 7. ಅರ್ಥಾತ್ ಎಂದಿಗೂ ಬಿಡಲಿಲ್ಲ. 8. ಬಳಲಿದರಷ್ಟೆ? 9. ಎಲ್ಲರೂ ಸಾಹಸಗೈದರು. 10. ಕೆಂಡದಂತಿರುವ. 11. ಶಿವನ.

ಘನದಿ ಬಾರೇ ರಾಜ್ಯಲಕ್ಷ್ಮೀ!
ಮನೆಯ ಸೇರೇ ಭಾಗ್ಯಲಕ್ಷ್ಮೀ!
ರನ್ನಕಲಶದಿ ಸುಧೆಯ ತಾರೇ—
ಮುನ್ನ ತೆರದೀ ಧರೆಗೆ ಬಾರೇ! ॥ ೮ ॥

ಮರಳಿ ಬಾಯೆನೆ ವರದ ಲಕ್ಷ್ಮೀ -
ಜರೆದು ನುಡಿಯಳೆ ಭಾಗ್ಯಲಕ್ಷ್ಮೀ: -
"ಶರಧಿ ಯೆನ್ನಯ ಪೊರೆನ ಮನೆಯಿರೆ,
ಧರೆಗೆ ಬರಿದೇ ಕರೆವನಾರೈ? ॥ ೯ ॥

"ಬೆಟ್ಟದಂತಿಹ ಪಟ್ಟಗಜವನು
ಕಟ್ಟ ಆಳುವ ದಿಟ್ಟರಿಲ್ಲಾ!
ತನ್ನ ಭಾಗ್ಯವನನ್ಯಗುಣಿಸುವ[12]
ಗನ್ನಗತುಕರ ಸೇರ್ವಳಲ್ಲಾ! ॥ ೧೦ ॥

"ತನ್ನ ಮನೆತನ, ತನ್ನ ಗೌರವ
ತನ್ನ ದೇಶವ ಮರೆವಳಲ್ಲಾ!
ಅನ್ಯಸೇವೆಯೆ ಧನ್ಯವೆನಿಸೀ
ಮಾನ್ಯಗೈವರ ಒಲಿವಳಲ್ಲಾ! ॥ ೧೧ ॥

"ತಾತನಾಗಲಿ, ಭ್ರಾತನಾಗಲಿ,
ತ್ರಾತನಾದರೆ[13]ಮನೆಗೆ ಬರುವೇ!
ಹೆತ್ತ ತಾಯಿಯ ತೊತ್ತಿಗಿರಿಸೀ
ಮತ್ತೆ ಮೆರೆವಾ ಜನರ ತೊರೆವೇ! ॥ ೧೨ ॥

"ಕಟ್ಟಕೊಂಡೂ ಪಟ್ಟಕೊಟ್ಟರೆ
ಅತ್ತು ಅಳುವಾ ಕತ್ತೆಜನರಿಗೆ
ಹೊತ್ತು ಹೊರೆವಾ ಭೃತ್ಯತನವೇ
ಮತ್ತೆ ಲೇಸೆ"ನೆ ಜರೆವಳಲ್ಲಾ! ॥ ೧೩ ॥

ಜರೆದು ನುಡಿವಾ ವರದ ವಾಣಿಗೆ
ಕರವ ಮುಗಿದೂ ಶಿರವ ಮಣಿವೇ—
ಮತ್ತೆ ಬೇಡುವೆ ಚಿತ್ತಶುದ್ಧದಿ
ಇತ್ತು ವರವನು ಕಾಯ್ವುದೆಂದೂ— ॥ ೧೪ ॥

ಕರವ ಮುಗಿದೂ ಬೇಡಿಕೊಂಬೇ—
"ಸರ್ವ ಪಾಪವ ಕ್ಷಮಿಸೆ ಅಂಬೇ!
ಪೊರೆದ ಬಾಲರ ಪೊರೆಯೊ[14]ಜನನೀ -
ಭರದಿ ಪಾಲಿಸೆ ವರದ ವಾಣೀ! ॥ ೧೫ ॥

"ನನ್ನ ಜಡತನ ಗಣಿಸಬೇಡೇ,
ನಿರ್ಮಲಾಂಕನ ಮಹಿಮೆ ನೋಡೇ—
ಪುಣ್ಯಚರಿತನ ಘನದ ಆಣೇ—
ಹಿಂದೆ ಭಗಿರಥಗೊಲಿದ ಜಾಣೇ! ॥ ೧೬ ॥

"ಶಿವನ ಜಡೆಯನು ಧುಮುಕಿ ಬಂದೇ,[15]
ಭುವನವೆಲ್ಲವ ತಣಿಸಿ ಮುಂದೇ
ಸಗರ ಪುತ್ರರ ಗೈದು ಪಾವನ
ಹಗುರಕೋಟಿಗೆ ಇತ್ತೆ ಜೀವನ! ॥ ೧೭ ॥

"ಕ್ರೂರ ಮಹಿಷನ ಸೆಣಸಿ ಗೆಲಿದೇ—
ವೀರ ಆಂಗ್ಲರ ಒಲಿಪುದರಿದೇ?
ಮಿತ್ರ ಭಾವದಿ ಬೀರೆ ಪಾಶವ—
ಚಿತ್ರ ರೀತಿಲಿ ತೋರೆ ವೇಷವ! ॥ ೧೮ ॥

"ಭಸುಮ ದಿತಿಜನ ಒಲಿಸಿದವಳೇ,
ಕುಸುಮ ವೃಷ್ಟಿಯ ತರಿಸಿದವಳೇ,
ಕ್ರಾಂತ ಆಂಗ್ಲರ ತಣಿಸೆ ಮಾಯೇ—
ಶಾಂತ ರೂಪಕೆ ಒಲಿಸೆ ತಾಯೇ! ॥ ೧೯ ॥

"ಹಿಂದೆ ಬಲಿಶಿಹ ಗುಣವ ತಾರೇ[16]
ಮುಂದಿ ಜನಕೇ ಸುಖವ ತೋರೇ—
ರಾಷ್ಟ್ರಕೂಟರ[17]ಭಕುತಿಗೊಲಿದೂ
ಇಷ್ಟ ಸ್ವರಾಜ್ಯವ ನೀಡೆ ನಲಿದೂ! ॥ ೨೦ ॥

"ನಲಿದು ಬಾರೇ ರಾಜ್ಯಲಕ್ಷ್ಮೀ
ಒಲುಮೆ ತೋರೇ ಭಾಗ್ಯಲಕ್ಷ್ಮೀ
ಕಡಲ ಉದರದಿ ಮುಖವ ತೋರೇ,
ಮಡುವ ಹಾರೀ ಧರೆಗೆ ಬಾರೇ— ॥ ೨೧ ॥

---

12. ತನ್ನ ದೇಶದ ಭಾಗ್ಯವನ್ನು ಅನ್ಯರಿಗೆ ಉಣಿಸುವಂಥಾ (ದೇಶ) ಘಾತುಕಿಗಳನ್ನು ಸೇರಲಾರೆ. –" 13. ರಕ್ಷಕ. "ಯಾರು ನನ್ನ(ಗೌರವವ)ನ್ನುಕಾಪಾಡಬಲ್ಲನೋ ಅಂಥವನ ಮನೆಗೆ ಬರುವೆನಲ್ಲದೆ ತನ್ನ ಹೆತ್ತ ತಾಯಿಯನ್ನೇ ಅನ್ಯರ ಸೇವೆಯಲ್ಲಿಡಿಸುವಂಥವರಲ್ಲಿ ಬರಲಾರೆ". 14. ಹೆತ್ತ ಮಕ್ಕಳನ್ನು ರಕ್ಷಿಸೊ ತಾಯೇ–" 15. ಗಂಗಾವತರಣದಲ್ಲಿ. 16. ಹಿಂದಿನ ಕಾಲಗಳಲ್ಲಿ ಬಲಿತಿದ್ದ ರಾಷ್ಟ್ರ ಭಕ್ತಿಯನ್ನು ತಾರೇ. 17. ಕಾಂಗ್ರೆಸ್ ಪಕ್ಷದವರ.

# ಕನ್ನಡ ನುಡಿಯ ಹಿಂದು ಮುಂದು.

(ಶ್ರೀಯುತ ಕಡೆಂಗೋಡ್ಲು ಶಂಕರಭಟ್ಟರಿಂದ)



ಕಾಲದ ನವೀನತೆಗೆ ತಕ್ಕಂತೆ ಹೊಸ ಬೆಡಗನ್ನು ಹೊಂದಿ ಪ್ರಗತಿಯ ಹಜ್ಜೆಯನ್ನಿಡುವ ಅನೇಕ ಭಾಷೆಗಳನ್ನು ನೋಡಿದರೆ ಭಾವಿಕನಾದ ಕನ್ನಡಿಗನ ಹೃದಯವು ಮಾತ್ರ 'ಅಪ್ಪ ನೆಟ್ಟ ಆಲದ ಮರ'ಕ್ಕೆ ಪ್ರದಕ್ಷಿಣೆ ಮಾಡುವ ಪ್ರವೃತ್ತಿಯನ್ನು ಇನ್ನೂ ಸಂಪೂರ್ಣವಾಗಿ ಬಿಡದಿರುವ ಕನ್ನಡ ನುಡಿಯ ದುರವಸ್ಥೆಯನ್ನು ಕಂಡು ಶೂನ್ಯವಾಗದಿರದು. ಅನ್ಯಭಾಷೆಗಳಲ್ಲಿ ರವೀಂದ್ರನಾಥರಂತಹ ಮಹಾಕವಿಗಳು ಹುಟ್ಟಿ ತಮ್ಮ ಭುವನಮೋಹನ ಗಾನಲೇಖನಗಳಿಂದ ಜಗತ್ತಿಗೆ ಹೊಸ ಸಂದೇಶವನ್ನು ಕೊಡುತ್ತಿರುವಲ್ಲಿ, ಕನ್ನಡದಲ್ಲಿ ಅಂತಹ ವ್ಯಕ್ತಿಗಳನ್ನು ಕಣ್ಣೆದುರಿನಲ್ಲಿ ತೋರಿಸಿರೆಂದು ಯಾರಾದರೂ ಕೇಳಿದರೆ, ನಾವು ಭೂತಕಾಲದ ರಾಜ್ಯದಲ್ಲಿ ತೊಳಲಾಡಿ, ಹುಡುಕಿ, ಒಬ್ಬ ಪಂಪನನ್ನೊ ಪುರಂದರನನ್ನೊ ಲಕ್ಷ್ಮೀಶನನ್ನೋ ಬೆರಳೆತ್ತಿ ತೋರಿಸಬೇಕು. ಅಲ್ಲದೆ ಈಗಲೂ ಒಬ್ಬ ಮಹಾಕವಿಯು ಜೀವಂತನಾಗಿರುವನು; ಅವನ ಕವಿತೆಯಿಂದ ನಾವು ಸೃಷ್ಟಿಯ ಅನಂತ ವೈಚಿತ್ರ್ಯದ ಒಂದೊಂದೆ ಚಿತ್ರವನ್ನು ನೋಡುತ್ತಿರುವೆವೆಂದು ಹೇಳುವ ಎದೆ ನಮ್ಮಲ್ಲಿಲ್ಲ. ಆದುದರಿಂದ ಕನ್ನಡವು ಜೀವಿಸುತ್ತಿದೆಯೋ? ಎಂಬ ಪ್ರಶ್ನೆಗೆ "ಹೌದು" ಎಂದೇ ನಾವು ಉತ್ತರವನ್ನಿತ್ತರೂ ಜೀವನದ ಲಕ್ಷಣವಾದ ಚಟುವಟಿಕೆಯು ನಮ್ಮ ಭಾಷೆಯಲ್ಲಿ ಸಾಕಷ್ಟು ವ್ಯಕ್ತವಾಗಿ ಕಾಣುವುದಿಲ್ಲವೆಂದು ಖಿನ್ನರಾಗಿ ಹೇಳಬೇಕಾಗಿದೆ. ರೈಸ್ ಸಾಹೇಬರು ಕರ್ಣಾಟಕ ಭಾಷೆಯ ಇತಿಹಾಸದಲ್ಲಿ 'ಭೂಲೋಕದ ವಾಙ್ಮಯಕ್ಕೆ ಕನ್ನಡವು ಕೊಡತಕ್ಕ ವಿಷಯವು ಏನೂ ಇಲ್ಲ' ಎಂದು ಹೇಳುತ್ತಾರೆ. ಈ ಮಾತಿನಲ್ಲಿ ಸತ್ಯಾಂಶವು ಇಲ್ಲವೆಂದು ನಿರ್ಭೀತರಾಗಿ ಹೇಳುವಷ್ಟು ಧೈರ್ಯವು ನಮಗೆ ಸಾಲದು. ನಮ್ಮ ಹಿರಿಯರು ಮೂಲಧನವಾಗಿ ಕೊಟ್ಟ ಭಾಷಾಭಂಡಾರಕ್ಕೆ ನಾವು ಒಂದು ಕಾಸನ್ನಾದರೂ ಕೂಡಿಹಾಕಲಿಲ್ಲವೆಂಬ ಮಾತು ಒತ್ತಟ್ಟಿಗಿರಲಿ; ನಾವು ಅದನ್ನು ಸಂಪೂರ್ಣವಾಗಿ ಮರೆತೇ ಬಿಟ್ಟಿರುವೆವು. ಪರಿವರ್ತನಶೀಲವಾದ ಸೃಷ್ಟಿಯಲ್ಲಿ ನಿರ್ಮಿಸಿ, ದಿನಂಪ್ರತಿ 'ನವೋನವ'ರೆಂದು ಹೇಳಿಸಿಕೊಳ್ಳುವ ಸಂದರ್ಭವನ್ನೊದಗಿಸಿಕೊಟ್ಟ ಪರಮಾತ್ಮನಿಗೂ, ತಮ್ಮ ಅನರ್ಘ್ಯವಾದ ಜೀವನವನ್ನು ಭಾಷಾಸೇವೆಯಲ್ಲಿ ಸವೆಯಿಸಿ, ಸರಸ್ವತೀಸೇವೆಯ ಅಮೂಲ್ಯ ಅಧಿಕಾರವನ್ನೊದಗಿಸಿಕೊಟ್ಟ ಪೂರ್ವಜರಿಗೂ ನಾವು ಕಾರ್ಯದ ಮೂಲಕ ಕೃತಜ್ಞತೆಯನ್ನು ತೋರಿಸುವುದಿಲ್ಲ ಹೆಗ್ಗಳಿಕೆಯ ಭೇರಿಯನ್ನು ಹೊಡೆವಲ್ಲಿ ಮಾತ್ರ 'ನಮ್ಮ ಪಂಪ' 'ನಮ್ಮ ರನ್ನ'ರ ಮಾತು ನಮ್ಮ ಬಾಯಿಯಿಂದ ಹೊರಡುತ್ತದೆ. ಕರ್ಣಾಟಕದಲ್ಲಿ ಇಂತಿಂತಹ ಕವಿಗಳಿದ್ದರು, ಧೀರೋದಾತ್ತ ರಾಜರಿದ್ದರು, ಎಂದು ಗಳಹುವುದಕ್ಕೆ ನಮಗೆ ಅಂಜಿಕೆಯಾಗುವುದಿಲ್ಲ. ಆದರೆ, ಇಂದೀಗ 'ಕ್ಷೀರಸಾಗರ ಭಟ್ಟರ ಮನೆಯಲ್ಲಿ ಮಜ್ಜಿಗೆಗೆ ತತ್ವಾರ' ಎಂಬ ವಿಷಯವು ನಮಗೆ ಗೊತ್ತೇ ಇಲ್ಲ. ಒಬ್ಬ ಮನುಷ್ಯನು ಹೊಟ್ಟೆ ತುಂಬ ಊಟವಿಲ್ಲದೆ ವರ್ಷದ 365 ದಿವಸಗಳಲ್ಲಿಯೂ ಏಕಾದಶೀವ್ರತವನ್ನು ಆಚರಿಸುತ್ತಿರುವಾಗ, ಸ್ವಾವಲಂಬನೆಯಿಂದ ಉದರನಿರ್ವಾಹವನ್ನು ಮಾಡುವುದಕ್ಕೆ ಹವಣಿಸದೆ, ತನ್ನಲ್ಲಿ ತಾನೇ 'ನನ್ನ ಹಿರಿಯರು ಲಕ್ಷ್ಮೀಪುತ್ರರಾಗಿದ್ದರು; ಮೃಷ್ಟಾನ್ನವನ್ನು ಕಂಠಪ್ರಮಾಣವಾಗಿ ಸೇವಿಸುತಿದ್ದರು" ಎಂದು ಹೇಳಿಕೊಳ್ಳುವುದರಿಂದ ಅವನ ದುರವಸ್ಥೆಯೇನೂ ಕಡಿಮೆಯಾಗುವುದಿಲ್ಲ. ಬಾಯಿಯಲ್ಲಿ ಮಾತ್ರ ಅವರ ನಾಮೋಚ್ಚಾರ ಮಾಡಿ, ಅವನು, ಉತ್ತಮರಾಗಿದ್ದ ತನ್ನ ಪೂರ್ವಜರ ವಂಶದಲ್ಲಿ ಹುಟ್ಟುವುದಕ್ಕೆ ತನ್ನ ಅನರ್ಹತೆಯನ್ನು ಪ್ರಕಟಪಡಿಸಿ, ಅವರ ಪಾವನಸ್ಮರಣೆಗೆ ಅನ್ಯಾಯವನ್ನು ಮಾಡಿದಂತಾಯಿತು. ಯಾವ ಮನುಷ್ಯರಲ್ಲಿ ಜೀವನದ ಚಿಹ್ನೆಗಳು ಗೋಚರಿಸುತ್ತವೆಯೋ, ಯಾರಲ್ಲಿ ಪೂರ್ವಜರ ನಾಮಸ್ಮರಣೆಯು ಉತ್ಸಾಹದ ತಂತಿಯನ್ನು ಮೀಟಿ, ಕಾರ್ಯಾಸಕ್ತಿಯನ್ನು ಉಂಟುಮಾಡುತ್ತಿದೆಯೋ, ಅಂಥವರಿಗೆ ಇತಿಹಾಸದಿಂದ ಪ್ರಯೋಜನವುಂಟು. ಅವರು ನಿಜವಾಗಿಯೂ ಜೀವಂತರಾಗಿರುವರು. ಅವರ ಭಾಷೆಯೂ ಜೀವಂತವಾಗಿರುವುದು. ಅಂಥವರಿಗೆ ಕಾಲವಿದೆ; ಕರ್ತವ್ಯವಿದೆ. ಹಿರಿಯರ ಅಸಮಾಪ್ತ ಕಾರ್ಯಗಳನ್ನು ಸಮಾಪ್ತಿಗೊಳಿಸುವ ಸಾಮರ್ಥ್ಯವಿದೆ. ಕನ್ನಡದಲ್ಲಿ ಒಮ್ಮೆ ನಿರ್ಜೀವತೆಯೆ ಕಂಡುಬರುತಿದ್ದು, ಈಗ ಅಲ್ಲಲ್ಲಿ

ಚೇತರಣೆಯ ಲಕ್ಷಣಗಳು ಗೋಚರಿಸುವುರಿಂದದಲೂ, ಹಲವರು ತಮ್ಮ ನಾಡು, ತಮ್ಮ ಸಂಸ್ಕೃತಿ, ತಮ್ಮ ನುಡಿ ಎಂಬ ಅಭಿಮಾನದಿಂದ ಕೆಲಸಕ್ಕೆ ಕೈಹಚ್ಚುತ್ತಿರುವುದರಿಂದಲೂ, ಇಂತಹ ಸಂದರ್ಭದಲ್ಲಿ ಪೂರ್ವಸಂಸ್ಕೃತಿಯನ್ನರಿತು ಮುಂದಣ ಕಾರ್ಯಕ್ಕೆ ಉತ್ತೇಜನ ಹೊಂದಿಕೊಳ್ಳುವುದು ಅವಶ್ಯ. ಒಂದು ಭಾಷಾಪದ್ಧತಿಯು ನಾಮಾವಶಿಷ್ಟವಾಗಿ, ಇನ್ನೊಂದು ಮಾರ್ಗವು ಸಂಪೂರ್ಣವಾಗಿ ಬೇರೂರದಿರುವ ಈ ಸಂಧಿಕಾಲದಲ್ಲಿ ಕನ್ನಡಿಗರು ಜಾಗರಿತರಾಗಿರಬೇಕಾಗಿದೆ.

ಪ್ರಕೃತ ಸಂದರ್ಭದಲ್ಲಿ ಕರ್ಣಾಟಕ ಭಾಷೆಯ ವಿಷಯವಾಗಿ ಸುಖಮಯ ಸ್ವಪ್ನಗಳನ್ನು ಕಂಡು, ವಿವಿಧ ಭಾವನೆಗಳ ಎಳೆತಾಟದಿಂದ ಕಿಂಕರ್ತವ್ಯತಾ ಮೂಢರಾಗಿರುವ ವ್ಯಕ್ತಿಗಳನೇಕರಿರುವರು. ಕೆಲವರಿಗೆ ಹಳಗನ್ನಡದ ಅಡಿಗಟ್ಟು ಹೊಸಗನ್ನಡಕ್ಕೆ ಅವಶ್ಯವೆಂದು ಕಾಣುವುದಿಲ್ಲ. ನಮ್ಮ ಸಂಸ್ಕೃತಿಯ ವೈಶಿಷ್ಟ್ಯವೆ ನಮಗೆ ಮೇಲೆಂದು ಅವರು ಎಣಿಸುವುದಿಲ್ಲ. ಪಾಶ್ಚಾತ್ಯಭಾವನೆಯ ರೆಕ್ಕೆಯಿಂದ ನಮ್ಮ ಅಂಗಳದ ಆಕಾಶದಲ್ಲಿ ಹಾರಾಡಬೇಕೆಂಬು ಅವರ ಆಶೆ. ಇದಕ್ಕೆ ಸರಿ ವಿರುದ್ಧವಾಗಿ, ಸಂಪ್ರದಾಯವಾದಿಗಳು, ಭಾಷೆಗೆ ಬೆಳವಣಿಗೆ ಹೊಂಬುವ ಅಧಿಕಾರವಿಲ್ಲೆಂದು, ಸಾಧ್ಯವಾದರೆ ಕಾಲಚಕ್ರದ ಭ್ರಮಣವನ್ನೇ ನಿಲ್ಲಿಸಿಬಿಡುವ ಪ್ರಯತ್ನದಲ್ಲಿರುವರು. ಇವರ ಮಧ್ಯದಲ್ಲಿ ಕೆಲಮಂದಿ ಪರೋಪಜೀವಿಗಳು ಆ ಭಾಷೆಯಿಂದ ಸ್ವಲ್ಪ, ಈ ಭಾಷೆಯಿಂದ ಸ್ವಲ್ಪ ತೆಗೆದುಕೊಂಡು, ಇಂದಿನದೇ ನಮ್ಮ ದಿನವೆಂದು ಕಾಲಹರಣಮಾಡುತ್ತಿರುವರು. ಮೇಲೆ ಹೇಳಿದ ಎಲ್ಲಾ ಪದ್ಧತಿಯವರಿಂದಲೂ, ದೋಷದಷ್ಟೇ ಗುಣವೂ, ಗುಣದಷ್ಟೇ ದೋಷವೂ ಆಗುವುದಾದರೂ, ನಿಶ್ಚೇತನವಾಗಿದ್ದ ಭಾಷೆಯಲ್ಲಿ ಈಗ ಇಂತಹ ಚಟುವಟಿಕೆಗಳು ಕಾಣುತ್ತಿರುವುದು ಶುಭಲಕ್ಷಣವೆಂದೆ ಹೇಳಬೇಕು. ಇವರಲ್ಲಿ ಯಾರು ಪ್ರಾಬಲ್ಯ ಹೊಂದುವರೋ, ಅವರಿಂದಲೇ ಮುಂದಿನ ಕನ್ನಡ ಭಾಷೆಯು ರೂಪಿಸಲ್ಪಡುವುದಾದ ಕಾರಣ, ಯಾರು ಹೇಯ ಮಾರ್ಗವನ್ನವಲಂಬಿಸುವರೋ ಅವರನ್ನು ಟೀಕೆಯ ಕಡಿವಾಣದಿಂದ ಹಿಡಿದು ನಿಲ್ಲಿಸುವುದೂ, ಯಾರು ಉಪಾದೇಯ ಪಥದಲ್ಲಿ ತೊಳಲುತ್ತಿರುವರೋ, ಅವರನ್ನು ಅವರ ರಾಜ್ಯದಲ್ಲೇ ಬಿಟ್ಟುಬಿಡುವುದೂ ಅವಶ್ಯವಾಗಿದೆ. ಇದಕ್ಕೆ ಯೋಗ್ಯವಾದ ವಿಮರ್ಶಕ ಬುದ್ಧಿಯು ಕನ್ನಡಿಗರಲ್ಲಿ ಹುಟ್ಟಬೇಕು. ಕನ್ನಡಿಗರಲ್ಲಿ ಈಗ ಕಾಣುವ ಎಲ್ಲಾ ಅವ್ಯವಸ್ಥೆಗೂ ಸಂಸ್ಕೃತಿಯ ಅಭಾವವೇ ಮುಖ್ಯ ಕಾರಣವೆಂದೂ, ಕನ್ನಡಿಗರ ಪ್ರಯತ್ನವೆಲ್ಲಾ ಅದರ ಸಂಪಾದನೆಯ ಕಡೆಗೆ ಹರಿದುದಾದರೆ, ಭಾಷೋದ್ಧಾರವಾಗುವುದೆಂದೂ ತೋರಿಸುವುದೇ ಈ ಲೇಖನದ ಉದ್ದೇಶವಾಗಿದೆ.

ವಿಮರ್ಶಕನಿಗೆ ಈಗಿನ ಹೊಸಗನ್ನಡದಲ್ಲಿ ಮೂರು ವಿಧವಾದ ಅಭಾವಗಳು ಸುಸ್ಪಷ್ಟವಾಗಿ ಗೋಚರಿಸುವುವು ಅವಾವುವೆಂದರೆ ಹೊಸ ಮಾರ್ಗದವರ ಲೇಖನಗಳಲ್ಲಿರುವ ಪದ ಮೈತ್ರಿಯ ಅಥವಾ ಶಯ್ಯೆಯ ಅಭಾವ, ಶಬ್ದಸಾಮರ್ಥ್ಯದ ಅಭಾವ. ವಿಷಯಕ್ಕೆ ಪ್ರಾಧಾನ್ಯಕೊಡದೆ ಹಳೆಶೈಲಿಯಲ್ಲೆ ಬರೆವವರ ಶೈಲಿಯಲ್ಲಿರುವ ಸ್ವಾಭಾವಿಕತೆಯ ಅಭಾವ. ಎರಡು ಮಾರ್ಗದವರ ಕೃತಿಗಳಲ್ಲಿಯೂ ಇರುವ ಅರ್ಥಗೌರವ, ಶಬ್ದಸರಳತೆಗಳ ಅಭಾವ. ಈ ಎಲ್ಲಾ ದೋಷಗಳು ಹೋಗಿ, ಕನ್ನಡವು, ‘ಎಂತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲ್ಗೊಳ್ಳ’ ಬೇಕಾದರೆ, ಹಾಗೆ ಮಾಡುವ ಕರ್ತವ್ಯಭಾರವು ಆಧುನಿಕ ಲೇಖಕವರ್ಗವನ್ನು ಅವಲಂಬಿಸಿಕೊಂಡಿರುವುದು. ಹಳೆಗನ್ನಡದಲ್ಲಿ ಅಲ್ಪವಾಗಿದ್ದ ದೋಷಗಳು ಹೊಸಗನ್ನಡದಲ್ಲಿ ಪ್ರಾಬಲ್ಯವನ್ನು ವಹಿಸಬೇಕಾದರೆ, ಕನ್ನಡಿಗರು ತಮ್ಮ ಭಾಷಾ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳುವುದರಲ್ಲಿ ಮಂದೋತ್ಸಾಹವನ್ನು ತೋರಿಸಿದುದೇ ಕಾರಣವೆನ್ನಬೇಕು. ಮನಸ್ಸಿಗೆ ನಿಜವಾದ ಕನ್ನಡದ ಸಂಸ್ಕಾರವನ್ನು ಕೊಡುತಿದ್ದರೆ ಕರ್ಣಾಟಕ ಭಾಷೆಗೆ ಇಂದಿನ ದುರವಸ್ಥೆಯು ಪ್ರಾಪ್ತವಾಗುತ್ತಿರಲಿಲ್ಲ.

ಮೇಲಿನ ಮಾತಿನ ಯುಕ್ತತೆಯ ವಿಷಯದಲ್ಲಿ ಅನೇಕರು ಆಶಂಕಿಸಬಹುದು. ಆದರೆ ಸಂಸ್ಕೃತಿಯ ಅಭಿಮಾನವಿಲ್ಲದಿರುವುದೇ ಆಧುನಿಕರ ಲೇಖನಗಳಲ್ಲಿ ಕಂಡುಬರುವ ದೋಷಗಳಿಗೆ ಕಾರಣಭೂತವೆಂದು ತಿಳಿಯುವುದಕ್ಕೆ ಹೆಚ್ಚಿನ ಕಷ್ಟವೇನೂ ಇಲ್ಲ. ಇದಕ್ಕೆ ಕಾವ್ಯದ ಉದ್ಗಮಸ್ಥಾನವು ಹೃದಯವೊ ? ಮೆದುಳೋ? ಎಂದು ಮೊದಲು ವಿಚಾರಿಸಬೇಕಾಗಿದೆ ಮೆದುಳೆ ಕವಿತೆಯ ಬಸರಿ ತುಳುಕಾಡುವ ಸ್ಥಳವೆಂಬರೆ, ಮೆದುಳಿನ ಶಕ್ತಿಯಿಂದ ಮಾಡಿದ ಎಲ್ಲಾ ಕಾರ್ಯಗಳೂ ಕವಿತೆಯೆಂದು ಕರೆಯಲ್ಪಡುವುವು; ಎಂದರೆ ಗಂಟೆಗೆ ಮುನ್ನೂರು ಮೈಲು ಹಾರುವ ಅತ್ಯಾಶ್ಚರ್ಯಕರವಾದ ವಾಯುವಿಮಾನವನ್ನು ನಿರ್ಮಿಸಿದವನಷ್ಟು ದೊಡ್ಡ ಕವಿಯು ಭೂಲೋಕದಲ್ಲಿ ಇನ್ನೊಬ್ಬನಿಲ್ಲವೆಂದು ಹೇಳಬೇಕಾಗುವುದು. ಆದರೆ ಅಂತಹವನನ್ನು ಕವಿಯೆಂಬ ಹೆಸರಿನಿಂದ ಯಾರೂ ಮನ್ನಿಸುವವರಿಲ್ಲ. ಆದುದರಿಂದ ಕಾವ್ಯವೆಂದರೆ ಬುದ್ಧಿಶಕ್ತಿಯ ಆವಿರ್ಭಾವಕ್ಕಿಂತ ಭಿನ್ನವಾಗಿರುವುದೆಂದು ವೇದ್ಯವಾಗದಿರದು. ವ್ಯಾಪಕಾರ್ಥದಲ್ಲಿ ಹೃದಯವೆಂಬ ವೀಣೆಯನ್ನು ಭಾವನೆಯ ವಾಯುತರಂಗಗಳು ಬಂದು ಅಲ್ಲಾಡಿಸುವಾಗ ಆಗುವ ನಾದವೆ ಕವಿತೆ. ಅದಕ್ಕೆ ಕೊಡುವ ಅಕ್ಷರ ರೂಪವೇ ಕಾವ್ಯವೆಂದು ಹೇಳಬೇಕು ಅದು ಗದ್ಯವಿರಲಿ, ಪದ್ಯವಿರಲಿ,ಬರೇ ಒಂದು ಪ್ರಬಂಧವಿರಲಿ, ಅದಕ್ಕೆ ಕಾವ್ಯತ್ವವು ಇದ್ದೇ ಇದೆ. ಇದೇ ಲಕ್ಷಣವನ್ನೇ ಪೂರ್ವದ ಲಾಕ್ಷಣಿಕರು ಸ್ವೀಕರಿಸಿದಂತೆ ತೋರುತ್ತದೆ. ಆದರೂ ಲಾಕ್ಷಣಿಕರಿಗೆ ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆಯೆಂದು ಎಣಿಸುವ ಅವರು ಯಾವ ಮಹಾಕವಿಗಳ ಕಾವ್ಯಗಳನ್ನು ಪ್ರಮಾಣತ್ವದಿಂದ ಅಂಗೀಕರಿಸುವರೋ ಆ ಕವಿಗಳ ಗ್ರಂಥಗಳು ರಸಭಾವಗಳಿಂದ ನಿಬಿಡವಾಗಿದ್ದು, ಸಹೃದಯರ ಹೃದಯಕ್ಕೆ ಆಹ್ಲಾದನವನ್ನುಂಟುಮಾಡುತ್ತಿವೆ. ಕಾಲಿದಾಸ, ಭವಭೂತಿ ಮೊದಲಾದ ಕವಿಪ್ರವರರು, ಬುದ್ಧಿಶಕ್ತಿಯನ್ನು ಮೂದಲಿಸುವ ತಮ್ಮ ಶಬ್ದಾಲಂಕಾರಗಳ ಬೆಡಗಿನಿಂದಾಗಲಿ, ನಾನಾ ವಿಧವಾದ ಬಂಧಗಳ ಬಂಧುರತೆಯಿಂದಲಾಗಲಿ, ಮಹಾಕವಿಗಳೆಂಬ ಗೌರವಕ್ಕೆ ಪಾತ್ರರಾದುದಲ್ಲ. ಅವರಲ್ಲಿ ಒಬ್ಬನು ಶೃಂಗಾರ ಪಕ್ಷ

ಪಾತಿಯೆಂಬ ಆರೋಪಣೆಗೆ ಪಾತ್ರನಾಗಿದ್ದಾನೆ. ಇನ್ನೊಬ್ಬನು "ಏಕೋರಸಃ ಕರುಣ ಏವ ನಿಮಿತ್ತ ಭೇದಾ। ದ್ಭಿನ್ನಃ ಪೃಥಕ್ ಪೃಥಗಿವಾಶ್ರಯತೆ। ವಿವರ್ತಾನ್"—ಎಂದು ಹೇಳಿ ಕರುಣ ರಸವೇ ನವರಸಗಳ ಆದಿಯೆಂದೂ, ಅದೇ ಕಾವ್ಯದ ಆತ್ಮವೆಂದೂ, ಆಚರಣೆಯಿಂದ ತೋರಿಸಿದ್ದಾನೆ ಲಕ್ಷಣಕರ್ತೃಗಳು ಒಂದು ವೇಳೆ ಗದೆ ಹಿಡಿದು ಬೆಂಬತ್ತಿ ಬಂದರೂ ಚಿಂತೆ ಇಲ್ಲ ಕಾಲಿದಾಸ ಭವಭೂತ್ಯಾದಿಗಳು ಯಾವುದನ್ನು ಕಾವ್ಯವೆಂದು ತೋರಿಸಿದರೋ, ಅದನ್ನು ಹೌದೆಂದು ಹೇಳುವುದಕ್ಕೆ ಅಡ್ಡಿಯೇನೂ ಇಲ್ಲ. ಲಾಕ್ಷಣಿಕರು ವಾಸಿಸುವ ಸ್ವರ್ಗಕ್ಕಿಂತಲೂ ಕಾಲಿದಾಸಾದಿಗಳು ವಾಸಿಸುವ ನರಕವೇ ಲೇಸು. ಅವರ ಕವಿತೆಯಿಂದ ನಮ್ಮ ಹೃದಯಗಳು ಮುಗ್ಧವಾಗುವುದರಿಂದ, ಲಾಕ್ಷಣಿಕರ ಗದಾಪ್ರಹಾರದ ನೋವು ನಮಗೆ ನಾಟಲಾರದು. ಕವಿತೆಗೆ ಹೃದಯವೇ ಜನ್ಮಭೂಮಿಯೆನ್ನುವುದಕ್ಕೆ ಇದಕ್ಕಿಂತಲೂ ಹೆಚ್ಚಿನ ಕಾರಣಗಳಾವುವೂ ಬೇಕಾಗಿಲ್ಲ. ಆದುದರಿಂದ ಕವಿತಾ ರಸಾಸ್ವಾದನ ಕ್ರಮವನ್ನು ಹೃದಯಕ್ಕೆ ಕಲಿಸುವುದು ಪ್ರಥಮ ಕರ್ತವ್ಯವು. ಅಥವಾ ಹೃದಯಕ್ಕೆ ಆಸ್ವಾದನ ವಿಧಾನವು ಅಶಿಕ್ಷಿತವಾಗಿಯೇ ತಿಳಿಯುವುದರಿಂದ, ಹೃದಯಕ್ಕೆ ಆಗಾಗ ಕವಿತೆಯ ಸವಿಯನ್ನು ಸವಿಯುವ ಸಂದರ್ಭವನ್ನು ಒದಗಿಸಿ ಕೊಡುವುದು ಅವಶ್ಯವೆಂದು ಹೇಳಿದರೆ ಸರಿಯಾಗುವುದು. ಸ್ಥಾಯಿಭಾವ, ವ್ಯಭಿಚಾರಿ ಭಾವಾದಿಗಳು ಪದೇ ಪದೇ ಹುಟ್ಟಿ, ಅನುಭಾವಗಳಿಂದ ಪದೇ ಪದೇ ಪ ಕಟವಾಗುವಾಗ, ಮನಸ್ಸಿನಲ್ಲಿ ಅಥವಾ ಸತ್ವದಲ್ಲಾಗುವ ಪಾಕಕ್ಕೆ ಸಂಸ್ಕೃತಿಯೆಂದು ಹೆಸರು. ಇಂತಹ ಸಂಸ್ಕಾರವನ್ನು ಹೊಂದಿದ ಹೃದಯದಿಂದ ಕವಿತೆಯು ತಾನಾಗಿ ಹೊರಡುವುದು. ತನಗೆ ಬೇಕಾದ ನುಡಿತೊಡವನ್ನು ಸ್ವೀಕರಿಸುವುದು ಅಂತಹ ಕವಿತೆಯಲ್ಲಿ ನೈಸರ್ಗಿಕ ಸೌಂದರ್ಯವೆಲ್ಲಾ ಅಡಗಿಹೋಗುವುದರಿಂದ, ಅದರ ಬಾಹ್ಯರೂಪವಾದ ಭಾಷೆಯಲ್ಲಾದರೂ ಸಂಸ್ಕಾರದ ಅಚ್ಚು ಒತ್ತಿರುವುದು. ಆಗ ಕವಿತೆಯಲ್ಲಿಯೂ ಭಾಷೆಯಲ್ಲಿಯೂ ಯಾವ ಅಭಾವಗಳೂ ಇರಲಾರವು.



ಹಾಗಾದರೆ ಈಗ ಕನ್ನಡದಲ್ಲಿ ಮೇಲೆ ಕಾಣಿಸಿದ ದೋಷಗಳಿರುವುದಕ್ಕೆ ಕಾರಣವೇನೆಂದು ಪ್ರಶ್ನಿಸಬಹುದು. ದೋಷಗಳಿಗೂ ಕಾರಣವುಂಟು. ಲೇಖಕರು ಹೃದಯ ವ್ಯವಸಾಯಕ್ಕೆ ಹೆಚ್ಚು ಗಮನಕೊಡದಿರುವುದೇ ಎಲ್ಲದಕ್ಕೂ ಹೇತು ಕವಿತೆಯು ಸರ್ವಾಂಗಸುಂದರವಾಗದಿರುವುದೇ ಇದರ ಪರಿಣಾಮ. ಅವರಿಗೆ ರಸಾಸ್ವಾದನವು ಅರಿಯದಿರುವುದೇ ಇದಕ್ಕೆ ಮೂಲ ಆಧುನಿಕ ಕನ್ನಡ ಕವಿಗಳು ಬರೆಯುವ ಅಕ್ಷರವೂ ಭಾಷೆಯೂ ಕನ್ನಡವಾಗಿದ್ದರೂ, ಅವರ ಹೃದಯವು ಮಾತ್ರ ಕನ್ನಡವಾಗದಿರುವುದೇ ಎಲ್ಲಾ ದೋಷಗಳ ರಹಸ್ಯ. ಹೀಗೆ ಹೇಳಿದರೆ ಆಧುನಿಕರನ್ನೆಲ್ಲಾ ನಿರ್ದಾಕ್ಷಿಣ್ಯವಾಗಿ ಖಂಡಿಸಿದ ಆರೋಪಣೆಯನ್ನು ನನ್ನ ಮೇಲೆ ಯಾರಾದರೂ ಹೊರಿಸಬಹುದು ಆದರೆ ನಾನು ಅವರ ಉದ್ದೇಶವನ್ನು ಖಂಡಿಸುವುದಿಲ್ಲ. ಸಾಧನ ಕ್ರಮವನ್ನು ಖಂಡಿಸುತ್ತೇನೆ. ಅನ್ಯಭಾಷೆಗಳಲ್ಲಿರುವ ಸ್ವಾರಸ್ಯವನ್ನೂ ಬೆಡಗನ್ನೂ ಬಿನ್ನಾಣವನ್ನೂ ನಾವು ನಮ್ಮ ಕನ್ನಡ ನುಡಿಗೆ ತಂದುಕೊಡಬೇಕೆಂಬುದೇನೋ ನಿಜ ಆದರೆ ಆಂಗ್ಲ ಮಹಿಳೆಗೆ ಶೋಭಾವಹವಾದ 'ಹೇಟ್ ಬೂಟು'ಗಳನ್ನು ನಮ್ಮ ಸಹೋದರಿಯರಿಗೆ ತೊಡಿಸುವುದು ಬೆಡಗಿನ ಲಕ್ಷಣವೆಂದು ಹೇಳುವ ಮಾತಿನಲ್ಲಿ ನನಗೆ ವಿಶ್ವಾಸವಿಲ್ಲ. ಅದು ಸುಧಾರಣೆಯ ಚಿಹ್ನೆಯೆಂದು ನಾನು ಒಪ್ಪಲಾರೆನು. ಕನ್ನಡದಲ್ಲಾಗುವ ಇದರಂತಹ ಪ್ರಯತ್ನಗಳಿಗೆ ಒಂದೆರಡು ಉದಾಹರಣೆಗಳನ್ನು ತೆಗೆದುಕೊಳ್ಳುವ: - ಇಂಗ್ರಜಿಯಲ್ಲಿ ನಸುಲಜ್ಜೆಯಿಂದ ಕದಪು ಕೆಂಪೇರುವುದಕ್ಕೆ 'blush' ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಆ ಅನುಭವವನ್ನು ಕನ್ನಡಕ್ಕೆ ಪರಿವರ್ತಿಸುವಾಗ 'ಕೆನ್ನೆಯಲ್ಲಿ ಕೆಂಪನ್ನು ಸುಳಿಸು'—ಎಂದು ಹೇಳುವುದು ಉಚಿತವಲ್ಲ. ಒಂದು ವೇಳೆ ಉಚಿತವಲ್ಲದಿದ್ದರೂ ಸ್ವೀಕಾರ್ಯವೆನ್ನುವ ಇಂಗ್ರಜಿಯನ್ನರಿಯದ ಕನ್ನಡಿಗರಿಗೆ ಅದು 'ಕನ್ನಡದ ಇಂಗ್ಲೀಷ್' ಆಗುವುದು. ಇಂತಹ ಪ್ರಯೋಗಗಳು ಕನ್ನಡ ಭಾಷೆಗೆ ಯಾವ ಸೌಂದರ್ಯವನ್ನೂ ಉಂಟುಮಾಡಲಾರವು ಮಾತ್ರವಲ್ಲದೆ ಒಂದೇ ತಾಯಿಯ ಕರುಳಿಂದ ಸುಟ್ಟಿಬಂದ ಕರ್ಣಾಟಕ ಭ್ರಾತೃಗಳಲ್ಲಿ, ಇಂಗ್ಲೀಷನ್ನು ಅರಿಯುವವರು, ಅರಿಯದವರು, ಎಂಬ ಭೇದಗಳನ್ನುಂಟು ಮಾಡುವುವು. ಅದರಂತೆ, 'To take to one's heels' ಎಂಬ ಆಂಗ್ಲಪ್ರಯೋಗಕ್ಕೆ ಪ್ರತಿಯಾಗಿ 'ಕಾಲೆತ್ತು' ಎಂಬ ಪದವನ್ನು ಪ್ರಯೋಗಿಸುವುದೂ, 'ಭಯವಿಲ್ಲ' ಎಂಬರ್ಥದಲ್ಲಿ ಬರುವ 'Where the head is held high" ಎಂಬುದರ ಬದಲಾಗಿ, ಎಲ್ಲಿ ತಲೆಯೆತ್ತಿಹುದೊ ಎಂದು ಹೇಳುವುದೂ ಸಮ್ಮತವಲ್ಲ. ಅವುಗಳಲ್ಲಿ ಶಬ್ದ ಮೈತ್ರಿಯಿಲ್ಲ. ಇಂಗ್ರಜಿಯ ಅಭಿಪ್ರಾಯವನ್ನು ಕೊಡುವ ಅರ್ಥಸಾಮರ್ಥ್ಯವಿಲ್ಲ. ಇಂಗ್ರಜಿಯಲ್ಲಿ ಆ ವಾಕ್ಪ್ರಯೋಗಗಳಿಗಿರುವ ಬೆಡಗು ಕನ್ನಡಕ್ಕೆ ಬರುವುದಿಲ್ಲವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಆದುದರಿಂದ ಅಂತಹ ಭಾವಗಳನ್ನು ಪರಿವರ್ತಿಸುವಾಗ ಅವಕ್ಕೆ ನಮ್ಮ ದೇಶಿಯ ರೂಪಗಳನ್ನು ಕೊಡುವುದಕ್ಕೆ ಲೇಖಕರು ಯತ್ನಿಸಬೇಕು. ಪಾಶ್ಚಿಮಾತ್ಯರ ಮತ್ತು ಪೌರ್ವಾತ್ಯರ ಜೀವನಗಳಲ್ಲಿ. ಪದ್ಧತಿಗಳಲ್ಲಿ, ಕಟ್ಟಳೆಗಳಲ್ಲಿ ಸ್ವಭಾವದಲ್ಲಿ ಅಜಗಜಾಂತರ ವ್ಯತ್ಯಾಸವಿದೆಯೆಂಬುದನ್ನು ಮರೆಯಬಾರದು. ಅಂತಹ ಭಿನ್ನಪರಿಸ್ಥಿತಿಗಳು ಬೇರೆ ಬೇರೆ ದೇಶಗಳಲ್ಲಿರುವುದರಿಂದಲೇ 'ಸರ್ವಭಾಷಾಮಯಿಭಾಷೆ'ಯು ವಿವಿಧ ವೈಶಿಷ್ಟ್ಯಗಳನ್ನು ಹೊಂದಿತೆಂಬುದನ್ನು ಅಲಕ್ಷಿಸಬಾರದು. ಅನ್ಯಭಾಷೆಯ ಭಾವನೆಗಳನ್ನು ನಮ್ಮದಕ್ಕೆ ತರುವಾಗ ಅವುಗಳನ್ನು ನಮ್ಮವನ್ನಾಗಿ ಮಾಡಿಕೊಳ್ಳುವುದು ಆದ್ಯಕರ್ತವ್ಯವಾಗಿದೆ ಪೌರ್ವಾತ್ಯ ಮನಸ್ಸು, ಪಾಶ್ಚಿಮಾತ್ಯ ಭಾವನೆಯಲ್ಲಿ ತಲ್ಲೀನವಾಗಿ, ಅದಕ್ಕೆ ತನ್ನಲ್ಲಿ ಎಡೆಗೊಡುವಷ್ಟು ಆ ಮನಸ್ಸು ವಿಸ್ತಾರವಾಗಿಲ್ಲವಾದರೆ, ತನ್ನದೇ ತನಗೆ ಸಾಕೆಂದು ತಟಸ್ಥವಾಗಿಕೊಳ್ಳುವುದರಲ್ಲಿ ಅವಮರ್ಯಾದೆಯು ಸ್ವಲ್ಪವಾದರೂ ಇಲ್ಲ.

ಕಾವ್ಯದ ಬಾಹ್ಯಸ್ವರೂಪವನ್ನು ನೋಡುವಾಗ ಹಳೆಯ ಸಂಪ್ರದಾಯದ ಕಾವ್ಯಗಳಲ್ಲಿಯೂ ದೋಷಗಳು ಕಾಣುವುವು. ಪುರಾತನ ಮಾರ್ಗಾನುಗಾಮಿಗಳು ನಮ್ಮ ಪೂರ್ವಿಕರ ಅಂಥಾನುಸರಣೆಯನ್ನು ಮಾಡುತ್ತಿರುವರಲ್ಲದೆ, ಕೆಲವು ಶತಮಾನಗಳ ಹಿಂದೆ ಪ್ರಯೋಗದಲ್ಲಿದ್ದು, ಆ ಕಾಲಕ್ಕೆ ಉಚಿತವಾಗಿದ್ದ ಪಾಕ್ತ್ರಚಾರಾದಿಗಳನ್ನು ಈಗಲೂ ಉಪಯೋಗಿಸುತ್ತಿರುವರು ಆ ಕಾಲದಲ್ಲಿ ಮನ್ನಣೆ ಪಡೆದಿದ್ದ ವ್ಯಾಕರಣ ನಿಯಮಗಳಿಂದ ಈಗಲೂ ಹೊಸಗನ್ನಡದ ಭಾಷಾಪಕ್ಷಿಯ ರೆಕ್ಕೆಗಳನ್ನು ಕಟ್ಟುವುದಕ್ಕೆ ಯತ್ನಿಸುವರು ಅವರ ಕವಿತೆಗಳಲ್ಲಿ ಹೊಸ ಭಾವಗಳಿಗೆ ಅಭಾವವಾದುದರಿಂದ ನವೀನ ಸೌಂದರ್ಯವೇನೂ ಇಲ್ಲ. ಹೀಗಾಗಿ ಅಂತಹ ಕವಿಗಳು ಕನ್ನಡಕ್ಕೆ ಮಾಡುವ ಪ್ರಯೋಜನಗಳನ್ನು ತುಲನೆಮಾಡಿ ಬೆಲೆಕಾಕುವುದಿದ್ದರೆ, ಕನ್ನಡದ ಶಬ್ದಭಂಡಾರವನ್ನು ಹೆಚ್ಚಿಸಿದ ಗೌರವ ಅವರಿಗೆ ಸಿಕ್ಕುವುದು. ಇನ್ನು ಮುಂದೆ ಕರ್ನಾಟಕ ಭಾಷೆಯು ಅನ್ಯಭಾಷೆಗಳ ಅನುಕಾರವಾಗಿ ಪರಿಣಮಿಸಿದರೆ, ಅಥವಾ ಅದರಲ್ಲಿ ಬೆಳೆವಣಿಗೆಯಿಲ್ಲದ ತಾಟಸ್ಥ್ಯ ಉಂಟಾದರೆ, ಅಂತಹ ದುಷ್ಪರಿಣಾಮಕ್ಕೆ ಸಂಸ್ಕೃತಿಗೆ ಗಮನಕೊಡದಿರುವ ಉಭಯ ಮಾರ್ಗಗಾಮಿಗಳನ್ನೂ ಕಾರಣಭೂತರೆಂದು ಹೇಳಬೇಕು. ಏಕೆಂದರೆ ಆಧುನಿಕರು ಭಾವದ ರೆಕ್ಕೆಯು ಸಿಕ್ಕಿದೊಡನೆ, ಆಕಾಶದಲ್ಲಿ ಒಂದೇ ಸವನೆ ಹಾರಾಡತೊಡಗಿ, ನಮ್ಮ ಹುಟ್ಟುನಾಡಾವುದು? ಎಲ್ಲಿಂದ ಬಂದೆವು? ಎಲ್ಲಿಗೆ ಹೋಗುವೆವು? ಎಂಬುದನ್ನು ಮರೆತುಬಿಡುವರು. ಚೈರಂತನ ಪದ್ಧತಿಪ್ರಿಯರು ಕನ್ನಡ ಭಾಷೆಗೆ ಬೆಳೆವಣಿಗೆಯು ಅವಶ್ಯವಿಲ್ಲೆಂದು ಆಚರಣೆಯಿಂದ ತೋರಿಸುವರು. ನಮ್ಮ ಕನ್ನಡ ಭಾಷೆಯ ಬೆಳವಣಿಗೆಯು ಹೇಗಾಯಿತು? ಅದರ ವೈಶಿಷ್ಟ್ಯವನ್ನೂ ಸಂಸ್ಕೃತಿಯನ್ನೂ ಕಾಪಾಡಿಕೊಳ್ಳುವುದಕ್ಕೆ ಆಯಾ ಕಾಲದ ವೈಯಾಕರಣರೂ ಲೇಖಕರೂ ಹೇಗೆ ಪ್ರಯತ್ನಗಳನ್ನು ಮಾಡಿದರು? ಅವುಗಳನ್ನು ಎಷ್ಟರಮಟ್ಟಿಗೆ ನಾವು ಅನುಸರಿಸಬೇಕು? ಎಂಬುದನ್ನು ವಿಚಾರಿಸದಿರುವುದೇ ಕನ್ನಡದಲ್ಲಿ ಈಗ ಕಾಣುವ ಕ್ಷೋಭೆಗೆ ಕಾರಣವೆನ್ನಬಹುದು.

ಯಾವ ಭಾಷೆಯೇ ಇರಲಿ; ಅದರ ಪೂರ್ವೇತಿಹಾಸವನ್ನು ನೋಡಿದರೆ ಅದು ಪರಿಣತಾವಸ್ಥೆಗೆ ಬರುವ ವರೆಗೆ, ಎಂದರೆ ವೈಯಾಕರಣರು ಹುಟ್ಟಿ ಶಾಸನಗಳನ್ನು ಮಾಡುವ ವರೆಗೆ, ಅದು ಸ್ವತಂತ್ರವಾಗಿ, ಸ್ವಚ್ಛಂದವಾಗಿ, ಬಳೆಯುತ್ತಿತ್ತೆಂದು ಹೇಳಬಹುದು. ವೈಯಾಕರಣ ಜನ್ಮವಾದ ಮೇಲೂ, ಭಾಷೆಯು ಬೆಳೆವಣಿಗೆಯನ್ನು ಹೊಂದದೆ ಇದ್ದಿಲ್ಲವೆಂಬುದೆನೋ ನಿಜ. ಆದರೆ ವೈಯಾಕರಣರು ಸ್ವತಂತ್ರವಾಗಿ ಗ್ರಂಥರಚನೆಯನ್ನು ಮಾಡಿದವರ ಪ್ರಯೋಗಗಳನ್ನು ಆಯ್ದುಕೊಂಡು, ಅವರ ಹೆಸರನ್ನು ಹೇಳಿ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡರು ಇದರಿಂದ ಒಮ್ಮೆ ಭಾಷಾಮರ್ಯಾದೆಯೆಂದು ಸ್ವೀಕೃತವಾದ ಪದ್ಧತಿಯು ರೂಪಾಂತರವನ್ನು ಹೊಂದುವುದಕ್ಕೆ ಅನೇಕ ಆತಂಕಗಳು ಎದುರೊಡ್ಡಿದುವು. ಯಾವ ಮಹಾಕವಿಗಳ ಗ್ರಂಥಗಳು ಪ್ರಮಾಣವೆಂದು ಅಂಗೀಕರಿಸಲ್ಪಟ್ಟಿದ್ದುವೋ ಅವರಿಂದ ನಿರ್ಮಿಸಲ್ಪಟ್ಟಿದ್ದ ವಾಙ್ಮಯಕ್ಕೆ ಸ್ವಾಭಾವಿಕವಾಗಿದ್ದ ಬೆಳೆವಣಿಗೆ ಇತ್ತು. ವ್ಯಾಕರಣ ನಿರ್ಮಾಣವಾದ ಮೇಲೆ ಅದೇ ವಾಙ್ಮಯದ ಬೆಳೆವಣಿಗೆಯು ಕೃತ್ರಿಮವಾಯಿತೆನ್ನಲು ಅಡ್ಡಿಯಿಲ್ಲ ಹೀಗೆ ಹೇಳಲು ಪ್ರಬಲವಾದ ಕಾರಣವಿದೆ. ಮನುಷ್ಯನ ಮನಸ್ಸೆಂಬುದು ನಿಮಿಷ ನಿಮಿಷದಲ್ಲಿಯೂ ವಿಕಾಸ ಹೊಂದುವ, ವಿಶಾಲವಾಗುವ ಸತ್ವವಾದುದರಿಂದ, ಒಂದು ನಿಮಿಷದಲ್ಲಿರುವ ಅದರ ಸ್ಥಿತಿಗೂ, ಅಪರಕ್ಷಣದಲ್ಲಿರುವ ಅದರ ಸ್ವಭಾವಕ್ಕೂ ವ್ಯತ್ಯಾಸವು ಇದ್ದೇ ಇರುವುದು. ಹೀಗೆ ಕ್ಷಣಕ್ಷಣಕ್ಕೂ ಪರಿವರ್ತನೆ ಹೊಂದುವ ಸತ್ವದಲ್ಲುಂಟಾಗುವ ರಸಗಳೂ ಭಾವಗಳೂ ಆಗಾಗ ಮಾರ್ಪಡುತ್ತಾ ಹೋಗುತ್ತವೆ. ವ್ಯತ್ಯಸ್ತವಾದ ಭಾವಗಳ ಗುಂಫನವನ್ನು ಮಾಡಿ, ಅವುಗಳನ್ನು ಹೊರಗೆಡವುದಕ್ಕೆ ಹೊಸ ಹೊಸ ಶಬ್ದಸಾಮಗ್ರಿಗಳು ಬೇಕಾಗುತ್ತವೆ. ಹೊಸ ಶಬ್ದಗಳ ಉತ್ಪತ್ತಿಯಿಂದ ಹೊಸ ಭಾಷಾಮರ್ಯಾದೆಯು ಉಂಟಾಗುತ್ತದೆ ಭಾಷೆಯಲ್ಲಾಗುವ ಈ ರೀತಿಯ ಮಾರ್ಪಾಟಿಕ್ಕೆ ಅನುಸಾರವಾಗಿ ವ್ಯಾಕರಣವು ಏರ್ಪಡುವುದಿದ್ದರೆ, ನಿಮಿಷ ನಿಮಿಷಕ್ಕೂ ಬೇರೆ ಬೇರೆ ವ್ಯಾಕರಣಗಳು ಬೇಕಾಗುವುವು. ಹಾಗಾದರೆ, ವ್ಯಾಕರಣದಿಂದ ಭಾಷೆಯು ಕೃತ್ರಿಮತೆಯನ್ನು ಹೊಂದುವ ಸಂಭವವಿಲ್ಲ. ವ್ಯಾಕರಣದಿಂದ ಪ್ರಯೋಜನವೂ ಇಲ್ಲ. ಆದರೆ ಈಗ ಹೆಚ್ಚಾಗಿ ಎಲ್ಲಾ ಭಾಷೆಗಳಲ್ಲಿಯೂ ಉಪಲಬ್ಧವಾಗುವ ವ್ಯಾಕರಣಗಳು ಕೆಲವು ಶತಮಾನಗಳ ಪೂರ್ವದಿಂದಲೆ ನೆಲೆನಿಂತು ತಮ್ಮ ಆಧಿಪತ್ಯವನ್ನು ನಡಿಸಿದುದರಿಂದ, ಭಾಷೆಯ ಬೆಳೆವಣಿಗೆಯು ಬಹಳ ಮಟ್ಟಿಗೆ ಅವುಗಳಿಂದ ನಿರುದ್ಧವಾಗಿದೆ ಆದರೆ ವ್ಯಾಕರಣವಿಲ್ಲದಿದ್ದರೆ ಭಾಷೆಯ ಸುರಕ್ಷಿತತ್ವಕ್ಕೆ ಕೆಲಮಟ್ಟಿಗೆ ಬಾಧೆಯುಂಟಾಗುವುದೆಂದು ಮರೆಯಬಾರದು ನಿಜವಾಗಿಯೂ ಸುಸಂಸ್ಕೃತನಾದ ಮನುಷ್ಯನಿಗೆ, ಎಂದರೆ ಯಾವಾತನ ಮನಸ್ಸು ಸ್ವಾಭಾವಿಕವಾಗಿ ಗುಣದೋಷಗಳನ್ನು ತಿಳಿಯುವುದರಲ್ಲಿ ಶಿಕ್ಷಿತವಾಗಿದೆಯೊ, ಅಂಥವನಿಗೆ ವ್ಯಾಕರಣದಿಂದ ಪ್ರಯೋಜನವಿಲ್ಲ. ಇದಕ್ಕೆ ಚಿಕ್ಕದಾದೊಂದು ಉದಾಹರಣೆಯನ್ನಿಲ್ಲಿ ಕೊಡಬಹುದು. ಲಕ್ಷ್ಮೀಶನು ಜೈಮಿನಿಭಾರತದಲ್ಲಿ, ಒಂದು ಸರೋವರ ವರ್ಣನೆಯನ್ನು ಮಾಡುವಾಗ, ಅದು, ಎಂದರೆ ಸರೋವರವು ಸಾಂಸಾರಿಕನಂತೆ ಅಳಿಯ ವರ್ಗವನ್ನು ಉಪಚರಿಸುತಿತ್ತು ಎಂದು ಹೇಳುತ್ತಾನೆ ಅಳಿಯ ವರ್ಗ-ಎಂಬುದು ಶ್ಲಿಷ್ಟಪದವಾಗಿದ್ದು, ಸರೋವರದ ಪರವಾಗಿ ಅರ್ಥಮಾಡುವಾಗ, ತುಂಬಿಗಳ ಸಮೂಹ, ಎಂಬ ಅರ್ಥವನ್ನು ಕೊಡುವುದು. ಸಾಂಸಾರಿಕನ ಪರವಾಗಿ ಅರ್ಥವನ್ನು ಮಾಡುವಾಗ, ಅಳಿಯವರ್ಗ ಎಂದರೆ ಜಾಮಾತೃಗಳ ಸಮೂಹ ಎಂದಾಗುವುದು. ಎರಡನೆಯ ಅರ್ಥವನ್ನು ಮಾಡುವಾಗ ವೈಯಾಕರಣನು "ಪದವಿಧಿ ಕನ್ನಡಕಂ ಸ। ಕ್ಕದಕವಿಲ್ಲ" — ಎಂಬ ನಿಯಮದಿಂದ ಆ ಶಬ್ದಪ್ರಯೋಗವು ಅಸಾಧುವೆಂದು ಹೇಳುತ್ತಾನೆ. ಲಕ್ಷ್ಮೀಶನಾದರೂ ಅರಿಸಮಾಸವೇನೆಂದರಿಯದ ಪಾಮರನಾಗಿರಲಿಲ್ಲವೆಂದು ಅವನ ಗ್ರಂಥವನ್ನೋದಿದ

ಯಾರಿಗೂ ತಿಳಿಯದಿರದು. ಹಾಗಾದರೂ ಅವನು ವ್ಯಾಕರಣ ನಿಯಮವನ್ನುಲ್ಲಂಘಿಸಿದನೇಕೆ? ಎಂದು ಪ್ರಶ್ನೆ ಬರಬಹುದು. ಅದಕ್ಕೆ ಕಾರಣವಿಷ್ಟೆ. ಅರಿಸಮಾಸವನ್ನಾದರೂ ಮಾಡಿ, ಅಳಿಯುವರ್ಗ-ಎಂಬ ಪ್ರಯೋಗವನ್ನು ಆ ಸಂದರ್ಭದಲ್ಲಿ ಮಾಡಿದರೆ, ಅರ್ಥಸ್ವಾರಸ್ಯವು ಹೇಗೆ ಹೆಚ್ಚುವುದೆಂದು ಕವಿ ಲಕ್ಷ್ಮೀಶನಿಗೆ ತಿಳಿದಿತ್ತು. ಆದರೆ ವೈಯಾಕರಣನು ಒಂದು ಸಂಸ್ಕೃತ ಶಬ್ದ, ಇನ್ನೊಂದು ಕನ್ನಡ ಶಬ್ದ, ಅವೆರಡರ ಸಮಾಸ ಮಾಡುವುದು ಪದ್ಧತಿವಿರುದ್ಧವೆಂದು ತಿಳಿದಿರುವನಲ್ಲದೆ ಅದರ ಒಳಗನ್ನು ತಿಳಿಯಲಿಲ್ಲ. ಆದುದರಿಂದಲೆ ಒಬ್ಬ ಕವಿಯು ‘‘ಇರುಮುರುಳೆಶುಷ್ಕವೈಯಾ। ಕರಣಂಗಂ ಶುಷ್ಕತಾರ್ಕಿಕಂಗಂ ಜಡ್ಡ॥ ಕ್ಕರಿಗಂಗಂ . . . ’’ ಕಾವ್ಯವು ಸಲ್ಲದೆಂದು ಘಂಟಾಘೋಷವಾಗಿ ಹೇಳಿದ್ದಾನೆ. ಇದರಿಂದ ಸಂಸ್ಕೃತಿಯನ್ನು ಬಯಸುವವರು ವ್ಯಾಕರಣ ಪೂಜೆಯನ್ನು ಮಾಡದೆ, ವ್ಯಾಕರಣಕ್ಕೆ ಯಾವುದು ಕಾರಣವಾಯಿತೋ, ಯಾವುದರಿಂದ ಮಾತು ಕಲಿತು ವ್ಯಾಕರಣ ಶಿಶುವು ಆಡತೊಡಗಿತೋ ಆ ವಾಙ್ಮಯವನ್ನು ಅವಗಾಹಿಸಬೇಕೆಂದು ವೇದ್ಯವಾಗದಿರದು. ನಾವು ಆಧುನಿಕರಾಗಿದ್ದರೂ ಪೂರ್ವಕಾಲದ ಜೀವನಕ್ರಮ, ಭಾಷಾಪದ್ಧತಿ, ವಿಮರ್ಶವಿಧಾನಗಳನ್ನು ಅರಿತುಕೊಳ್ಳಬೇಕು. ಇದು ನಾಮಪದ, ಇದು ಕ್ರಿಯಾಪದ, ಇದು ವಿಭಕ್ತಿಪಲ್ಲಟ, ಇದು ಸರಿ, ಅದು ತಪ್ಪು, ಎಂದು ನಿಮಿಷನಿಮಿಷದಲ್ಲಿಯೂ ನಿರ್ಬಂಧಿಸುವವರಿಲ್ಲದ ಕಾಲದಲ್ಲಿ ಭಾಷೆಯು ಹೇಗೆ ತೊದಲಡಿಯನ್ನಿಟ್ಟು ನಡಿಯುತಿತ್ತು? ಭಿನ್ನವ್ಯಕ್ತಿಗಳ ಭಾವನೆಗಳು ಮಾತಿನಲ್ಲಿ ಹೊರಹೊಮ್ಮುವಾಗ, ಅವುಗಳ ಬಾಹ್ಯರೂಪದಲ್ಲಿ ಹೇಗೆ ಸಾಮಾನ್ಯ ಉಂಟಾಯಿತು? ಆ ಮೇಲೆ ವ್ಯಾಕರಣವಾಗುವುದಕ್ಕೆ ಯಾವುದು ಕಾರಣಭೂತವಾಯಿತು? ಎಂಬೀ ವಿಷಯಗಳನ್ನು ಕಲಿತುಕೊಳ್ಳಬೇಕು ಆಗ ನಮಗೆ, ಆ ಆ ಕಾಲದ, ಎಂದರೆ ವ್ಯಾಕರಣವಿನ್ನೂ ಹುಟ್ಟದಿದ್ದ ಕಾಲದ ಜನರು ಕೇವಲ ಸಂಸ್ಕಾರದ ಬಲದಿಂದ ಭಾಷೆಯನ್ನು ರಚಿಸುತಿದ್ದರೆಂದು ಗೊತ್ತಾಗುವುದು. ಇಂತಹ ಸಂಸ್ಕೃತಿಯನ್ನೆ ಅವಷ್ಟಂಭಕವನ್ನಾಗಿ ಮಾಡಿ ಪ್ರಸ್ತುತಕಾಲದಲ್ಲೂ ಭಾಷಾಸೇವಕರು ಭಾಷಾಮಂದಿರವನ್ನು ಕಟ್ಟುವುದಕ್ಕೆ ಯತ್ನಿಸಿದರೆ ಈಗ ಕಂಡುಬರುವ ದೋಷಗಳೆಲ್ಲಾ ಮಾಯವಾಗಬಹುದೆಂದು ಕಾಣುತ್ತದೆ. ಭೂತಕಾಲದ ವಾಙ್ಮಯಭಂಡಾರದಿಂದ ವರ್ತಮಾನಕಾಲಕ್ಕೆ ಹೇಗೆ ಪ್ರಯೋಜನವನ್ನು ಮಾಡಬೇಕೆಂದು ಅರಿಯದಿರುವುದೇ ಈಗಿನ ಅನಾಹುತಗಳಿಗೆ ಮೂಲಕಾರಣವೆಂದು ಹೇಳಿದರೆ ತಪ್ಪಾಗದು.

ಕರ್ನಾಟಕ ಭಾಷೆಯ ಆದಿವಾಙ್ಮಯವು ಹೇಗಿದ್ದಿತೆಂದು ಹೇಳುವುದಕ್ಕೆ ಬೇಕಾದ ಆಧಾರಗಳು ಆ ಭಾಷಾಚರಿತ್ರೆಯಲ್ಲಿ ಉಪಲಬ್ಧವಾಗುವುದಿಲ್ಲ. ನೃಪತುಂಗನ ಕಾಲಕ್ಕೆ ಹಿಂದೆ ಕರ್ನಾಟಕಭಾಷೆಯು ಬಹಳವಾಗಿ ಬೆಳೆದಿತ್ತು. ದುರ್ವಿನೀತನೆಂಬ 5ನೆಯ ಶತಮಾನದ ಗಂಗರಾಜನು ಭಾರವಿಯ ಕಿರಾತಾರ್ಜುನೀಯಕ್ಕೆ ಟಿಪ್ಪಣಿಯನ್ನು ಬರೆದಿದ್ದನು ಶ್ರೀವರ್ಧದೇವನು 96,000 ಗ್ರಂಥಗಳುಳ್ಳ ಚೂಡಾಮಣಿಯನ್ನು ರಚಿಸಿದ್ದನು. ಇನ್ನೂ ಕೆಲವು ಕವಿಗಳು ಗದ್ಯ ಗ್ರಂಥಗಳನ್ನೂ ಪದ್ಯಗ್ರಂಥಗಳನ್ನೂ ಬರೆದು ಗುರುತಾಪ್ರತೀತಿಯನ್ನು ಕೈಕೊಂಡಿದ್ದರು. ಕಿಸುವೊಳಲು, ಕೊಪಣನಗರ, ಪುಲಿಗೆರೆ, ಒಂಕುಂದದ ನಡುವಣ ನಾಡಿನಲ್ಲಿ ತಿಳಿಗನ್ನಡವು ನೆಲೆನಿಂತಿತ್ತು. ಅಲ್ಲಿಯ ನಾಡವರ ಪ್ರಾಗಲ್ಭ್ಯವು ಅಸದೃಶವಾಗಿತ್ತು ಎಂದಿಷ್ಟೆ 9ನೆಯ ಶತಮಾನದ ಹಿಂದಿನ ಕನ್ನಡದ ವಿಷಯವಾಗಿ ನಮಗೆ ತಿಳಿದುಬರುತ್ತದೆ 9ನೆಯ ಶತಮಾನದ ನೃಪತುಂಗನು ಲಾಕ್ಷಣಿಕರ ಗದ್ದುಗೆಯಲ್ಲಿ ಕುಳಿತುಕೊಂಡು ಇದು ಗುಣ, ಇದು ದೋಷ, ಇದು ಮಾರ್ಗ, ಇದು ಅಮಾರ್ಗ ಎಂದು ಉಪದೇಶವನ್ನು ಮಾಡುವುದು ನಮಗೆ ಕಂಡುಬರುತ್ತದೆ. ನೃಪತುಂಗನು ಲಕ್ಷಣಗಳನ್ನು ಹೇಳಬೇಕಾದರೆ ಅವನ ಹಿಂದೆ ಅನೇಕ ಲಕ್ಷ್ಯ ಗ್ರಂಥಗಳಿದ್ದುವೆಂದು ಊಹಿಸಿದರೆ ತಪ್ಪಾಗದು. ಅವನ ನಂತರದ ಗುಣವರ್ಮ, ಪಂಪರ ಕಾಲದಲ್ಲಿ, ಆಗ ಹಳೆಯದೆಂದು ಹೇಳುತಿದ್ದ ಕನ್ನಡದ ಯಾವ ಭಗ್ನಾವಶೇಷಗಳಿದ್ದುವೊ ಹೇಳಲಾಗುವುದಿಲ್ಲ. ಆದರೆ ಮತ್ತಿನ ಕಾಲದಲ್ಲಿ ಪ್ರಾಚುರ್ಯದಲ್ಲಿಲ್ಲದ ಹಲಕೇವು ಶಬ್ದಗಳೂ ವಾಕ್ಪ್ರಯೋಗಗಳೂ ಆ ಕಾಲದ ಕನ್ನಡದಲ್ಲಿ ಗೋಚರವಾಗುತ್ತವೆ. ಒಂದೊಂ, ಬಿಲ್ಲಾನದಂ, ಚಂದ್ರಾನ್, ಎಂಬ ಹಳೆ ಪ್ರಯೋಗಗಳು 10ನೆಯ ಶತಮಾನದ ಕನ್ನಡದಲ್ಲಿ ಕಾಣುತಿದ್ದರೂ, ಈಗ ಹೊಸಕನ್ನಡದ ವೈಶಿಷ್ಟ್ಯವಾದ, ಅಕಾರಾಂತ ಶಬ್ದಗಳಿಗೆ ಪ್ರಥಮೆಯಲ್ಲಿ ಪ್ರತ್ಯಯವಿಲ್ಲದೆ ಉಪಯೋಗಿಸುವ ಕ್ರಮವು ಆಗಲೆ ಇದ್ದಂತೆ ಕಂಡುಬರುತ್ತದೆ. 10ನೆಯ ಶತಮಾನದಲ್ಲಿದ್ದ ಈ ಮಹಾಕವಿಪ್ರಯೋಗವನ್ನು 13ನೆಯ ಶತಮಾನದ ಕೇಶಿರಾಜನು ಪರಿಶುದ್ಧವೆಂದು ಅಂಗೀಕರಿಸಲಿಲ್ಲ. ಪ್ರಥಮೆಯಲ್ಲಿ ವಿಭಕ್ತಿಪ್ರತ್ಯಯವಿಲ್ಲದೆ ಅಕಾರಾಂತ ಶಬ್ದವನ್ನು ಉಪಯೋಗಿಸಿದುದಕ್ಕೆ ಈ ಕೆಳಗಿನ ಉದಾಹರಣೆಗಳನ್ನು ತೆಗೆದುಕೊಳ್ಳಬಹುದು.

ಹುತವಹ ಬಾಣದಿಂದ ಮಿಸೆ ತೂಳ್ದುದಾ ವಾನರಸೇನೆ ಕಟ್ಟಿಪ।
ರ್ವತತತಿಯಿಂದೆ ಕಟ್ಟುವಡೆದತ್ತಪರಾಬ್ಧಿಪ ದುಷ್ಪ್ಲವಂಗದಿಂ॥

— ರನ್ನನ ಗದಾಯುದ್ಧ.

ಬಾಹು ವಿ। ಕ್ರಮಿ ದುಶ್ಶಾಸನ ನಿನ್ನ ಮುಂದೆ ಸೆಳೆವಂದೆಲ್ಲಿರ್ದೆ।

— ರನ್ನನ ಗದಾಯುದ್ಧ.

ಸಕಲಕಲಾಗಮಾಭರಣನೀಶ್ವರಪುತ್ರ ಸಮಸ್ತವಸ್ತುರೂ। ಪಕನ

— ನಾಗವರ್ಮನ ಛಂದಸ್ಸು.

ಮೇಲಿನ ಪದ್ಯಗಳಲ್ಲಿ ಅಪರಾಬ್ಧಿಪ, ದುಶ್ಶಾಸನ, ಈಶ್ವರಪುತ್ರ— ಎಂದು ಪ್ರಕೃತಿ ಭಾವಗಳನ್ನೇ ರನ್ನ ನಾಗವರ್ಮರು ಪ್ರಯೋಗಿಸಿರುವರು. ಸಂಸ್ಕೃತದ ಅಕಾರಾಂತ ಅಂಗಗಳಿಗೆ ಬಹುವಚನ ಪ್ರತ್ಯಯವಾದ ‘ಗಳ್’ ಬರುವಾಗ, ಮಧ್ಯದಲ್ಲಿ ಬಿಂದುವನ್ನು ಅವಶ್ಯವಾಗಿ ಉಪಯೋಗಿಸಬೇಕೆಂದು ಕೇಶಿರಾಜನು ‘‘ಬಿಂದುನಿಯತಮದು ಸಂಸ್ಕೃತದೊಳ್’’ ಎಂಬ ನಿಯಮದಿಂದ ಸ್ಪಷ್ಟೀಕರಿಸಿರುತ್ತಾನೆ. ಆದರೆ ನಾಗವರ್ಮನ

ಛಂದೋಂಬುಧಿಯಲ್ಲಿ "ವೇದಗಳೊಳ್" ಎಂಬ ಅಶುದ್ಧ ಪ್ರಯೋಗವು ಸಿಕ್ಕುತ್ತದೆ. ವೈಯಾಕರಣ ಪ್ರವರನಾದ 13 ನೆಯ ಶತಮಾನದ ಕೇಶಿರಾಜನು ಒಂದೆಡೆಯಲ್ಲಿ "ಪದವಿಧಿ ಕನ್ನಡ ಕಂ ಸ। ಕ್ಕ ದಕ್ಕಮಿಲ್ಲಾ" ಎಂದು ಹೇಳುವ ಮೊದಲೆ "ಅರಸುಕುಮಾರನನಾಯತ, ತರ ಗಡೆಗಣ್ಣಿಂದೆ ನೋಡಿ . ." ಇತ್ಯಾದಿ ಅರಿಸಮಾಸದ ಪ್ರಯೋಗಗಳು ಆಗಿದ್ದವು. ಸಂಸ್ಕೃತ ಪದಕ್ಕೂ ತದ್ಭವ ಪದಕ್ಕೂ ಸಮಾಸನಿಲ್ಲವೆಂದು ಹೇಳುವ ಮೊದಲು "ತರವೇಳ್ ಮಾಣಿಕ್ಯ ಭಂಡಾರದ ಪುಟಕೆಗಳಂ" ಎಂದು ಹಂಸರಾಯನು ಬರೆದಿದ್ದನು. "ಪರಪದಪೂರ್ವಂ ದ್ವಿತ್ವಾ । ಕ್ಷರವಾಗಿರೆ ಪೂರ್ವಪದದ ಚರಮಂ ಹ್ರಸ್ವಾ ॥ ಕ್ಷರವಾಗೆ ಸಂಧಿದೋಷಂ......" ಎಂಬ ಕೇಶಿರಾಜನ ಶಾಸನದ ಮುಂಚೆ 'ನಿನ್ನ ಪ್ರಸಾದ' ಇತ್ಯಾದಿ ಸಂಧಿದೋಷಗಳು ಕನ್ನಡದಲ್ಲಿ ನೆಲೆನಿಂತಿದ್ದುವು. 'ಅಲ್' ಎಂಬುದನ್ನು ಸತಿ ಸಪ್ತಮಿಯಲ್ಲಿ ಪ್ರಯೋಗಿಸಬಾರದೆಂದೂ, 'ಅಲೊಡಂ' ಎಂದರೆ ಶುದ್ಧವೆಂದೂ, ಅವನು ಒತ್ತಿಹೇಳುವಾಗ, "ಎರಗಿದ ನೆರಗಲ್ ಸ್ವರ್ಗದಿಂ ಪುಷ್ಪವರ್ಷಂ" ಎಂದು ಪ್ರಸಿದ್ಧಕವಿಯಾದ ರುದ್ರಭಟ್ಟನು ಬರೆದುಬಿಟ್ಟಿದ್ದನು ಮದನತಿಲಕವನ್ನು ಬರೆದ ಚಂದ್ರರಾಜ ಮೊದಲಾದವರಿಗೆ ಹೊಸಗನ್ನಡದಲ್ಲಿ ಗ್ರಂಥರಚನೆ ಮಾಡುವ ಹುಚ್ಚು ಹಿಡಿದಾಗ, ಕವಿಗಳ ಅಂತಹ ಪ್ರವೃತ್ತಿಯಿಂದ ವ್ಯಾಕರಣ ಮರ್ಯಾದೆಗೆ ಕುಂದಾಗಬಹುದೆಂದು ನಾಗವರ್ಮನು ಶಬ್ದಸ್ಮೃತಿ ಭಾಷಾಭೂಷಣಗಳನ್ನು ಬರೆದುದೇನೋ ನಿಜ. ಆದರೆ ಆತನೂ ಅದಕ್ಕಿಂತ ಮೊದಲೇ ಪ್ರಸಿದ್ಧರಾಗಿ ಆದರ್ಶಸ್ಥಾನವನ್ನು ಆಕ್ರಮಿಸಿದ್ದಾ ಕವಿಗಳ ಪ್ರಯೋಗಗಳು ತನ್ನ ದೃಷ್ಟಿಯಿಂದ ಅಸಂಬದ್ಧವಿರಲಿ, ಸುಸಂಬದ್ಧವಿರಲಿ, ಅವುಗಳನ್ನು ಗ್ರಾಹ್ಯಗಳೆಂದೇ ಹೇಳಬೇಕಾಯಿತು. "ಸಮ ಸಂಸ್ಕೃತಂ ದೇಶೀಯ ಪದೇನ ಸಮಂ ಸಮಸ್ಯತೇ" ಎಂಬ ನಿಯಮವನ್ನು ಮಾಡಿ, ಕೂರಸಿ, ಮಂಗಳಾರತಿ, ಮೊದಲಾದ ಅರಿಸಮಾಸಗಳನ್ನು, ಪೂರ್ವ ಕವಿಗಳು ಹೇಳಿರುವರೆಂಬ ಒಂದೇ ಕಾರಣದಿಂದ, ಶುದ್ಧವೆಂದು ಅಂಗೀಕರಿಸಬೇಕಾಯಿತು. 'ಬಹು ಭಾರಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ'— ಎಂಬಲ್ಲಿ ದ್ವಿತೀಯಾರ್ಥದಲ್ಲಿ ಚತುರ್ಥಿಯನ್ನು ಅಭಿನವಪಂಪನೆ ಪ್ರಯೋಗಿಸಿರಲು ಅದನ್ನು ಅಲ್ಲಗಳೆಯುವುದುಂಟೇ? ಅದನ್ನು ವಿಭಕ್ತಿಪಲ್ಲಟವೆಂದು ಹೇಳುವ' ಎಂದೆಣಿಸಿ ಅಂತಹ ಪ್ರಯೋಗಗಳಿಗೆಲ್ಲಾ ಶುದ್ಧಪತ್ರವನ್ನು ಕೊಡಬೇಕಾಯಿತು. ಈ ಎಲ್ಲಾ ಕಾರಣಗಳಿಂದ ವಸ್ತುಗಳ ಬೆನ್ನುಬಿಡದ ನೆಳಲಿನಂತೆ, ಸೂತ್ರಗಳ ಹಿಂದೆ ಅಪವಾದಗಳು ಬರಲಾರಂಭಿಸಿದುವು. 'ಅಪವಾದ' ಎಂಬ ಶಬ್ದಕ್ಕೆ ಸರಿಯಾದ ಅರ್ಥವಿದೆ ಆದು ಪ್ರಯೋಗಗಳನ್ನು ಮಾಡಿದ ಕವಿಗಳ ಮೇಲಿನ ಅಪವಾದವಲ್ಲ. ಸೂತ್ರಗಳನ್ನು ಒಮ್ಮೆ ಬಿಗಿಯಾಗಿ ಮಾಡಿ, ಆ ಮೇಲೆ 'ನಮ್ಮ ಪಂಪ' 'ನಮ್ಮ ರನ್ನ' ಎಂಬ ಅಭಿಮಾನದಿಂದ ತಮ್ಮ ವರ್ತನೆಯ ವಿಷಯದಲ್ಲಿ ಪಶ್ಚಾತ್ತಾಪವನ್ನು ತೋರಿಸುವ ವೈಯಾಕರಣರ ಮೇಲಿನ ಅಪವಾದವಿದು.

ನಾಗವರ್ಮನು ವ್ಯಾಕರಣ ನಿಯಮಗಳನ್ನೇರ್ಪಡಿಸಿ, ಕರ್ಣಾಟಕ ಭಾಷೆಯನ್ನು ವ್ಯಾಕರಣ ಪರಿಶುದ್ಧತೆಯ ಅಂಕೆಯಲ್ಲಿಡಬೇಕೆಂದು ಎಷ್ಟು ಪೇಚಾಟಪಟ್ಟರೂ, ಅವನ ಉದ್ದೇಶವು ಈಡೇರಲಿಲ್ಲವೆನ್ನಬಹುದು. ಒಂದಲ್ಲ, ಎರಡು ವ್ಯಾಕರಣಗಳಿಂದ ಕನ್ನಡ ಭಾಷೆಯನ್ನು ರೂಪಿಸಿ, ಮುಂದಿನ ಕವಿಗಳನ್ನು ನಿರ್ಬಂಧಪಡಿಸುವುದಕ್ಕೆ ಆತನು ಶತಪ್ರಯತ್ನಗಳನ್ನೇ ಮಾಡಿದರೂ, ಅವನ ಆಯುರವಸಾನಕಾಲದ ಮೊದಲೆ, ಅವನ ನಿಯಮಗಳೆಲ್ಲಾ ನೆಲಸಮವಾದಂತೆ ತೋರುತ್ತದೆ. "ಪಕ್ವಾಫಲವಿದ್ದಂತೆ ಕಸುಗಾಯನ್ನು ಕೊಯ್ದ ಶಿವನು"— ಎಂದು ಹೇಳಿಕೊಂಡು ಭಾವಿಕನಾದ ಬಸವನು 1160ರಲ್ಲಿ ವೀರಶೈವ ಧರ್ಮಕ್ಕೆ ಪ್ರಾಣಪ್ರತಿಷ್ಠೆಯನ್ನು ಮಾಡಿದನು. ಅವನ ಧರ್ಮದಲ್ಲಿ, ಉಚ್ಚನು, ನೀಚನು, ಧನಿಕನು, ಬಡವನು ಎಂಬ ಭೇದವು ಇಲ್ಲದಂತೆ ವಾಙ್ಮಯದಲ್ಲಿಯೂ ಇದು ಶುದ್ಧ, ಇದು ಅಶುದ್ಧ, ಎಂಬ ಪೃಥಕ್ಕರಣಕ್ಕೆ ಅವಕಾಶವಿಲ್ಲದಂತಾಯಿತು ಅನೇಕ ಮಡಿವಾಳ ಮಾಚಯ್ಯಗಳೂ, ಅಂಬಿಗರ ಚೌಡಯ್ಯರೂ ಹೊರಟು ಪರಿಶುದ್ಧತೆಯ ದೇವತೆಗೆ ಮೀಸಲಾಗಿದ್ದ ಕನ್ನಡವನು ಭಾವವು ಬೋಧಿಸಿದಂತೆ ಪ್ರಯೋಗಿಸಿ, ಆದಕ್ಕೆ ಇನ್ನೊಂದು ರೂಪವನ್ನು ಕೊಟ್ಟರು. ಅವರ ಕಾಲದಲ್ಲಿ ಗ್ರಂಥಸ್ಥಗ್ರಾಮ್ಯ ಭಾಷೆಗಳಲ್ಲಿ ವಿಶೇಷ ಭೇದಗಳು ಇದ್ದಿಲ್ಲವೆಂದು ಹೇಳಬಹುದು. ಹೃದಯದಿಂದ ಯಾವುದು ತಾನಾಗಿ ಹೊರಟುಬಂತೋ ಅದೆಲ್ಲಾ ಕವಿತೆಯಾಗುತ್ತಿತ್ತು. ವೀರಶೈವ ಗ್ರಂಥಕಾರರ ವಚನಗಳನ್ನೂ ಹಾಡುಗಳನ್ನೂ ನೋಡಿದರೆ ಈ ವಿಷಯವು ಸ್ಪಷ್ಟವಾಗುವುದು. ಉದಾಹರಣೆಗಾಗಿ ಎರಡು ಹಾಡುಗಳನ್ನಿಲ್ಲಿ ಕೊಡುತ್ತೇನೆ:—

ಎಂಟೆಸಳ ಕಮಲದಾ ನವ ಬ್ರಹ್ಮಪುರದೊಳಗೆ
ಎಂಟು ಬೀದಿಗಳೆಂಟು ಕರಿಗಳುಂಟು ॥
ಎಂಟು ಕರಿಗಳ ಸುಟ್ಟು ಕಂಟಕಂಗಳ ಗೆಲಿದು
ದಾಂಟಿದನು ಸಂಸಾರ ಸಾಗರವನು ॥

ಅತ್ತೆಯ ಮಾತ ಸೊಸೆ ಕೇಳಳಮ್ಮ
ಅತ್ತೆಯನೆ ಒತ್ತಿ ದುರ್ಭಾಷೆಯಮ್ಮ ॥
ಪತಿವ್ರತವು ಕೆಟ್ಟುಹೋದೀತಮ್ಮ ಇನ್ನು
ಪತಿಯ ಮಾತನು ಸಡ್ಡೆಗೊಳ್ಳರಮ್ಮ ॥

ಈ ಪದ್ಯಗಳು ವೀರಶೈವರಿಂದ ಕರ್ಣಾಟಕ ಭಾಷೆಯಲ್ಲಾದ ಪರಿವರ್ತನೆಗೆ ಸಾಕ್ಷೀಭೂತವಾಗಿವೆ. ಅವರಿಂದ ಇಂತಹ ಸಾವಿರಾರು ಪದ್ಯಗಳು ನಿರ್ಮಿತವಾದುವಲ್ಲದೆ ಅವರ ಕಾಲದಲ್ಲಿ ಕರ್ಣಾಟಕ ವಾಙ್ಮಯವು ವಿಸ್ತಾರವಾಗುವುದಕ್ಕೆ ಅವಕಾಶವಾಯಿತು 1165ರಲ್ಲಿ ಷಟ್ಪದೀ ಕಾವ್ಯಕ್ಕೆ ಅಸ್ತಿತ್ವವನ್ನು ಕೊಟ್ಟು ಕರ್ಣಾಟಕ ಭಾಷಾಪ್ರಪಂಚದಲ್ಲಿ ದೊಡ್ಡ ಆಂದೋಲನವನ್ನೆಬ್ಬಿಸಿದ ರಾಘವಾಂಕನೂ, "ನೋಡುವೊಡೊಂದಕ್ಕರಮಂ । ಮಾಡುವೊಡುಚ್ಚರಣೆಗರಿದು ಮೂರು ತೆರನಂ ॥ ಕೂಡೆ ಕವಿತತಿ ವಿಚಾರಿಸ । ಬೇಡದರಿಂದ ರಳ ಕುಳಕ್ಷಳಂಗಳನಿದರೊಳ್"॥— ಎಂದು ಹೇಳಿದ ಹರಿಹರನೂ

ಪೂರ್ವಕಾಲದ ಸಂಪ್ರದಾಯಗಳಲ್ಲಿ ಹಲವನ್ನು ಉಲ್ಲಂಘಿಸಿದರು ಕಾವ್ಯದಲ್ಲಿ ಭಾವಕ್ಕೆ ಪ್ರಾಧಾನ್ಯವನು ಕೊಟ್ಟರು. ಆದರೆ ಆ ಕಾಲದಲ್ಲಿ ಅವರಿಗೆ ಸ್ವಾಧರ್ಮೀಯರಲ್ಲದೆ ಇತರರಿಂದ ಹೆಚ್ಚಿನ ಮನ್ನಣೆಯು ದೊರಕಲಿಲ್ಲವೆಂದು ತೋರುತ್ತದೆ. ತ್ರಿಭುವನ ತಾತನೆಂಬ ಮಹಾವಾದಿಯನ್ನು ಜಯಿಸಿ ಕೆರೆಯ ಪದ್ಮರಸನಂತಹ ಪ್ರತಿವಾದಿ ಭಯಂಕರರೆ ವೀರಶೈವ ವಾಙ್ಮಯಕ್ಕೆ ಪ್ರೋತ್ಸಾಹಕರಾಗಿದ್ದರೆನ್ನಬಹುದು. ಹೊಯ್ಸಳ ಬಲ್ಲಾಳ ರಾಜನ ಆಸ್ಥಾನವು ವೀರಶೈವ ಪಂಡಿತರಿಂದ ತುಂಬಿತ್ತು. ಷಟ್ಪದಿಗಳ ಆದ್ಯ ಪ್ರವರ್ತಕನಾದ ರಾಘವಾಂಕನು ಐದಾರು ಗ್ರಂಥಗಳನ್ನು ಷಟ್ಪದಿಯಲ್ಲೆ ರಚಿಸಿ ಓರುಂಗಲ್ಲಿನ ಪ್ರತಾಪ ರುದ್ರನ ಆಸ್ಥಾನದಲ್ಲಿದ್ದ ವಾಗ್ಮಿಗಳನ್ನು ಜಯಿಸಿದನು ಬಸವನು ಕಲ್ಯಾಣದ ಬಿಜ್ಜಳದ ಆಸ್ಥಾನವನ್ನು ಸೇರಿಕೊಂಡು ವೀರಶೈವ ಧರ್ಮಕ್ಕೆ ಉತ್ಕರ್ಷವನ್ನು ತರುವುದಕ್ಕೆ ಬಹಳ ಪರಿಶ್ರಮಗಳನು ವಹಿಸುತಿದ್ದನಲದೆ, ಹಳೆ ನಿಯಮಗಳನೆಲ್ಲಾ ಹರಿದೊಗೆದು, ಭಾವನಾ ಪ್ರವಾಹದಲ್ಲಿ ಭಾಷೆಯು ಹರಿದೋಡುವುದೆ ಕಾವ್ಯದ ಲಕ್ಷಣವೆಂದು ತೋರಿಸಿದನು ಅವನ ಉದಾಹರಣೆಯನ್ನನುಸರಿಸಿ ಅನೇಕ ವೀರಶೈವ ಕವಿಗಳು ಗದ್ಯದಲ್ಲಿಯೂ, ಪದ್ಯದಲ್ಲಿಯೂ ಗ್ರಂಥಗಳನ್ನು ವಿರಚಿಸಿದರು. ಇಂತಹ ಕವಿಗಳೆಲ್ಲರೂ ಸುಸಂಸ್ಕೃತರಾಗಿದ್ದಾರೆಂದೂ ಅವರ ಗ್ರಂಥಗಳೆಲ್ಲಾ ಅನುಸರಣೀಯವಾಗಿದ್ದುವೆಂದೂ ಹೇಳಲಾಗುವುದಿಲ್ಲ. ಆದರೂ ಅವರಲ್ಲಿ ರಾಘವಾಂಕ, ಹರಿಹರಾದಿಗಳು ಭಾವಕ್ಕೆ ಪ್ರಾಧಾನ್ಯವನ್ನು ಕೊಟ್ಟು, ವ್ಯಾಕರಣದ ಬಿಗಿತವನ್ನು ಸಡಿಲುಮಾಡಿ, ಇಂಪಾದ ಕಾವ್ಯಗಳನ್ನು ರಚಿಸಬಹುದೆಂದು ತೋರಿಸಿದರು. ಆದರೆ ಅವರ ಸಂಪ್ರದಾಯವು ಆ ಕಾಲದ ಲಾಕ್ಷಣಿಕರಿಂದ ಮಾನಿತವಾಗಲಿಲ್ಲ. ಇದಕ್ಕೆ ಕೆಳಗೆ ಕೊಟ್ಟವುಗಳೆ ಮುಖ್ಯ ಕಾರಣಗಳೆಂದು ತೋರುತ್ತವೆ: —

(1) ವೀರಶೈವ ಕಾಲಕ್ಕೆ ಮುಂಚೆ ಕಾವ್ಯಗಳನ್ನು ರಚಿಸಿ ಪ್ರಸಿದ್ಧಿಪಡೆದವರಲ್ಲಿ ಹೆಚ್ಚುಕಡಿಮೆ ಎಲ್ಲರೂ ಜೈನರಾಗಿದ್ದರು ತಮ್ಮ ಮತಸಂಬಂಧವಾದ ಗ್ರಂಥಗಳನ್ನೇ ಅವರು ಮೆಚ್ಚುತಿದ್ದರಲ್ಲದೆ, ಅನ್ಯಮತಸಂಬಂಧವಾದ ಕಾವ್ಯಗಳಿಗೆ ಪೂಜ್ಯತೆಯನ್ನು ಕೊಡುತ್ತಿರಲಿಲ್ಲ. ಕವಿತೆಯೆಂಬುದು ಜಾತಿಮತಗಳ ಸಂಕುಚಿತ ಸಾಮ್ರಾಜ್ಯದಿಂದ ಹೊರಗಾದುದೆಂದು ಅವರಿಗೆ ಎಣಿಕೆಯಾಗುತ್ತಿರಲಿಲ್ಲ. ಇದಕ್ಕೆ ಪಂಪ ರನ್ನಾದಿಗಳೆ ಉದಾಹರಣ ಪುರುಷರು. ಅವರು ಬರೆದ ಆದಿ ಪುರಾಣ, ಅಜಿತಪುರಾಣಗಳಿಗಿಂತಲೂ ಭಾರತ ಗದಾಯುದ್ಧಗಳೆ ರಸವತ್ತಾಗಿದ್ದರೂ, ಮೊದಲಿನ ಗ್ರಂಥಗಳನ್ನು ರಚಿಸಿದ ಕಾರಣ ಅವರಿಗೆ ಜೈನಕವಿಗಳಲ್ಲಿ ಉಚ್ಚಸ್ಥಾನಗಳು ದೊರಕಿದುವು ಇಲ್ಲವಾದರೆ ಅವರ ಗತಿಯೇನಾಗುತಿತ್ತೋ ದೇವರೇ ಬಲ್ಲ.

(2) ವೀರಶೈವರು ಕನ್ನಡದಲ್ಲೆಬ್ಬಿಸಿದ ಚಳವಳವೆಂದರೆ ನಿರಂಕುಶ ಪ್ರಭುತ್ವವನ್ನು ಕಿತ್ತುಬಿಸಾಡುವುದಕ್ಕೆ ಪ್ರಜಾಸತ್ತಾವಾದಿಗಳು ಮಾಡಿದ ಆಂದೋಲನವೆನ್ನಬಹುದು ಏಕೆಂದರೆ ವೀರಶೈವ ಕಾಲಕ್ಕೆ ಹಿಂದೆ ಕನ್ನಡದಲ್ಲಿ ಬಹಳ ಕೃತ್ರಿಮತೆ ಇತ್ತು. ವ್ಯಾಕರಣ ಸೂತ್ರಗಳಿಂದ ಭಾಷೆಯನ್ನು ಬಂಧಿಸಿ ಕನ್ನಡವನ್ನೆಲ್ಲಾ ತಮ್ಮ ಅಂಕೆಯಲ್ಲಿಟ್ಟುಕೊಳ್ಳುವ ಪ್ರವೃತ್ತಿಯು ಜೈನರಲ್ಲಿ ಕಾಣುತಿತ್ತು, ಅವರ ವ್ಯಾಕರಣ ನಿಯಮಗಳು ಕಠಿನತೆಯ ಪರಾಕಾಷ್ಠೆಯನ್ನು ಮುಟ್ಟಿದಾಗ, ಭಾಷೆಯೆಂದರೆ ಒಬ್ಬಿಬ್ಬರ ಸೊತ್ತಲ್ಲ, ಅದರಲ್ಲಿ ಎಲ್ಲರಿಗೂ ಅಧಿಕಾರವಿದೆಯೆಂದು ವೀರಶೈವರು ತೋರಿಸಿದರು. ಆಗ ವ್ಯಾಕರಣ ನಿಯಮಗಳು ಗಾಳಿಪಾಲಾದುವು. ಇದು ಪರಿಶುದ್ಧರಾದ ಜೈನರಿಗೆ ಮಾನ್ಯವಾಗಲಿಲ್ಲ.

ಲಾಕ್ಷಣಿಕರಾದ ಜೈನರ ವಿರುದ್ಧವಾಗಿ ವೀರಶೈವರು ಬಂಡಾಯವನ್ನೆಬ್ಬಿಸುವುದಕ್ಕೆ ಅವರಿಗೆ ಸಂಸ್ಕೃತಿಯೊಂದೆ ಬೆಂಬಲವಾಗಿತ್ತು. ಕಾಲಕ್ರಮದಲ್ಲಿ ಈ ಸಂಪ್ರದಾಯಕ್ಕೆ ಹೆಚ್ಚಿನ ಮಾನ್ಯತೆ ಸಿಕ್ಕಿದಂತೆ ತೋರುತ್ತದೆ. ಅನೇಕ ವೀರಶೈವ ಕವಿಗಳು ಒಂದೇ ಸವನೆ ಮಾಡಿದ ಪ್ರಯತ್ನಗಳ ಸಾಮುದಾಯಿಕ ಫಲವಾಗಿ ಹೊಸತೊಂದು ವಾಙ್ಮಯವು ಏರ್ಪಟ್ಟುದಲ್ಲದೆ, ಜನರಲ್ಲಿಯೂ ಒಬ್ಬೊಬ್ಬರ ಮನಸ್ಸು ಆ ಕಡೆಗೆ ಹರಿಯಲಾರಂಭಿಸಿತು. ಇದಕ್ಕೆ ಉದಾಹರಣೆಯೆಂದರೆ 1232 ರಲ್ಲಿ ಸಾಂಗತ್ಯದಲ್ಲಿ ಪ್ರಥಮ ಗ್ರಂಥವನ್ನು ರಚಿಸಿದ ಶಿಶುಮಾಯಣದು. ಇವನು ''ರನ್ನನ ಹೊನ್ನನ ಜನ್ನಮಯ್ಯನ ಚತು । ರೋನ್ನತ ಕವಿತಾರ್ಣವನ ॥ ಸನ್ನುತ ಕವಿ ಪಂಪರಾಜ ಮೊದಲಾದರ । ಚೆನ್ನಡಿಗಳಿಗೆರಗುವೆನು ॥ ಎಂದು ಭಯಭಕ್ತಿಗಳಿಂದ ಲಕ್ಷಣಬದ್ಧವಾಗಿ ಕಾವ್ಯಗಳನ್ನು ಬರೆದ ಪಂಪರನ್ನಾದಿಗಳ ನಾಮಸ್ಮರಣೆಯನ್ನು ಮಾಡುತ್ತಾ ಅವರ ಸಂಪ್ರದಾಯಕ್ಕೆ ವಿರುದ್ಧವಾಗಿ ಬರೆಯಲು ಪ್ರಾರಂಭಿಸಿದನು. ಇವನ ಸಾಂಗತ್ಯವು ಅನೇಕ ಮಹಾ ಕವಿಗಳಿಂದ ಮತ್ತೆ ಸ್ವೀಕೃತವಾಯಿತು. 1557ನೆ ಇಸವಿಯ ದಕ್ಷಿಣ ಕನ್ನಡದ ಕವಿಯಾದ ರತ್ನಾಕರವರ್ಣಿಯು ಭರತೇಶ ವೈಭವನೆಂಬ ಸರಸ ಕಾವ್ಯವನ್ನು ಬರೆದು ಕೀರ್ತಿಭಾಜನನಾದನು. ಸಾವಿರಗಟ್ಟಲೆ ಪದ್ಯಗಳುಳ್ಳ ಅನೇಕ ಉದ್ಗ್ರಂಥಗಳು ಸಾಂಗತ್ಯದಲ್ಲಾದುವು.

ಕವಿಗಳ ಮನಸ್ಸು ಕ್ರಮೇಣ ವೀರಶೈವ ಮಾರ್ಗದ ಕಡೆಗೆ ಹರಿಯುವುದನ್ನು ನೋಡಿ, ವ್ಯಾಕುಲಚಿತ್ತನಾದ ಕೇಶಿರಾಜನು 1260ನೆಯ ಇಸವಿಯಲ್ಲಿ ಜೈನಮಾರ್ಗವನ್ನು ಪ್ರತಿಷ್ಠಾಪನೆ ಮಾಡುವ ಕೊನೆಯದೊಂದು ಪ್ರಯತ್ನವನ್ನು ಮಾಡಿದನು. ವ್ಯಾಕರಣ ನಿಯಮಗಳನ್ನುಲ್ಲಂಘಿಸಿದ ವೀರಶೈವ ವಾಙ್ಮಯದ ಅಸ್ತಿತ್ವವನ್ನು ಅವನು ತನ್ನ ದರ್ಪಣದಲ್ಲಿ ಒಪ್ಪಿಕೊಳ್ಳಲಿಲ್ಲ. ಇಂತಹವು ಸಹಜ ರಳಗಳು, ಇಂತಹವು ಕುಳಗಳು, ಎಂದು ಮಾಯವಾಗುವ ಚಿಹ್ನೆಯನ್ನು ತೋರಿಸುತಿದ್ದ ಅವುಗಳನ್ನು ಪ್ರಸ್ಥಾಪನೆ ಮಾಡುವುದಕ್ಕೆ ಹವಣಿಸಿದನು. ಲಕಾರಾಂತವಾದ ಬೆರಲ್, ಎರಲ್, ಕೊರಲ್, ಮರಲ್ ಮೊದಲಾದ ಶಬ್ದಗಳನ್ನು ಕುಳಾಂತವಾಗಿ ಉಚ್ಚರಿಸುವ ಪದ್ಧತಿಯು ಕೆಲವರಲ್ಲಿದೆಯೆಂದೂ ಹಾಗೆ ಅವುಗಳನ್ನು ಉಚ್ಚರಿಸುವವರು ಗ್ರಾಮ್ಯರೆಂದೂ ಹೇಳಿದನು ಬಿಂದುಗಳು ಮಾಯವಾಗುವುದೆಂಬ

ಹೆದರಿಕೆಯಿಂದ. ಇವು ಸಹಜ ಬಿಂದುಗಳು, ಇವುಗಳು ವಿಕಲ್ಪ ಬಿಂದುಗಳು — ಎಂದು ಪೃಥಕ್ಕರಿಸಿ, ತೋರಿಸಿದನು. "ಅರಿಸಮಾಸವನ್ನು ಗಮಕಕ್ರಿಯಾಸಮಾಸಗಳಲ್ಲಿ ಮಾಡಿರಿ; ಉಳಿದೆಡೆಗಳಲ್ಲಿ ಮಾಡಬೇಡಿರಿ'' ಎಂದು ಬೋಧಿಸಿದನು. ಹಗಲ್, ಇರುಳ್ ಎಂಬಲ್ಲಿಲ್ಲದೆ ಇತರ ವ್ಯಂಜನಾಂತ ಶಬ್ದಗಳಿಗೆ ಷಷ್ಠಿಯಲ್ಲಿ ಇನಾಗಮವು ದೋಷಕರವೆಂದು ಅಧಿಕಾರಯುಕ್ತ ವಾಣಿಯಿಂದ ಉದ್ಘೋಷಿಸಿದನು. ಸಂಜ್ಞಾ ಪ್ರಕರಣದಲ್ಲಿಯೂ, ಇತರ ಪ್ರಕರಣಗಳ ನಡುವೆಯೂ ಹೇಳಿದ ಕೆಲವು ನಿಯಮಗಳಿಂದ ಅವನ ಕಾಲದಲ್ಲಿ ವ್ಯಾಕರಣವು ಬಹಳ ಸಡಿಲಾಗಿದ್ದಿತೆಂದೂ, ಉಚ್ಚಾರಣೆ, ಸಂಧಿ, ಸಮಾಸಗಳಲ್ಲಿಯೂ ಆಗ ಬಹಳ ದೋಷಗಳು ಅವನಿಗೆ ಕಾಣುತಿದ್ದುವೆಂದೂ ಗೊತ್ತಾಗುವುದು. ಇದನ್ನೆಲ್ಲಾ ನೋಡಿ ಕೇಶಿರಾಜನಿಗೆ ಸಹನವಾಗಲಿಲ್ಲ. ಒಮ್ಮೆ ವ್ಯಾಕರಣವನ್ನು ಬಲಪಡಿಸಿದ ಪಕ್ಷದಲ್ಲಿ ಲುಪ್ತವಾಗಿದ್ದ ಭಾಷಾ ಪರಿಶುದ್ಧತೆಯು ಪುನಃ ಬರುವುದೆಂದೆಣಿಸಿ, ವ್ಯಾಕರಣ ನಿಯಮಗಳನ್ನು ಬಹಳ ಬಿಗುವಾಗಿ ಮಾಡಿದನು. ಅವನ ಪೂರ್ವದ ಮಹಾಕವಿಗಳ ಅನೇಕ ಪ್ರಯೋಗಗಳೂ ಕೇಶಿರಾಜನಿಗೆ ಸಮ್ಮತವಾಗದಿದ್ದುದೆ, ಅವನ ಕಠಿಣತೆಗೆ ಸಾಕ್ಷೀಭೂತವಾಗಿವೆ ಕೊನೆಗೆ ಅವನ ಶಾಸನಗಳು ಎಷ್ಟು ತೀವ್ರವಾದುವೆಂದರೆ, ಅವನ ನಿಯಮಗಳನ್ನನುಸರಿಸುವುದಕ್ಕೆ ಅವನಿಂದಲೇ ಸಾಧ್ಯವಾಗಲಿಲ್ಲ. ಇದಕ್ಕೊಂದು ಉದಾಹರಣೆಯನ್ನು ಇಲ್ಲಿ ಕೊಡುತ್ತೇನೆ: –

ಧಾತುಗಳವು ನಾನಾರ್ಥೋ
ಪೇತಂಗಳ್ ಲಕ್ಷ್ಯಸಿದ್ಧಿವಿಡಿದುವನರಿದ ।
ನ್ವಿತರೆ ಕ್ರಿಯಾನುಕೂಲಂ
ಮಾತೇಂ ಪೂರಿಸುಗೆ ಮತ್ತ ಮುಳಿದುವನವರೊಳ್ ॥

ಮೇಲಿನ ಪದ್ಯವನ್ನು ಪರಿಶೀಲಿಸಬಹುದು. ಅದರಲ್ಲಿ "ಪರಪದಪೂರ್ವಂದ್ವಿತ್ವಾ । ಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾ ॥ ಕ್ಷರಮಾಗೆ ಸಂಧಿದೋಷಂ'' ಎಂಬ ಅವನ ನಿಯಮಕ್ಕೇ ವಿರುದ್ಧವಾದ "ಅನ್ವಿತರೆ ಕ್ರಿಯಾಸಮಾಸಂ'' ಎಂಬ ಅಸಾಧು ಪ್ರಯೋಗವಿದೆ. 'ನಡೆದುದೆ ಮಾರ್ಗಂ ಪದವಿಡ । ಲೊಡರಿಸಿದುದೆ ಭಂಗಿ ಕೇಶವಂಗಿದಿರುಂಟೇ' ॥ ಎಂದು ಆತ್ಮವಿಕತ್ಥನಪರತೆಯನ್ನು ತೋರಿಸುವ ಕೇಶಿರಾಜನು ತಾನು ತಪ್ಪೆಂದು ಸುಟ್ಟ ಬೆರಳಿನಿಂದ ತೋರಿಸುವ ಪ್ರಯೋಗವನ್ನೆ ಉಪಯೋಗಿಸುವುದಕ್ಕೆ ಅವನಿಗೆ ಅಧಿಕಾರವಿರಲಿಲ್ಲ

ಒಂದೆಡೆಯಲ್ಲಿ ಹೇಗಾದರೂ ಪೇಚಾಟಪಟ್ಟು ಜೈನಮಾರ್ಗದ ಪ್ರತಿಷ್ಠೆಯನ್ನು ಕಾಪಾಡಬೇಕೆಂದು ವೈಯಾಕರಣ ಕೇಶಿರಾಜನು ಪ್ರಯತ್ನಿಸುತಿದ್ದಾಗ, ಇನ್ನೊಂದೆಡೆಯಲ್ಲಿ, ಅವನ ಸಮಕಾಲೀನರೆ, ಬಹುಶಃ ಅವನ ಕಣ್ಣೆದುರಿನಲ್ಲಿ ಹಳೆಯ ವ್ಯಾಕರಣಕ್ಕೆ ಸಮಾಧಿಯನ್ನು ಕೊಡುವ ಯೋಚನೆಯವರಿದ್ದರು ಷಟ್ಪದೀ ವಾಙ್ಮಯವು ಲಕ್ಷಣಬದ್ಧವಾಗಿರುವುದಿಲ್ಲೆಂಬ ಆರೋಪಣೆಯಿಂದ ಇದು ವರೆಗೆ ಅದರ ಕಡೆಗೆ ವಕ್ರದೃಷ್ಟಿಯನ್ನೆ ಬೀರುತಿದ್ದ ಜೈನರೆ ಅದರಲ್ಲಿ ಉದ್ಗ್ರಂಥಗಳನ್ನು ಬರೆಯಲಾರಂಭಿಸಿದರು. ಕುಮುದೇಂದುವು 1275ನೆ ಇಸವಿಯಲ್ಲಿ ರಾಮಾಯಣವನ್ನು ವಿವಿಧ ಷಟ್ಪದಿಗಳಿಂದ ವಿರಚಿಸಿದನು. 14ನೆಯ ಶತಮಾನದಲ್ಲಿ ಭೀಮಕವಿಯ ಬಸವ ಪುರಾಣವೂ, ಪದ್ಮಣಾಂಕನ ಪದ್ಮರಾಜ ಪುರಾಣವೂ ಉಂಟಾದವು 15ನೆಯ ಶತಮಾನದಲ್ಲಂತೂ ಷಟ್ಪದಿಯ ಮಾತಲ್ಲದೆ ಇನ್ನೊಂದೂ ಕೇಳದಂತಾಯಿತು. ಮಧುರಾದಿ ಕವಿಗಳು ಪೂರ್ವ ಪದ್ಧತಿಯನ್ನನುಸರಿಸಿ ಗ್ರಂಥ ರಚನೆಯನ್ನು ಮಾಡಿದರೂ, ಅವರ ಗ್ರಂಥಗಳ ಸ್ವಾರಸ್ಯವನ್ನು ಸವಿವವರು ಹೆಚ್ಚು ಮಂದಿ ಇದ್ದಿಲ್ಲ ಹಳೆಯ ಸಂಪ್ರದಾಯವೂ ಕರ್ಣಾಟಕದಲ್ಲಿ ಹೀಗೆ ಲುಪ್ತವಾಗಿ ಬರುತಿದ್ದ ಸಮಯಕ್ಕೆ ಇತ್ತ ವಿಜಯನಗರದದಲ್ಲಿ ಪ್ರೌಢ ದೇವರಾಜನ ಪ್ರತಾಪವು ಹೆಚ್ಚಾಗಿ ಪ್ರಕಟವಾಯಿತು. ಆ ಸಮಯದಲ್ಲಿ ಕರ್ಣಾಟಕ ವ್ಯಾಕರಣ ನಿಯಮಗಳನ್ನು ಮಣ್ಣುಗೂಡಿಸಿದ ಭಾರತಾದಿ ಗ್ರಂಥಗಳು ರಚಿತವಾದುವು. ಚಾಮರಸನ ಪ್ರಭುಲಿಂಗಲೀಲೆ, ಚಾಟು ವಿಠಲನಾಥ (ನಿತ್ಯಾತ್ಮ ಶುಕಯೋಗಿ)ಯ ಭಾಗವತ, ಲಕ್ಷ್ಮೀಶನ ಜೈಮಿನಿ ಭಾರತ, ಮೊದಲಾದ ಗ್ರಂಥಗಳು ಭಾವಿಕರ ಹೃದಯದಲ್ಲಿ ಉಚ್ಚ ಸ್ಥಾನಗಳನ್ನು ಪಡೆದುವು ಅನ್ಯಾದೃಶವಾದ ಕವಿತಾಶಕ್ತಿಯನ್ನು ಪಡೆದಿದ್ದ ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಎಷ್ಟೋ ಉದಾತ್ತ ವಿಷಯಗಳೂ, ರಸಗಳೂ, ಭಾವಗಳೂ ತುಂಬಿ ತುಳುಕುತ್ತಿರಬಹುದು. ಆದರೆ ಅದನ್ನು ಹಿಮ್ಮೆಟ್ಟಿಸಿ, ಷಟ್ಪದೀ ಕಾವ್ಯಗಳಿಂದ ಗದುಗಿನ ಭಾರತ ಜೈಮಿನಿ ಭಾರತಗಳು ಕರ್ಣಾಟಕ ಜನ ಸಮುದಾಯದ ಆದರಕ್ಕೆ ಪಾತ್ರವಾಗಿವೆ. ಕನ್ನಡದಲ್ಲಾದ ಅನೇಕ ಪರಿವರ್ತನೆಗಳ ಪರಿಣಾಮವಾಗಿ ಭಟ್ಟಾಕಳಂಕನ ಕಾಲದಲ್ಲಿ ದರ್ಪಣಕಾರನಿಗೆ ಅಸಾಧುವಾಗಿ ಕಂಡ ಅನೇಕ ಪ್ರಯೋಗಗಳು ಶುದ್ಧಿಯನ್ನು ಹೊಂದಿಕೊಂಡುವು.

ಮೇಲೆ ಹೇಳಿದ ಕರ್ಣಾಟಕ ಭಾಷೆಯ ಸಂಕ್ಷಿಪ್ತ ಇತಿಹಾಸದಿಂದ ವ್ಯಾಕರಣವು ಎಷ್ಟು ಕಷ್ಟತರವಾಗುತ್ತಾ ಬಂತೋ ಅಷ್ಟು ಭಾಷೆಯು ವ್ಯಾಕರಣ ನಿಯಮಗಳನ್ನು ಮೀರುತ್ತಾ ಬಂದಿತೆಂದು ತಿಳಿಯುವುದು. ಯಾವ ರಾಜ್ಯದಲ್ಲಿ ಶಾಸನಗಳು ಕಡಿಮೆಯೋ ಅದು ಉತ್ಕೃಷ್ಟವೆಂದು ರಾಜನೀತಿಜ್ಞರು ಹೇಳುವುದುಂಟು. ಅಥವಾ ನಿರ್ಬಂಧಕ್ಕೆ ಪ್ರತೀಪವಾಗಿ ವರ್ತಿಸುವುದು ಪ್ರಕೃತಿಯ ನಿಯಮವೇ ಆಗಿದೆ ಹೀಗೆ ಹೇಳುವುದರಿಂದ ಭಾಷೆಗೆ ವ್ಯಾಕರಣವು ಬೇಡವೆಂದು ಹೇಳಿದಂತಾಗಲಿಲ್ಲ. ವ್ಯಾಕರಣವು ಅತ್ಯವಶ್ಯವೆಂಬುದೇನೋ ನಿಜ. ಅದು ಸಂಕುಚಿತವಾಗಿದ್ದು ಸ್ವಾರಸ್ಯವನ್ನು ಕೆಡಿಸುವಂತಹದಾಗಿರಬಾರದು. ಅದು ಆದಷ್ಟು ವಿಶಾಲವಾಗಿರಬೇಕು ಸುಸಂಸ್ಕೃತ ಮನುಷ್ಯನು ಸಾಧ್ಯವಾದಲ್ಲಿ ಮಾತ್ರ ವ್ಯಾಕರಣಕ್ಕೆ ಪುರಸ್ಕಾರವನ್ನು ಕೊಡುವನು. ಅದರಿಂದ ರಸಕ್ಕೆ ಬಾಧೆಯಾಗುವಲ್ಲಿ ತನ್ನ ಸಂಸ್ಕೃತಿಯ ಬಲದಿಂದ ಹೊಸತೊಂದು ವ್ಯಾಕರಣವನ್ನು ನಿರ್ಮಿಸುವನು. ನಿಜವಾಗಿ ನೋಡಿದರೆ ಸಂಸ್ಕೃತಿಯಿಂದ ಭಿನ್ನವಾದ ವ್ಯಾಕರಣವಿಲ್ಲ. ಅಂತಹ ಸಂಸ್ಕೃತಿಯನ್ನು ಬಯ

ಸುವವರು, ವ್ಯಾಕರಣವು ಉಂಟಾಗದಿದ್ದ ಕಾಲಕ್ಕೆ ಹೋಗಿ ಆ ಸಮಯದ ಪ್ರಾಕೃತಿಕ ಸೌಂದರ್ಯವನ್ನು ಮನಗಂಡು, ಅದರಿಂದ ಪ್ರೇರಿತರಾಗಿ ಭಾಷಾಭಿವೃದ್ಧಿಗೆ ಪ್ರಯತ್ನಿಸಬೇಕು ಎಂದು ತಾತ್ಪರ್ಯವು. ಕನ್ನಡದಲ್ಲಿ ಹೊಸ ಹೊಸ ಪದ್ಧತಿಗಳನ್ನುಂಟುಮಾಡಿ ಹೆಸರ್ಗೊಂಡವರೆಲ್ಲಾ ಹಾಗೆಯೇ ಮಾಡಿರುವರು. ಒಬ್ಬ ಮನುಷ್ಯನ ಸ್ವಭಾವವನ್ನು ತಿಳಿಯಬೇಕಾದರೆ ಅವನ ಅಂಗಿ ಮುಂಡಾಸುಗಳು ಸಹಕಾರಿಗಳಲ್ಲ. ಅವನ ಆಚರಣೆ, ಹುಟ್ಟುಗುಣಗಳೆ ಕಾರಣವಾಗಿವೆ. ಅದರಂತೆ ಒಂದು ಭಾಷೆಯ ಬೆಡಗನ್ನು, ಅದರ ವ್ಯಾಕರಣದ ಪಾರಿಭಾಷಿಕ ಶಬ್ದಗಳಿಂದ ತಿಳಿದುಕೊಳ್ಳಲಾಗುವುದಿಲ್ಲ. ಅದರ ಪ್ರಕೃತಿಯಿಂದ, ಮೂಲರೂಪದಿಂದ ತಿಳಿದುಕೊಳ್ಳಬಹುದು ಸ್ವರ ವ್ಯಂಜನಗಳನ್ನು ಉಸಿರ್, ಮೆಯ್ – ಎಂದು ಕರೆಯುತಿದ್ದ ಕಾಲವು ಆಧುನಿಕ ಸುಧಾರಣೆಯ ಪ್ರಮಾಣದಿಂದ ಬಹಳ ಹಿಂದುಳಿದ ಕಾಲವಾಗಿರಬಹುದು. ಆದರೆ ವೈಶಿಷ್ಟ್ಯವನ್ನರಿವ ಲವಲವಿಕೆಯುಳ್ಳ ಮನುಷ್ಯನಿಗೆ ಆ ಸಮಯವು ಮಹತ್ವದ ಕಾಲವಾಗಿದೆ ಅವನಿಗೆ ಉಸಿರ್, ಮೆಯ್, ಎಂಬ ಶಬ್ದಗಳಲ್ಲಿ ಕಾಣುವ ಸೊಬಗು ಸ್ವರ ವ್ಯಂಜನಗಳಲ್ಲಿ ದೊರೆಯಲಾರದು ವ್ಯಂಜನವನ್ನೊಂದು ದೇಹವೆಂದೂ, ಸ್ವರವನ್ನು ಪ್ರಾಣವೆಂದೂ ಹೇಳುವುದರಲ್ಲಿ ಅಲಂಕಾರವಿದೆ; ಕವಿತೆಯಿದೆ; ಸೊಬಗಿದೆ; ನೈಸರ್ಗಿಕ ಸೌಂದರ್ಯವಿದೆ. ಅಂತಹ ಕಾಲದ ಜನರ ನಡೆನುಡಿಗಳನ್ನು ಆಚರಣೆಗಳನ್ನು ತಿಳಿದುಕೊಳ್ಳುವುದು ಮತ್ತಷ್ಟು ಸೊಗಸೆನ್ನಬೇಕು. ಹೀಗೆ ಭೂತಕಾಲಕ್ಕೂ ಭವಿಷ್ಯತ್ಕಾಲಕ್ಕೂ ಸಂದು ಹಾಕಿ ಭಾಷಾಸೇವೆಮಾಡುವುದೇ ನಿಜವಾದ ಪದ್ಧತಿಯಾಗಿದೆ. ಅದನ್ನರಿತುಕೊಳ್ಳುವವನೆ ಸಂಸ್ಕಾರವಂತನಾಗುತ್ತಾನೆ. ಇಂತಹ ವಿಮರ್ಶಕ ಬುದ್ಧಿಯಿಲ್ಲದೆ ವ್ಯಾಕರಣ ಪೂಜೆಯನ್ನು ಮಾಡುವವನಲ್ಲಿ ಸ್ವಾವಲಂಬನವಿರುವುದಿಲ್ಲ. ಇಂಥವರೇ ಬಹುಮಂದಿಯಾದಾಗ ಇವರ ಭಾಷೆಯು ಮೃತಪ್ರಾಯವಾಗುತ್ತದೆ. ಅದರಲ್ಲಿ ಜೀವನದ ಲಕ್ಷಣಗಳು ಗೋಚರಿಸುವುದಿಲ್ಲ.

ಮೇಲೆ ಕೊಟ್ಟ ಉದಾಹರಣೆಗಳಿಂದ ಇಷ್ಟು ವಿಷಯಗಳು ಸಿದ್ಧವಾಗುತ್ತವೆ: – (1) ಸುಸಂಸ್ಕೃತ ವ್ಯಕ್ತಿಗಳೆ ಆದಿಯಲ್ಲಿ ಕನ್ನಡ ಭಾಷೆಗೆ ರೂಪವನ್ನು ಕೊಟ್ಟರು. (2) ವೈಯಾಕರಣರು ಪಂಪಾದಿಗಳಷ್ಟು ಸಂಸ್ಕಾರ ಹೊಂದಿದವರಾಗಿರಲಿಲ್ಲ; ಆದುದರಿಂದ ಅವರ ಕೆಲವು ಪ್ರಯೋಗಗಳು ವೈಯಾಕರಣರಿಗೆ ಸಮ್ಮತವಾಗಲಿಲ್ಲ. (3) ವೈಯಾಕರಣರು ನಿರ್ದಯರಾಗಿ ಭಾಷಾ ವಿಸ್ತಾರಣೆಯನ್ನು ತಡೆಯುವುದಕ್ಕೆ ಯತ್ನಿಸಿದಾಗ ಸಂಸ್ಕೃತರಾದವರು ಮುಂದೆ ಬಂದು ಅವರ ನಿಯಮಗಳನ್ನು ಮುರಿದರು. (4) ತಂತಮ್ಮ ಕಾಲದಲ್ಲಿ ಅವರಿಗೆ ಹೆಚ್ಚಿನ ಪ್ರೋತ್ಸಾಹವು ದೊರೆಯದಿದ್ದರೂ ಬರಬರುತ್ತಾ ಅವರ ಪಂಥವೇ ರೂಢವಾಯಿತು ಅದರಿಂದಲೆ ಅನೇಕ ವ್ಯಾಕರಣಗಳಾದುವು; (5) ಆದುದರಿಂದ ಸಂಸ್ಕೃತಿಯೆ ಮುಖ್ಯ ವ್ಯಾಕರಣವಲ್ಲ.

ಕರ್ಣಾಟಕದ ಪ್ರಕೃತ ಸ್ಥಿತಿಯು ಅರಾಜಕವಾಗಿದೆ; ಶೋಚನೀಯವಾಗಿದೆ: ಆಯುರ್ವೇದ ಶಾಸ್ತ್ರಜ್ಞರು ಎಲ್ಲಾ ರೋಗಗಳೂ ತ್ರಿದೋಷದಿಂದಾಗುತ್ತವೆ ಎಂದು ಹೇಳುತ್ತಾರೆ. ಕರ್ಣಾಟಕದಲ್ಲೀಗ ಕಾಣುತ್ತಿರುವ ಜಾಡ್ಯಕ್ಕೆ ನಾನು ಒಂದೇ ಒಂದು ದೋಷವು ಕಾರಣಭೂತವೆಂದು ಎಣಿಸುತ್ತೇನೆ. ಅದಾವುದೆಂದರೆ ಸಂಸ್ಕೃತಿಯ ಅಭಾವ. ಭಾಷೆಯನ್ನು ಅಭಿವೃದ್ಧಿಪಡಿಸುವುದಕ್ಕೆ ವ್ಯಾಕರಣವನ್ನು ಆರಾಧಿಸಿದರೆ ಪ್ರಯೋಜನವಿಲ್ಲ. ಅಥವಾ ಮನಸ್ಸು ಬಂದೆಡೆಗೆ ಹಾರಾಡಿದರೂ ಫಲವಿಲ್ಲ. ಸಂಸ್ಕೃತಿಯನ್ನು ಹೊಂದದ ಹೊರತು ಭಾಷಾಭಿವೃದ್ಧಿಯಾಗಲಾರದು. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು: —

ಕೆಲಜನ ಮಂಗಳೂರ ಲೇಖಕರು ಹೊಸಗನ್ನಡದಲ್ಲಿ 'ಹೊಕ್ಕಿದನು' ಎಂಬ ಪ್ರಯೋಗವನ್ನು ಮಾಡುವ ರೂಢಿಯುಂಟು. ನಿಜವಾಗಿಯೂ ಕನ್ನಡಿಗನಾದವನಿಗೆ 'ಹೊಕ್ಕಿದನು' ಎಂಬ ಶಬ್ದವು ಕಿವಿಗೆ ಅಸಹ್ಯತೆಯನ್ನುಂಟುಮಾಡುತ್ತದೆ. ವ್ಯಾಕರಣದ ಪ್ರಕಾರ ಅದರ ಉತ್ಪತ್ತಿಯು ಹೀಗಾಗುತ್ತದೆ. ಹೊಗು ಎಂಬ ಧಾತುವಿಗೆ ಭೂತಕಾಲದಲ್ಲಿ ದ ಎಂಬ ವಿಕರಣವು ಸೇರುವಾಗ, ದಕಾರಕ್ಕೆ 'ಕ' ವೆಂಬ ಆದೇಶವು ಬಂದು, ದಕಾರವು ಅದರಲ್ಲಿ ಲೀನವಾಗಿ ಹೋಗಿ, ಅದರ ರೂಪವು ಹೊಕ್ಕ ಎಂದಾಗುವುದು. ಅದಕ್ಕೆ ಪುಲ್ಲಿಂಗ ಸೂಚಕವಾದ ಅಂಪ್ರತ್ಯಯವು ಸೇರಿ, ಪೊಕ್ಕಂ ಎಂದು ರೂಪ ನಿಷ್ಪತ್ತಿಯಾಗುವುದು. ಅದೇ ಹೊಸಗನ್ನಡದಲ್ಲಿ ಹೊಕ್ಕನು ಎಂಬ ರೂಪವನ್ನು ಪಡೆಯುವುದು. ಕನ್ನಡದ ವಾತಾವರಣದಲ್ಲಿ ಬಳೆದ ಚಿಕ್ಕ ಮಗುವಾದರೂ ಹೊಕ್ಕನು ಎಂದು ಶುದ್ಧವಾದ ಪ್ರಯೋಗವನ್ನೆ ಮಾಡುವಾಗ ಹೆಸರಾದ ಲೇಖಕರೇಕೆ ಅಶುದ್ಧ ಪ್ರಯೋಗವನ್ನು ಮಾಡಬೇಕು? ಎಂದು ಪ್ರಶ್ನಿಸಿದರೆ ಸಂಸ್ಕೃತಿಯ ಅಭಾವದಿಂದಲೆ ಹೀಗಾಯಿತೆಂದು ಹೇಳಬೇಕಾಗುವುದು. ಅಸಂಸ್ಕೃತರೆಂದರೆ ಆ ಲೇಖಕರು ಪಾಮರರೆಂದು ನನ್ನ ಅಭಿಪ್ರಾಯವಲ್ಲ. ಅವರ ಜ್ಞಾನ ಭಂಡಾರವು ಅತಿ ವಿಸ್ತಾರವಾಗಿರಬಹುದು. ಅವರ ಲೇಖನ ಸಾಮರ್ಥ್ಯವು ಅಸದೃಶ್ಯವಾಗಿರಬಹುದು. ಆದರೆ ಯಾವುದರ ಬಲದಿಂದ ಅವರು ಅಚ್ಚಗನ್ನಡಿಗರೆಂಬ ಹೆಸರಿಗೆ ಅರ್ಹರಾಗುವರೋ, ಅಂತಹ ಕರ್ಣಾಟಕ ವಾಙ್ಮಯದ ಸಂಸ್ಕಾರ ಮುದ್ರೆಯು ಅವರಿಗೆ ಸಿಕ್ಕಲಿಲ್ಲವೆಂದು ಖಂಡಿತವಾಗಿಯೂ ಹೇಳಬಹುದು ಕನ್ನಡಿಗತನವೆಂಬುದು ರಕ್ತದ ಪರಮಾಣುವಿನಲ್ಲಿ ಸೇರಿ ಒಬ್ಬನ ಮನಸ್ಸೂ ಮಾತೂ ಕ್ರಿಯೆಯೂ ಕನ್ನಡವಾಗುವಾಗ ಮಾತ್ರ ಅವನು ಸಂಸ್ಕೃತನೆನ್ನಿಸಿಕೊಳ್ಳುವನು. ಅಂತಹ ಮಾರ್ಪಾಡು ಅವರಲ್ಲಿ ಆಗಲಿಲ್ಲ. ಅದರಂತೆ ಕಿತ್ತಿ, ಹಾರೆಕಲ್ಲು (ಪಾರೆ— ಎಂಬುದು ತುಳು ಶಬ್ದ); ಮರಕ್ಕೆ ಹಣ್ಣಾಯಿತು; ನಿದ್ದೆಗಣ್ಣನು ಕೀಳು; ಬಣ್ಣಂಗಾಯಿ (ತುಳು) ಗೆಲ್ಲು (ತುಳು–ರೆಂಬೆಯೆಂದರ್ಥ); ಪುಳ್ಳಿ (ತುಳು–ಮೊಮ್ಮಗ ಎಂದರ್ಥ) ಮೊದಲಾದ ಅಸಾಧು ಶಬ್ದ ಪ್ರಯೋಗಗಳು ದಕ್ಷಿಣಕನ್ನಡದ ಕರ್ಣಾಟಕ ವಾಙ್ಮಯದಲ್ಲಿ ಕಾಣಬರುತ್ತವೆ. ಆಡುವಾಗ ದಿನಂಪ್ರತಿ ಉಪಯೋಗಿಸುವ ಸಣ್ಣ ಪುಟ್ಟ ಶಬ್ದಗಳ ಔಚಿತ್ಯ. ಅನೌಚಿತ್ಯಗಳನ್ನು ತಿಳಿದುಕೊಳ್ಳುವುದಕ್ಕೆ

ಪಾಣಿನಿಯಷ್ಟು ವ್ಯಾಕರಣ ಪಾಂಡಿತ್ಯವು ಬೇಕಾಗಿಲ್ಲ. ಕನ್ನಡ ತಾಯಿ ಜೋಗುಳವನ್ನು ಕೇಳಿ ಬೆಳೆದ ಪ್ರತಿಯೊಬ್ಬನಿಗೂ ಅಶಿಕ್ಷತವಾಗಿ ತಿಳಿವ ವಿಷಯವಿದು. 'ಸಮ' ಎಂಬ ಶಬ್ದದ ಭಾವವು ಸಾಮ್ಯವೆಂದೂ, ಆ ಭಾವಕ್ಕೆ ಪುನಃ ಭಾವ ಪ್ರಯತ್ನವನ್ನು ಸೇರಿಸಿ ಸಾಮ್ಯತೆಯೆಂದು ಹೇಳುವುದು ದುಷ್ಟ ಪ್ರಯೋಗವೆಂಬ ಪರಿಜ್ಞಾನಕ್ಕೆ ವ್ಯಾಕರಣವು ಬೇಕಾಗಿಲ್ಲ. ಅದರಂತೆ ಪ್ರಾಮುಖ್ಯತೆ, ವೈಷಮ್ಯತೆ, ಐಕ್ಯತೆ, ಸಾಮಾನ್ಯತೆ ಮೊದಲಾದ ಸಂಸ್ಕೃತ ಶಬ್ದಗಳ ಅಸಾಧುತ್ವವನ್ನು ತಿಳಿದುಕೊಳ್ಳಬಹುದು ಈ ಸಂದರ್ಭದಲ್ಲಿ ಕೆಳಗಿನದೊಂದು ಪ್ರಯೋಗದ ವಿಷಯವಾಗಿ ಪ್ರಸ್ತಾಪವೆತ್ತಿದರೆ, ಅಸಮಂಜಸವಾಗಲಾರದು. ಲೇಖಕರೊಬ್ಬರು ಒಂದು ಪದ್ಯರಸವತ್ತವನ್ನು ಕೊಂಡಾಡುವಾಗ "ಈ ಪದ್ಯವು ರಸಿಕವಾಗಿಲ್ಲವೇ?' ಎಂದು ಕೇಳುತ್ತಾರೆ. ನಾವು ಆಡುಮಾತಿನಲ್ಲಿ 'ಈ ಮನುಷ್ಯ ರಸಿಕ; ಆಮನುಷ್ಯರಸಿಕ' ಎಂದು ಹೇಳುತ್ತೇವೆ ಆಗ ಆಯಾ ಮನುಷ್ಯರು ರಸಾಸ್ವಾದನ ಸಮರ್ಥರೆಂದು ನಮ್ಮ ಅಭಿಪ್ರಾಯ. ಅದೇ 'ಇಕ' ಪ್ರತ್ಯಯವನ್ನು ಪದ್ಯದ ವಿಷಯದಲ್ಲಿಯೂ ಉಪಯೋಗಿಸಿದರೆ, 'ಪದ್ಯವು ರಸವತ್ತಾಗಿದೆ' ಎಂದಿರಬೇಕಾದ ಅರ್ಥವು, "ಪದ್ಯಕ್ಕೆ ರಸವನ್ನು ತಿಳಿವ ಶಕ್ತಿಯುಂಟು" ಎಂದು ವ್ಯತ್ಯಸ್ತವಾಗುವುದು

ಮೇಲೆ ಹೇಳಿದ ದೋಷಗಳಿಗೆ ಬಹುಮಟ್ಟಿಗೆ ಆಯಾ ಸ್ಥಳಗಳಲ್ಲಿರುವ ಅನ್ಯ ಭಾಷೆಗಳ ಪ್ರಾಬಲ್ಯವು ಕಾರಣಭೂತವೆನ್ನುವುದರಲ್ಲಿ ಸಂದೇಹವಿಲ್ಲ. ದಕ್ಷಿಣಕನ್ನಡದಲ್ಲಿ ತುಳು ಮಲೆಯಾಳಗಳ ಸಂಪರ್ಕದಿಂದಲೂ, ಧಾರವಾಡದಲ್ಲಿ ಮರಾಠಿಯ ಸಂಮಿಶ್ರಣದಿಂದಲೂ ಮೈಸೂರಲ್ಲಿ ತಮಿಳು, ತೆಲುಗಗಳ ಸನ್ನಿಕರ್ಷದಿಂದಲೂ, ಆಯಾ ಪ್ರಾಂತದ ಭಾಷೆಗಳಲ್ಲಿ ಕೆಲವು ವೈಶಿಷ್ಟ್ಯಗಳು ಬೆಳೆದಿರುತ್ತವೆ. ಹೀಗಾಗಿ ಒಂದು ಪ್ರಾಂತದವರು ಇನ್ನೊಂದು ಪ್ರಾಂತದವರನ್ನು ಬೀಳುಗೆಡುವುದು ನಮ್ಮಲ್ಲಿ ರೂಢವಾಗಿದೆ ಮಹಾರಾಷ್ಟ್ರದ ಮಹಾಪ್ರಾಣಗಳೂ, ಹಲ ಕೆಲವು ವಾಕ್ಪ್ರಚಾರಗಳೂ ಧಾರವಾಡದ ಭಾಷೆಯಲ್ಲಿ ಸೇರಿರುವುದರಿಂದ ಅವರ ಭಾಷೆಯು ಒರಟಾಗಿ ಇತರ ಪ್ರಾಂತದವರಿಗೆ ಕಾಣುವುದು. ಮೈಸೂರು, ಮಂಗಳೂರ ಭಾಷೆಗಳಲ್ಲಿ ಹೆಚ್ಚು ಅಲ್ಪ ಪ್ರಾಣಗಳೆ ಉಪಯುಕ್ತವಾಗುವುದರಿಂದಲೂ, ಕೆಲವು ತೆಲುಗು, ತಮಿಳು, ತುಳುಗಳ ಶಬ್ದಗಳು ಸೇರಿರುವುದರಿಂದಲೂ, ಅಲ್ಲಿಯ ಭಾಷೆಯು ಉತ್ತರದವರಿಗೆ ನಿರ್ಜೀವವೆಂದು ತೋರುವುದು. ಒಂದರಲ್ಲಿ ಓಜೋಗುಣವೆ ಅಧಿಕವಾಗಿಯೂ ಇನ್ನೊಂದರಲ್ಲಿ ಮಾಧುರ್ಯಗುಣವು ವಿಶೇಷವಾಗಿಯೂ ಇದ್ದರೆ ಒಂದರ ಸೊಬಗು ಹೆಚ್ಚಾಯಿತು, ಇನ್ನೊಂದರದು ಕಡಿಮೆಯಾಯಿತು, ಎಂದು ಹೇಳುವುದಕ್ಕೆ ಆಧಾರ ಸಾಲದು. ಆದರೆ ಲೇಖನ ಕ್ರಮದಲ್ಲಿಯೂ ಉಚ್ಚಾರಣೆಯಲ್ಲಿಯೂ ನಾವು ಅನ್ಯರ ಅನುಕಾರವನ್ನು ಮಾಡುವುದಿದ್ದರೆ, ಅಲ್ಲಿ ನಮ್ಮ ವೈಶಿಷ್ಟ್ಯಕ್ಕೆ ಲೋಪಬರುವುದರಿಂದ ಅಂತಹ ಪ್ರವೃತ್ತಿಯನ್ನು ತಡೆಯಬೇಕು. ಚಕಾರವನ್ನು 'ತ್ಸ'ವೆಂದು ಉಚ್ಚರಿಸುವುದೂ, ವರ್ಣಗಳನ್ನೆಲ್ಲಾ ಅರ್ಧಾಕ್ಷರದಂತೆ ಉಚ್ಚರಿಸುವುದೂ ಕನ್ನಡಿಗತನದ ಲಕ್ಷಣವಲ್ಲ ಇಂತಹ ದೋಷಗಳು ಅವಶ್ಯವಾಗಿ ವರ್ಜನೀಯವಾಗಿವೆ.

ಆದರೆ ಕೆಲವೊಮ್ಮೆ ಪದ್ಧತಿಗಳಲ್ಲಿ ವೈಷಮ್ಯವು ಬರುವುದುಂಟು. ಅಂತಹ ವಿಷಮತೆಗಳು ಕರ್ನಾಟಕ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಬಹಳವಾಗಿವೆ. ಅವುಗಳಲ್ಲಿ ವ್ಯಂಜನಾಂತ ಶಬ್ದಗಳ ಪ್ರಯೋಗ ಪದ್ಧತಿಯನ್ನು ಮಾತ್ರ ನೋಡೋಣ. ಮಂಗಳೂರು ಮೈಸೂರುಗಳಲ್ಲಿ ವ್ಯಂಜನಾಂತವಾಗಿ ಉಪಯೋಗಿಸಲ್ಪಡುತ್ತಿದ್ದ ಶಬ್ದಗಳಿಗೆಲ್ಲಾ ಉಕಾರವನ್ನು ಸೇರಿಸುವುದು ರೂಢಿ, ಧಾರವಾಡದಲ್ಲಿ ಅಕಾರವನ್ನು ಸೇರಿಸುವುದು ಆಧುನಿಕ ಪದ್ಧತಿ. ಹೀಗಾಗಿ, ಮಂಗಳೂರು ಮೈಸೂರುಗಳ ಬಾಗಿಲು ಕೂದಲು, ಹೊಸ್ತಿಲು, ಮುಗ್ಗಿಲು ಮೊದಲಾದ ಶಬ್ದಗಳು ಉತ್ತರದಲ್ಲಿ ಬಾಗಿಲ ಕೂದಲ, ಹೊಸ್ತಿಲ, ಮುಗ್ಗಿಲ ಎಂಬ ರೂಪವನ್ನು ಪಡೆಯುತ್ತವೆ. ಬಾಗಿಲ್ ಎಂಬ ವ್ಯಂಜನಾಂತ ಶಬ್ದವು ಬಾಗಿಲು ಎಂದೇಕಾಗಬೇಕು, ಬಾಗಿಲ ಎಂದು ಏಕೆ ಆಗಬಾರದು? ಎಂಬೀ ವಿಷಯವನ್ನು ವ್ಯಾಕಣವು ಸರಿಯಾಗಿ ನಿಷ್ಕರ್ಷಿಸಲಾರದು. ಇಂತಹ ಸಂದರ್ಭದಲ್ಲಿ ನಮ್ಮದು ಸರಿ; ನಿಮ್ಮದು ತಪ್ಪು ಎಂದು ಒಬ್ಬರನ್ನೊಬ್ಬರು ಖಂಡನೆ ಮಾಡುವುದರ ಬದಲಾಗಿ, ಲೋಕದಲ್ಲಿ ಅಭಿರುಚಿಗಳೂ ಪದ್ಧತಿಗಳೂ ಭಿನ್ನವಾಗಿರುವುವೆಂದೂ, ತಮ್ಮಷ್ಟೆ ಬುದ್ಧಿ ಶಕ್ತಿಯು ಇನ್ನೊಬ್ಬರಲ್ಲಿ ಇರುವುದೆಂದೂ ಎಣಿಸಿ ತಟಸ್ಥರಾಗಿರುವುದೇ ಯೋಗ್ಯ. ಉತ್ತರದ ಕಿವಿಗೆ 'ಬಾಗಿಲ' ವೇ ಇಂಪಾಗಿರಬಹುದು ದಕ್ಷಿಣ ದೇಶಕ್ಕದು ಒರಟಾಗಿ ಕಾಣಿಸಬಹುದು. ಇದು ಅಭಿರುಚಿಗಳ ಭಿನ್ನತೆ. ಒಂದು ನಾಡಿನವರು ಅನೇಕ ಶತಮಾನಗಳಿಂದ ಸ್ವೀಕರಿಸಿ, ಅವರ ರಕ್ತದಲ್ಲಿ ಲೀನವಾದ ಪದ್ಧತಿಯು ಸಂಸ್ಕಾರವನ್ನು ತಪ್ಪೆಂದು ಇನ್ನೊಂದು ಸಂಪ್ರದಾಯದವರು ಹೇಳುವುದು ಯೋಗ್ಯವಲ್ಲ. ಕರ್ನಾಟಕದಲ್ಲಿ ಇಂತಹ ಸರಿಯಾದ, ವ್ಯಕ್ತವಾದ ವೈಶಿಷ್ಟ್ಯಗಳುಳ್ಳ ಮೂರು ಭಾಷಾಪದ್ಧತಿಗಳಿವೆ. ಸೂಕ್ಷ್ಮವಾಗಿ ಪರಿಶೀಲನೆಮಾಡಿದರೆ, ಅವುಗಳ ಹಿಂದೆ ಮೂರು ವಿಶಿಷ್ಟ ಸಂಸ್ಕೃತಿಗಳಿವೆಯೆಂದರೂ ತಪ್ಪಾಗದು. ನೃಪತುಂಗನಕಾಲದಲ್ಲಿಯೂ ಇಂತಹ ಭೇದಗಳಿದ್ದಂತೆ ತೋರುತ್ತದೆ. ಆದುದರಿಂದಲೆ ಅವನು ದಕ್ಷಿಣೋತ್ತರ ಮಾರ್ಗಗಳ ವೈಶಿಷ್ಟ್ಯಗಳನ್ನು ಹೇಳುವುದಕ್ಕೆ ಕಾರಣವಾಯಿತು ಈ ಭೇದಗಳನ್ನು ಕಡಿಮೆ ಮಾಡುವುದಕ್ಕೆ ಪರಸ್ಪರ ಸಂಪರ್ಕವೇ ಸಾಧನಭೂತವಲ್ಲದೆ ಛಿದ್ರಾನ್ವೇಷಣವು ಹೇತುವಲ್ಲವೆಂಬುದನ್ನು ನಾವು ಮರೆಯಬಾರದು.

ಸಂಸ್ಕೃತಿಯಿಂದ ಭಾಷೆಯುಂಟಾಗುವುದೆಂದು ಹೇಳಿದ ಮೇಲೆ, ಆ ಭಾಷೆಯು ಸ್ವಾಭಾವಿಕವಾಗಿರುವುದು, ಜೀವನದ ಪ್ರತಿಬಿಂಬವಾಗಿರುವುದು ಎಂದು ಹೇಳುವುದು ಪುನರುಕ್ತವೇ ಸರಿ ಆದುದರಿಂದ ಭಾಷಾ ಸಂಸ್ಕರಣಮಾಡಲು ಪ್ರಯತ್ನಿಸುವವರು ಮೊದಲು ಹೃದಯ ಸಂಸ್ಕರಣಮಾಡುವುದು ಅವಶ್ಯವಾಗಿದೆ. ಮನಸ್ಸಿಗೂ ಮಾತಿಗೂ ಅಂತರಿಕ ಸಂಬಂಧವಿರು

ವಾಗ ಮಾತ್ರ ಬಾಯಿಂದ ಹೊರಹೊಮ್ಮುವ ಭಾಷೆಯಲ್ಲಿ ಸ್ವಾರಸ್ಯವಿರುವುದು; ಅಂದವಿರುವುದು. ಅಂತಹ ಲೇಖಕರ ಶಬ್ದಪ್ರಯೋಗದಲ್ಲಾದರೂ ದೋಷಗಳಿರಲಾರವು ಇದನ್ನು ಸಿದ್ಧಾಂತಪಡಿಸುವುದಕ್ಕೆ, ಒಬ್ಬನು ರಸಾಸ್ವಾದನ ಸಮರ್ಥನೆಂದೆಣಿಸುವ. ಅವನ ಸತ್ವದಲ್ಲಿ ಮಾಡುತ್ತಿರುವ ರಸಗಳು ಕಾವ್ಯರೂಪವನು ಹೊಂದುತ್ತವೆ ಎಂದೆಣಿಸುವ . ಆಗ ಅವನು ಆಯಾ ರಸಭಾವನೆಗಳಿಗೆ ಸರಿಯಾದ ಶಬ್ದಪ್ರಯೋಗಗಳನ್ನು ಮಾಡುವನು. ಶೃಂಗಾರರಸಕ್ಕೆ ಮಧುರ ಸುಕುಮಾರಾಕ್ಷರಗಳೆ ಯುಕ್ತವೆಂದು ಅವನ ಮನಸ್ಸೆ ತಿಳಿಸುವುದು. ಇಂತಹ ಕವಿ ಪ್ರಯೋಗಗಳನ್ನು ನೋಡಿಕೊಂಡೆ, ರಸಜ್ಞರು, ಇಂತಹ ರಸಕ್ಕೆ ಇಂತಹ ವೃತ್ತಿ, ಇಂತಹ ರೀತಿಯೊಂದು ಪೃಥಕ್ಕರಣೆ ಮಾಡಿದರು ರೌದ್ರ, ಭೀಭತ್ಸ ರಸಗಳನ್ನು ಪರಿಪೋಷಣೆ ಮಾಡುವಲ್ಲಿ ಆರಭಟೀ ವೃತ್ತಿಯೆ ಆಶ್ರಿತವಾಗಬೇಕೆಂದು ಓಜಸ್ಸೆ ಮೊದಲಾದ ಗುಣಗಳು ಇರಬೇಕೆಂದೂ ಹೇಳುವುದಕ್ಕೆ ರಸಿಕನಾದವನಿಗೆ ಯಾವ ಕಷ್ಟವೂ ಇಲ್ಲ. ಅದು ಅವನಿಗೆ ಸ್ವಭಾವವಾಗಿ ಪರಿಣಮಿಸುವುದು. ಆದುದರಿಂದ ಅವನ ಕಾವ್ಯದಲ್ಲಿ ಯಾವ ದೋಷಗಳೂ ಇರಲಾರವು

ಅವನ ಕಾವ್ಯವಾದರೂ ಸ್ವಾಭಾವಿಕವಾಗಿರುವುದೆನ್ನುವುದರಲ್ಲಿ ಸಂದೇಹವಿಲ್ಲ. ಅವನು ದಕ್ಷಿಣಕನ್ನಡದ ಒಂದು ಭಾಗದಲ್ಲಿ ಕುಳಿತು ಸಹಾರ ಮರುಭೂಮಿಯ ವಿಷಯವಾಗಿ ಪದ್ಯಗಳನ್ನು ರಚಿಸಲಾರನು. ಏಕೆಂದರೆ ಅಂಥವನ ಪ್ರತಿಯೊಂದು ಕೃತಿಗೂ, ಹೃದಯದ ಪ್ರೇರಣೆಬೇಕು. ಸಹಾರ ಮರುಭೂಮಿಯನ್ನು ಅವನು ನೋಡಲಿಲ್ಲ. ಆದುದರಿಂದ ಅದರ ವಿಷಯಕವಾದ ಭಾವನೆಗಳಿಂದ ಅವನಾಹೃದಯವು ಪರಿಪ್ಲುತವಾಗುವುದಿಲ್ಲ ಆದರೆ ತನ್ನ ಸುತ್ತುಮುತ್ತಲಿನ ಮರಗಳು, ಗಿಡಗಳು, ಬಳ್ಳಿಗಳು, ಹೊಲಗಳು, ಗದ್ದೆಗಳು, ಮೊದಲಾದುವು ಅವನು ದಿನಂಪ್ರತಿ ನೋಡಿ ಕೊಂಡಾಡಿದ ವಿಷಯಗಳಾದುದರಿಂದ, ಅವುಗಳು ಅವನ ಹೃದಯ ತಂತ್ರಿಯನ್ನು ಅಲ್ಲಾಡಿಸಬಲ್ಲುವು ಹೃದಯದಲ್ಲಾದ ಅವಸ್ಥಾಭೇದದ ಪ್ರತಿಬಿಂಬವೆ ಭಾಷೆಯಲ್ಲಿ ಬಿಂಬಿತವಾಗುವುದರಿಂದ. ಅವನ ಕವಿತೆಯೂ ಲೇಖನಗಳೂ ಸ್ವಭಾವಿಕವಾಗದೆ ನಿರ್ವಾಹವಿಲ್ಲ. ತಾನು ನೋಡದ, ಕೇಳದ, ತನ್ನದಲ್ಲದವುಗಳನ್ನು ಅಪಹರಿಸಿಕೊಂಡು, ಅವುಗಳ ಮೇಲೆ ಶಬ್ದಗಳನ್ನು ಹಾಳುಮಾಡುವುದೇ ಕವಿತೆಯಲ್ಲಿ ಚೌರ್ಯವೆಂಬ ಹೆಸರನ್ನು ಪಡೆವುದು ಅಂತಹ ಕವಿತೆಗೆ ಅನುಭವದ-ಸಂಸ್ಕಾರದ ಬೆಂಬಲವಿಲ್ಲದಿರುವುದರಿಂದ ಅದು ಅಸ್ವಾಭಾವಿಕವಾಗಿರುವುದು ಮಿಥ್ಯೆಯಾಗಿರುವುದು

ಆದುದರಿಂದ, ಈಗ ಹೊಸಗನ್ನಡದ ಲೇಖಕರು ಮೊದಲು ಕನ್ನಡಿಗರಾಗಲು ಯತ್ನಿಸುವುದು ಅವರ ಆದ್ಯ ಕರ್ತವ್ಯವಿದೆ. ಆ ಮೇಲೆ ಆಡುಮಾತಿನಲ್ಲಿ ಬರೆಯಬೇಕೋ? ವ್ಯಾಕರಣಬದ್ಧವಾಗಿ ಬರೆಯಬೇಕೋ ? ಎಂಬ ಪ್ರಶ್ನೆಗೆ ಉತ್ತರ ಸಿಕ್ಕುವುದು. ಒಂದಾನೊಂದು ಕಾಲದಲ್ಲಿ ಆಡುತ್ತಿದ್ದ ಭಾಷೆಯೆ ಗ್ರಂಥಸ್ಥವಾಯಿತೆಂಬುದನ್ನು ಮರೆಯಬಾರದು.

ಈ ಎರಡರ ಬಾಹ್ಯ ಸ್ವರೂಪದಲ್ಲಿ ಅಲ್ಪ ಸ್ವಲ್ಪ ಭಿನ್ನತೆಗಳಿದ್ದರೂ, ತತ್ವದಲ್ಲಿ, ರಚನೆಯಲ್ಲಿ ಭೇಧಗಳಿರಲಿಲ್ಲ. ಈಗ ನಮ್ಮಲ್ಲಿ ಕನ್ನಡಿಗತನವೇ ಲುಪ್ತವಾಗಿರುವುದರಿಂದ ಭಾಷಾ ವಿಷಯದಲ್ಲಿ ಕ್ಷುದ್ರ ಮತಭೇದಗಳು ಮೊಳೆದೋರುತ್ತವೆ ಮೊದಲು ಕನ್ನಡಿಗರಾಗಿ ಮತ್ತೆ ಬರೆಯಲು ಆರಂಭಿಸಿದರೆ ಭಾಷಾಸ್ವರೂಪದಲ್ಲಿ! ವಿಷಮತೆಯುಂಟಾಗಲು ಆಸ್ಪದವಿಲ್ಲ. ಅನ್ಯ ಭಾಷೆಗಳು ನಮ್ಮ ವೈಶಿಷ್ಟ್ಯವನ್ನು ಅಳಿಸಿಬಿಡಬಹುದೆಂಬ ಹೆದರಿಕೆಯೂ ಇಲ್ಲ. ಸಂಸ್ಕೃತನಾದ ಮನುಷ್ಯನ ಹೃದಯವೆಂಬ ಉತ್ತರಮುಖಿಯು ಎಲ್ಲಿದ್ದರೂ ತನ್ನ ವೈಶಿಷ್ಟ್ಯವನ್ನೆ ತೋರಿಸುವುದು. ವೈಶಿಷ್ಟ್ಯವನ್ನು ಕಾಯ್ದುಕೊಳ್ಳುವುದೆ ಅದರ ಸ್ವಭಾವವಾಗುತ್ತದೆ. ಪ್ರಕೃತಿ ನಿಯಮವೂ ಹೀಗೆಯೆ. ಮಾವಿನ ಮರದಲ್ಲಿ ಹಲಸಿನ ಹಣ್ಣುಗಳೂ, ಹಲಸಿನಲ್ಲಿ ಬಾಳೆ ಹಣ್ಣುಗಳೂ ಹೇಗೆ ಬೆಳೆಯುವುದಿಲ್ಲವೋ ಅದರಂತೆ ವಿಶಿಷ್ಟವಾದ ಒಂದು ಸಂಸ್ಕೃತಿಯ ವಾತಾವರಣದಲ್ಲಿ ವಿರೂಪವಾದ ಅಪಾರ ಸಂಸ್ಕಾರವು ಆಧಿಪತ್ಯವನ್ನು ತೋರಿಸಲಾರದು

ಇನ್ನು ವಾಙ್ಮಯದ ಬಾಹ್ಯರೂಪವಾದ ಭಾಷೆಯನ್ನು ವಿಸ್ತಾರಗೊಳಿಸುವುದಕ್ಕೆ ಹೆಚ್ಚು ಕಷ್ಟವಿಲ್ಲ. ಒಂದು ಜನ ಸಮುದಾಯಕ್ಕೆ ಅಪರಿಚಿತವಾದ ವಿಷಯವು ಇನ್ನೊಂದಕ್ಕೆ ತಿಳಿದಿರುವುದು ಆಗ ಪರಸ್ಪರ ಜ್ಞಾನ ಭಾಂಡಾರವನ್ನು ಅಭಿವೃದ್ಧಿಗೊಳಿಸುವುದಕ್ಕೆ ಜ್ಞಾನವಿನಿಮಯವು ಅವಶ್ಯವಾಗಿದೆ ಮನುಷ್ಯನು ಹೇಗೋ ಹಾಗೆ ಭಾಷೆಯೂ ಒಂದು ಇನ್ನೊಂದರಿಂದ ದೂರವಾಗಿ ಏಕಾಂತವಾಗಿರುವುದು ಅಸಾಧ್ಯವೇ ಸರಿ. ಸಾಧ್ಯವಿದ್ದರೂ ಅದು ಅಪೇಕ್ಷಣೀಯವಲ್ಲ. ಸಂಸ್ಕೃತಿಯ ಹಾಗೂ ಜ್ಞಾನದ ವಿನಿಮಯವು ವಿಶ್ವಕುಟುಂಬದ ಉನ್ನತಿಗೆ ಅಗತ್ಯವಾಗಿದೆ. ಲೋಕವು ಇದರಿಂದಲೆ ನಡೆಯುವುದೆಂದರೂ ತಪ್ಪಾಗದು. ಭಿನ್ನ ಜನಾಂಗಗಳ ಇಂತಹ ನಿಕಟ ಸಂಬಂಧದಿಂದ ಸಂಸ್ಕೃತಿಯು ಬದಲಾಗುವುದೂ ಉಂಟು. ಅದರಿಂದ ಜೀವನಕ್ರಮವೂ ಭಾಷೆಯೂ ವ್ಯತ್ಯಾಸಹೊಂದುವುದು. ಈ ರೀತಿಯ ಬೆಳವಣಿಗೆಯು ಅನಿವಾರ್ಯವೆಂದೇ ಹೇಳಬೇಕು. ಅನ್ಯಭಾಷೆಗಳಿಂದ ನಮ್ಮ ಭಾಷೆಗೆ ಈ ರೀತಿಯಲ್ಲಿ ಬಂದ ವಿಷಯಗಳೆಲ್ಲಾ ಮಾರ್ಪಟ್ಟು ನಮ್ಮ ಭಾಷೆಯಲ್ಲಿ ಲೀನವಾಗಿ ಹೋಗುವುದೇ ನಮ್ಮ ಸಂಸ್ಕೃತಿಯು ನಿಷ್ಕಲ್ಮಷವಾಗಿರುವುದೆಂಬುದರ ಲಕ್ಷಣವಾಗಿದೆ.

ಮೇಲೆ ಹೇಳಿದ ಎಲ್ಲಾ ವಿಷಯಗಳಿಂದ, ಭಾಷೆಯು ಜೀವನದ ವೈಶಿಷ್ಟ್ಯಕ್ಕನುಸಾರವಾಗಿ ನವೀನತೆಯನ್ನು ಹೊಂದುವುದೆಂದೂ, ಕನ್ನಡದಲ್ಲಿಯೂ ಅಂತಹ ವ್ಯತ್ಯಾಸಗಳು ಆಗಿರುವುವೆಂದೂ ತಿಳಿದುಬರುವುದು. ಆದರೆ ಹಳೆ ಮಾರ್ಗವನ್ನು ಬಿಟ್ಟು ಹೊಸ ಮಾರ್ಗದಲ್ಲಿ ಅಡಿಯಿಡುವ ಸಂಧಿಕಾಲಗಳಲ್ಲಿ ಕನ್ನಡಿಗರು ತಮ್ಮ ಸಂಸ್ಕೃತಿಯೊಂದನ್ನು ಬಿಡದುದರಿಂದ, ಹೊಸ ಹೊಸ ಪಂಥಗಳು ಬರಬರುತ್ತಾ ಜನರ ಆದರಕ್ಕೆ ಪಾತ್ರವಾದುವು. ಇನ್ನು ಮುಂದಾದರೂ, ಕನ್ನಡದ ಹಿಂದಣ ಇತಿಹಾಸದಿಂದ ಪಾಠಕಲಿತು ಕನ್ನಡಿಗರು ಭಾಷೋನ್ನತಿಯನ್ನು

ಸಾಧಿಸಿದರೆ, ಅವರ ಕಾರ್ಯಗಳಿಗೆ ಯಶಸ್ಸು ದೊರೆಯುವುದೆಂಬುದರಲ್ಲಿ ಅಡ್ಡಿಯಿಲ್ಲ. ಈಗಣ ಕನ್ನಡ ಭಾಷೆಯಲ್ಲಿರುವ ದೋಷಕ್ಕೆ ವಿಮರ್ಶಕರು ನಾನಾ ವಿಧವಾದ ಹೆಸರನ್ನು ಕೊಡುತ್ತಿರುವುದೇನೋ ನಿಜ. ಆದರೆ ಎಲ್ಲಾ ದೋಷಗಳೂ ಸಂಸ್ಕೃತಿಯ ಅಭಾವದ ಪರ್ಯಾಯನಾಮಗಳೆನ್ನುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಹೊಸಗನ್ನಡವು ಇನ್ನೂ ತೊದಲಡಿಯನ್ನು ಇಡುತ್ತಿರುವಾಗ, ಅದು ಮುಂದೆ ಸರ್ವಾಂಗ ಸುಂದರವಾಗುವಂತೆ ಈಗ ಮಾಡುವ ಪ್ರಯತ್ನಗಳು ಫಲಕಾರಿಗಳಾಗದೆ ಇರಲಾರವು. ಕನ್ನಡಿಗರು ಈ ಸಂದರ್ಭದಲ್ಲಿ ಒಮ್ಮೆ ಹಿಂದಕ್ಕೆ ಹೋಗಿ ಮತ್ತೆ ಮುಂದುವರಿಯಬೇಕೆಂದು ನನ್ನ ಅಭಿಪ್ರಾಯ. ಇದು ಹೇಗೆ ಸಾಧ್ಯವೆಂದು ಅನೇಕರು ಪ್ರಶ್ನಿಸಬಹುದು. ಹಿಂದೆ ಹೋಗುವುದೆಂದರೆ ನೃಪತುಂಗನ ಕಾಲದ ಕನ್ನಡವನ್ನು ತಂದು ಇನ್ನೊಮ್ಮೆ ಪ್ರತಿಷ್ಠಾಪನೆಮಾಡುವುದೆಂದು ಅರ್ಥವಲ್ಲ. ನಮ್ಮಲ್ಲಿ ಈಗ ನಿಜವಾದ ಸಂಸ್ಕೃತಿಯಿಂದ ಲುಪ್ತವಾಗಿರುವುದರಿಂದ, ಮೊದಲು ಕನ್ನಡಿಗತನವು ನಮ್ಮಲ್ಲುಂಟಾಗಬೇಕಾದರೆ, ನಮ್ಮ ಹಳೆಯ ಬೊಕ್ಕಸದ ಬಾಗಿಲನ್ನು ತೆರೆವುದು ಆದ್ಯ ಕರ್ತವ್ಯವಿದೆ. ಹಿಂದಿನ ನಮ್ಮ ಸಂಸ್ಕೃತಿಯನ್ನು ಒಮ್ಮೆ ಮನಸ್ಸಿನಲ್ಲಿ ಆವಾಹಿಸಿಕೊಂಡು ಇಂದಿನ ನಮ್ಮ ಸಂಸ್ಕಾರದ ತಳಹದಿಯನ್ನು ಕಟ್ಟಬೇಕು. ಹೊಸಗನ್ನಡದ ಭಾಷಾವೃಕ್ಷದ ಬೇರು ಹಳೆಗನ್ನಡದ ಸ್ವಾರಸ್ಯವನ್ನು ತಂದು ಅದನ್ನು ಪರಿಪೋಷಿಸಬೇಕೆಂದು ನನ್ನ ಅಭಿಪ್ರಾಯವಾಗಿದೆ. ತೂಗಾಡುವ ಉಯ್ಯಾಲೆಯನ್ನು ಹಿಂದಕ್ಕೆ ಎಷ್ಟು ರಭಸದಿಂದ ಎಳೆಯುತ್ತೊ, ಅಷ್ಟೆ ವೇಗದಿಂದ ಅದು ಮುಂದಕ್ಕೆ ದುಮುಕುವುದೆಂದು ಎಲ್ಲರಿಗೂ ಗೊತ್ತಿದೆ. ಆದರಂತೆ ಹೊಸಗನ್ನಡವು ಹಳೆ ಸಂಸ್ಕೃತಿಯನ್ನು ಹೊಂದಿಕೊಳ್ಳಲು ಒಂದಡಿ ಹಿಂದಕ್ಕೆ ಸರಿದರೆ ನಾಲ್ಕಡಿ ಮುಂದೆ ಬರುವುದೆಂದು ನನಗೆ ತೋರುತ್ತದೆ. ಆಗ ಹೊಸ ಹೊಸ ಭಾವನೆಗಳನ್ನು ಹೊರಗೆಡಹುವುದಕ್ಕೆ ನಮಗೆ ಹೊಸ ಹೊಸ ವಿಧಾನ ವರಿಕು. ಕಾಲಕ್ರಮದಲ್ಲಿ ಕನ್ನಡವು ನವೀನತೆಯನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

"Might is right" (ಬಲವೇ ನೀತಿ) ಎಂಬ ಮಾತನ್ನು ನೀತಿಶಾಸ್ತ್ರಜ್ಞರು ಅಲ್ಲಗಳೆದರೂ ಲೋಕವು ಅದನ್ನು ಇನ್ನೂ ತಿರಸ್ಕರಿಸಲಿಲ್ಲ. ಶಕ್ತಿ ಇದ್ದಲ್ಲಿ ಆಕರ್ಷಣವಿರುವುದರಿಂದ ಲೋಕವೇ ಆ ಕಡೆಗೆ ವೇಗವಾಗಿ ಹರಿಯುತ್ತದೆ. ಹೀಗಾಗಿ ಶತಮಾನಗಳಿಂದ ಸಾಧ್ಯವಾಗದ ಪರಿವರ್ತನೆಗಳನ್ನು ಶಕ್ತಿವಂತರಾದ ಮಹಾ ಪುರುಷರು ತಮ್ಮ ಜೀವನಕಾಲದಲ್ಲಿ ಮಾಡಿದುದುಂಟು. ಭಾಷಾ ಪ್ರಪಂಚದಲ್ಲಿಯೂ ಈ ಮಾತಿನ ಮಾನ್ಯತೆಯು ಪ್ರಕಟವಾಗಿರುವುದು. ಅನೇಕ ಶತಮಾನಗಳಿಂದ ವ್ಯಾಕರಣ ಸೂತ್ರಗಳಿಂದ ಕಟ್ಟಿಬಿಟ್ಟ ಭಾಷೆಯ ಗಂಟು ಧೂಳೀಪಟ್ಟವಾಗುವಂತೆ ಮಹಾಕವಿಗಳು ಮಾಡಿರುವರು. ಇತಿಹಾಸ ಪುಸ್ತಕಗಳ ಪುಟಗಳನ್ನು ಮಗುಚಿದರೆ ಇದಕ್ಕೆ ಸಾವಿರಾರು ಉದಾಹರಣೆಗಳು ಗೋಚರಿಸುವುವು. ಬೆಳವಣಿಗೆಯಿಲ್ಲದೆ ಜೀವನ್ಮೃತವಾದ ಭಾಷೆಯಲ್ಲಿ ಚೇತನವನ್ನು ಹುಟ್ಟಿಸಿ ವಿಶ್ವಾಮಿತ್ರ ಸೃಷ್ಟಿಯಲ್ಲಿ ಅದಕ್ಕೆ ಆಧಿಪತ್ಯವನ್ನು ಕೊಟ್ಟವರು ಅನೇಕರಿದ್ದಾರೆ. ಇದಕ್ಕೆ ಕಾರಣವು ಮತ್ತಾವುದೂ ಅಲ್ಲ. ಅನ್ಯರೆಲ್ಲಾ ನಿದ್ರಿಸುತ್ತಿದ್ದಾಗ, ಸ್ವಪ್ನದಲ್ಲಿ ಪರಸ್ಪರ ವೈಮನಸ್ಯದಿಂದ ಬಡಿದಾಡುತಿದ್ದಾಗ ಅವರು ಜಾಗರಿತರಾಗಿದ್ದರು. "ಯಾ ನಿಶಾಸರ್ವ ಭೂತಾನಾಂ ತಸ್ಯಾಂ ಜಾಗರ್ತಿಸಂಯಮೀ" ಎಂಬ ಭಗವದ್ವಾಕ್ಯಕ್ಕೆ ಅವರು ಉದಾಹರಣ ಪುರುಷರಾಗಿದ್ದರು. ಅವರ ನಿರಂತರ ತಪಸ್ಸಿನಿಂದ ಮನಸ್ಸೂ ಮಾತೂ ಕೃತಿಯೂ ಅವರ ವಶವಾದುವು. ಮನಃಪ್ರಪಂಚವನ್ನು ಜಯಿಸಿದ ಅವರಿಗೆ ಬಾಹ್ಯಪ್ರಪಂಚವನ್ನು ಗೆಲ್ಲುವುದು ನಿಮಿಷದ ಕೆಲಸವಾಯಿತು. ಸೂರ್ಯಮಂಡಲದ ಸುತ್ತಲೂ ತಿರುಗುವ ಅನೇಕ ನಕ್ಷತ್ರಗಳಂತೆ ಭಾಷಾ ಸೃಷ್ಟಿಕರ್ತರಾದ ಅವರ ಸುತ್ತಲೂ, ವೈಯಾಕರಣರೂ, ಲಾಕ್ಷಣಿಕರೂ, ಹೆಚ್ಚೇಕೆ? ಇಡೀ ಲೋಕವೂ ಸಂಚರಿಸಿದುವು. ಇಂತಹ ವಿಶ್ವಾಮಿತ್ರರು ಅನೇಕ ಭಾಷೆಗಳಲ್ಲಿ ಹುಟ್ಟಿ ಹೊಸ ಯುಗಗಳನ್ನು ನಿರ್ಮಿಸಿದರೂ, ಕರ್ಣಾಟಕವು ಅಂತಹ ಭಾಗ್ಯವನ್ನಿನ್ನೂ ಪಡೆಯಲಿಲ್ಲ. ಅಷ್ಟರ ವರೆಗೆ ವ್ಯಾಕರಣವೂ ಬೇಕು; ವಿಮರ್ಶೆಗಳೂ ಬೇಕು; ಎಲ್ಲವೂ ಬೇಕು. ತಟಸ್ಥವಾಗಿರುವ ಉತ್ಸಾಹವನ್ನು ಎಬ್ಬಿಸುವುದಕ್ಕೆ ವಿಶ್ವಪ್ರಯತ್ನಗಳನ್ನು ಮಾಡಬೇಕು. ದೈವಪ್ರೇರಣೆಯಿಂದ ಕೆಲಸಮಾಡುವ ಅಂತಹ ಅಸಾಧಾರಣ ವ್ಯಕ್ತಿಗಳ ಅವತಾರವಾಗುವ ವರೆಗೆ ಆತ್ಮಪ್ರೇರಣೆಯಿಂದಲಾದರೂ ಕೆಲವರು ಕೈಯಿಂದಾದ ಕೆಲಸಗಳನ್ನು ಮಾಡುತ್ತಿರಬೇಕು. ಅವರ ಕಾರ್ಯಗಳೆಲ್ಲಾ ಒಮ್ಮೆ ನೀರಿನ ಹೋಮದಂತೆ ವ್ಯರ್ಥವೆಂದು ಭಾಸವಾಗುವುದು. ಆದರೆ ಒಂದು ಕಾರ್ಯವು ವಿಫಲವಾಗಲಿ ಸಫಲವಾಗಲಿ; ಅದರ ನಿರ್ವಹಣಕ್ಕೆ ಶಕ್ತಿಯು ಬೇಕಾದುದರಿಂದಲೂ, ಒಮ್ಮೆ ಪ್ರಯುಕ್ತವಾದ ಶಕ್ತಿಯು ಜಯಾಪಜಯಗಳಿಂದ ಬಂಧಿತವಾಗದೆ, ಸೃಷ್ಟಿಯ ಗರ್ಭದಲ್ಲಿ ವ್ಯಾಪಿಸುವುದರಿಂದಲೂ, ಅಂತಹ ಪ್ರಯತ್ನಗಳು ಹಲವಾದ ಮೇಲೆ, ಶಕ್ತಿವಂತನಾದ ಮಹಾಪುರುಷನೊಬ್ಬನ ಅವತಾರಕ್ಕೆ ವಾತಾವರಣವು ಸಿದ್ಧವಾಗುವುದು. ಕನ್ನಡ ಭಾಷೆಯಲ್ಲಿ ಆ ವಾತಾವರಣವು ಇನ್ನೂ ಉಂಟಾಗದಿರುವುದರಿಂದ, ಎಲ್ಲಾ ತರದ ಚಟುವಟಿಕೆಗಳು ತೋರುತ್ತಿರಬೇಕು. ಅಷ್ಟರ ವರೆಗೆ ಹನುಮಂತನಂತಹ ಮಹಾಪ್ರಾಣರು ಪರ್ವತಗಳನ್ನೇ ತಂದು ಇರಿಸಬೇಕು. ನಮ್ಮಂತಹ ಸಾಮಾನ್ಯರು "ಅಳಿಲಭಕ್ತಿ, ಮಳಲಸೇವೆ"ಯನ್ನು ಮಾಡುತ್ತಿರಬೇಕು. ಆಗಳೆ ಕನ್ನಡನುಡಿಯ ಉದ್ಧಾರವಾಗುವುದು.



# ಶಿಲ್ಪಕಲಾ ವಿಮರ್ಶೆ.

(ಲೇಖಕ: ಎಮ್ ಎನ್. ಕಾಮತ್, ಮಂಗಳೂರು.)

ಸಾಹಿತ್ಯಕ್ಕೂ ಶಿಲ್ಪಕ್ಕೂ ಹತ್ತಿರದ ಸಂಬಂಧವಿದೆ ಎಂಬುದನ್ನು ತಿಳಿದುಕೊಳ್ಳುವುದು ಕಷ್ಟವಾಗಿಲ್ಲ. ವಿಷಯುಗಳನ್ನು ಮನಸ್ಸು ಗ್ರಹಿಸಿಕೊಳ್ಳುವ ಹಾಗೆಯೆ, ಆಗಲೆ ಉಂಟಾಗುವ ಭಾವನೆಗಳನ್ನು ವರ್ಣನಾರೂಪವಾಗಿ ಸಾಹಿತ್ಯವೂ, ಪ್ರತಿರೂಪವಾಗಿ ಶಿಲ್ಪವೂ ಕಣ್ಣೆದಿರಲ್ಲಿ ನಿಲ್ಲಿಸಬಲ್ಲುವು. ಹೀಗಾಗಿರುವುದರಿಂದ ಉತ್ತಮವಾದ ಸಭ್ಯತೆಯೂ, ಅದಕ್ಕನುಗುಣವಾಗಿ ಸಾಹಿತ್ಯವೂ ಯಾವಲ್ಲಿ ಪ್ರಚಾರವಾಗಿರಬಹುದೊ, ಅಲ್ಲಿಯೆ ಆಗಲೆ ಅನುಕೂಲವಾಗಿ ಶಿಲ್ಪವೂ ವಿರಾಜಿಸುವುದು ತೀರ ವಾಸ್ತವವಾದ ವಿಷಯುವೇ. ಇದು ಕಾರಣವೆ ಪ್ರಾಚೀನ ಆರ್ಯಾವರ್ತ, ಗ್ರೀಸ್, ಮತ್ತು ಈಗಣ ಜಾಪಾನು ಇವುಗಳೇ ಅವವುಗಳಿಗೊಪ್ಪುವ ಜಾತೀಯ ಶಿಲ್ಪಕಲೆಯನ್ನು ಹುಟ್ಟಿಸಿವೆ. ಇವುಗಳೊಳಗೆ ಉತ್ತಮವಾದುದು ಯಾವುದೆಂಬುದನ್ನು ವಿಚಾರಕ್ಕೆ ತರಲು ಯತ್ನಿಸುವುದರಿಂದ, ಅವವುಗಳ ವೈಶಿಷ್ಟ್ಯ, ಧ್ಯೇಯ, ಪರಿಣತಿ ಮೊದಲಾದುವನ್ನು ವಿಮರ್ಶಿಸಿಕೊಳ್ಳಲು ಸುಲಭವಾಗಿರುವುದು.

ಆರ್ಯಾವರ್ತದೊಳಗಣ ಶಿಲ್ಪಿಗಳನ್ನುದ್ದೇಶಿಸಿ ಅವರ ಕರ್ತವ್ಯವೇನೆಂದು ಬೋಧಿಸುತ್ತಾ,—ವಸ್ತುಪ್ರಪಂಚದಿಂದ ತನ್ನನ್ನು ತೀರ ವಿಚ್ಛಿನ್ನನಾಗಿರಿಸಿಕೊಂಡು, ಧ್ಯಾನದ ಮುಖಾಂತರ ಮಾತ್ರವೆ ತನ್ನ ಹೃದಯಪಟದ ಮೇಲೆ ಯಾವ ಮೂರ್ತಿಯು ಉದಿಸುವುದೊ ಅದನ್ನೆ ಪ್ರಕಾಶಗೊಳಿಸಬೇಕೆಂದು ಹೇಳಲಾಗಿದೆ. ಗ್ರೀಕ್ ಶಿಲ್ಪಿಯು ವಸ್ತು ಪ್ರಪಂಚದಲ್ಲಿನ ಯಾವತ್ತು ಸುಂದರ ಅಂಶಗಳನ್ನು ಶೇಖರಿಸಿ, ಪರಿಪೂರ್ಣ ಸೌಂದರ್ಯದ ಒಂದೊಂದೇ ಪ್ರತಿಮೆಯನ್ನು ರಚಿಸುವುದೇ ಶಿಲ್ಪಿಯ ಕರ್ತವ್ಯವೆಂದು ಇಟ್ಟುಕೊಂಡಿರುವನು. ಜಾಪಾನದವನು ಗೋಚರ ಅಗೋಚರವಾದ ಎಲ್ಲ ಪದಾರ್ಥಗಳ ಮರ್ಮವನ್ನರಿತುಕೊಂಡು ಅವನ್ನು ಸಹಜವಾದ ಮತ್ತೂ ಸಂಯತವಾದ ರೀತಿಯಲ್ಲಿ ಪರಿಷ್ಕಾರವಾದ ರೂಪಿಂದ ಪ್ರಕಾಶಗೊಳಿಸಿದರಾಯಿತೆನ್ನುವನು. ಮೂರು ಜನಾಂಗಗಳಲ್ಲಿ ಇವೆ ಮೂರು ಆದರ್ಶಗಳು ಮೂರು ವಿಜಯಸ್ತಂಭಗಳಂತೆ ಇಂದಿಗೂ ಇವೆ; ಇವನ್ನು ಮೇಲ್ಮೇಲೆಯೆ ವಿಚಾರಿಸಿದರೆ ಇವು ಭಿನ್ನವಾಗಿರುವ ಹಾಗೆ ತೋರುತ್ತಿವೆಯಾದರೂ, ಧ್ಯೇಯವಂತೂ ಮೂಲದಲ್ಲಿ ಒಂದೇ. ಏಕೆಂದರೆ,—ಆ ಮಾನಸ ಪ್ರತಿಮೆಯೂ ಧ್ಯಾನದ ಪ್ರಭಾವವೂ ಇವು ಮೂರರೊಳಗೂ ಗುಪ್ತವಾಗಿಯೇ ಇವೆ. ಆದರೂ ಇವು ಮೂರನ್ನೂ ಹೋಲಿಸಿ ನೋಡೋಣ.

ಗ್ರೀಕ್ ಶಿಲ್ಪಿಗೆ 'ಮೊಡೆಲು'ಗಳ ಅಗತ್ಯವೇ ಇರಲಿಲ್ಲ. ಅವನ ಮನಸ್ಸು ಯಾವ ಸುಂದರ ಭಾವನೆಗಳನ್ನು ಕಲ್ಪಿಸಿಕೊಂಡಿದ್ದಿತೊ ಅವನ್ನೆ ಅವನು ಜಡವಾದ ಕಲ್ಲಿನ ಮೇಲೆ ಆರೋಪಿಸಿದನು. ಸರ್ವಾಂಗಸುಂದರ ವ್ಯಕ್ತಿಯನ್ನು ನೋಡಿಯೆ ಅವನು ಮೂರ್ತಿ ಕೆತ್ತುವಂತಿದ್ದಲ್ಲಿ, ಗ್ರೀಕ್ ಶಿಲ್ಪವೆಂಬುದನ್ನೆ ಅವನು ರಚಿಸಲಾರದೆ ಅಳಿದುಹೋಗುತ್ತಿದ್ದನು. ಜಾಪಾನ ಶಿಲ್ಪಿಯು ತನ್ನ ಲೇಖನಿಯಿಂದೆರಡು

ಗೀಟಿಳೆದು, ಅನಂತಾಕಾಶದಲ್ಲಿ ಹಾರಾಡುವ ಮಹಾ ಮರಾಳಗಳ ಹಿಂಡನ್ನೆ ಅಂಕಿಸಿ, ತನ್ನ ಮನಸ್ಸಿನಲ್ಲಿ ತೋರಿದ ಮಹಾ ಮೇಘಗಳ ಬೆಳಕಿನ ಮತ್ತು ಮಹಾ ಹಂಸೆಗಳ ವೇಗದ ಪರಿಯನ್ನೆ ಪ್ರಕಾಶಗೊಳಿಸಿದನು. ಅವನ ಹಂಸ ಗಳು ಶರೀರರಚನಾಶಾಸ್ತ್ರಕ್ಕೆ ಸರಿಯಾಗಿರದಿರಬಹುದು; ಹಂಸೆಯಂತೆ ಅವು ತೋರದಿರಬಹುದು, ಅವು ಹಾಗೆ ತೋರಬೇಕಾಗಿದ್ದಿತೆಂದೂ ಅವನು ಆಸೆ ಪಟ್ಟದ್ದಿಲ್ಲ. ಭಾರತವರ್ಷೀಯ ಶಿಲ್ಪಿಯು, ತಾನೂ ಶಾಸ್ತ್ರಪ್ರಕಾರ ಧ್ಯಾನಮಾಡುತ್ತ ತನ್ನಲ್ಲುಂಟಾದ ಮಾನಸಪ್ರತಿಮೆಯನ್ನು ಘಟಿಸಿದನು. ಅವನು ಬ್ರಹ್ಮನಿಗೆ ನಾಲ್ಕು ಮುಖಗಳನ್ನೂ ವಿಷ್ಣುವಿಗೆ ನಾಲ್ಕು ಕೈಗಳನ್ನೂ ಕೊಡಲು ಬೆದರಿಲ್ಲ; ಧ್ಯಾನಾಸಕ್ತನಾಗಿ ಬ್ರಹ್ಮಜ್ಯೋತಿಯ ಅಥವಾ ವಿಷ್ಣು ತೇಜದ ಯಾವುದೋ ಎಂಥದೋ ಒಂದು ಅಪಾರ್ಥಿವ ಪ್ರತಿಮೆಯನ್ನು ನಿರ್ಮಿಸಿದನು. ಅವನೂ 'ಮೊಡೆಲು' ಗಳನ್ನು ಬಯಸಿಲ್ಲ. ಹೀಗೆ ತ್ರಿಮೂರ್ತಿಗಳು ಒಂದೇ ದತ್ತಾತ್ರೇಯ ರೂಪದಲ್ಲಿ ಅಡಕವಾಗಿರುವ ಹಾಗೆಯೆ, ಇವರು ಮೂವರೊಳಗೂ ಮಾನಸಪ್ರತಿಮೆಯೊಂದೇ ಮೂಲವಾಗಿದ್ದಿತು.

ಭಾರತವರ್ಷದ ಶಿಲ್ಪವನ್ನು ಕುರಿತಾದ ಗ್ರಂಥ ಗಳನ್ನು ಓದಿದರೆ, ಆರ್ಯ ಶಿಲ್ಪವು ಮೂರು ಸ್ತರಗಳನ್ನು ಉಳ್ಳದೆಂದು ವ್ಯಕ್ತವಾಗುತ್ತಿದೆ. ಒಂದು ಅಚ್ಚ ಬ್ರಾಹ್ಮಣ್ಯಶಿಲ್ಪ; ನಂತರ ಬೌದ್ಧಶಿಲ್ಪ; ಅನಂತರದಲ್ಲಿ ಮೊಗಲಶಿಲ್ಪ. ಬ್ರಾಹ್ಮಣ್ಯ ಶಿಲ್ಪವು ಅಪ್ರಾಕೃತವಾದು ದರ ಚೂಡಾಂತ ಪ್ರಭಾವವನ್ನುಳ್ಳದು; ಪಾರ್ಥಿವತೆ ಯಿಂದ ತೀರ ದೂರಕ್ಕೆ ಸರಿದಿದೆ. ನರಸಿಂಹ, ದಶಗ್ರೀವ, ಚತುರ್ಮುಖ ಬ್ರಹ್ಮ, ಚತುರ್ಭುಜ ವಿಷ್ಣು; ಶ್ರೀರಾಮ ನಲ್ಲಿ 'ನವದೂರ್ವಾದಲಶ್ಯಾಮಲ'ತೆ; ಶ್ರೀ ಕೃಷ್ಣನಲ್ಲಿ 'ನವೀನ ನೀರದ ಕಾಂತಿ'; ಇವುಗಳಲ್ಲಿ ಅಪ್ರಾಕೃತಿಕ ಪ್ರಭಾವವಿದೆ. ಎಲ್ಲಕ್ಕೂ ಮೇಲಾಗಿ, ಆ ಸುಡುಗಾಡಿನ ಭೋಲಾನಾಥ! 'ಇವರೆಂಥ ದೇವರಂತೆ' ಎಂದು ಮಕ್ಕಳ ಆಟದ ಗೊಂಬೆಗಳನ್ನು ಕಂಡು ನಗುವಂತೆ ನಗುತ್ತ ಕೇಳ ಬಹುದು. ಆದರೆ ಇಂಥವುಗಳಲ್ಲಿ ಜಗತ್ತಿನ ಯಾವ ಕಾಲದ ಯಾವ ಶಿಲ್ಪದಲ್ಲಾದರೂ ನೋಡ ಸಿಗದಂಥ ಮಹಾಮುಕ್ತಿಯ ಆನಂದೋಚ್ಛ್ವಾಸಗಳಿವೆ. ಈ ದೇವ ಮೂರ್ತಿಗಳು 'ಏಕಮೇವಾsದ್ವಿತೀಯಮ್!' ಬೌದ್ಧ ಯುಗದಲ್ಲಿ ಶಿಲ್ಪದೇವತೆಯು ಮನುಷ್ಯನ ಸಂಸಾರದ ಭಾವನೆಗಳಿಗೆ ಹತ್ತಿರವಾಗುತ್ತ ಬಂದಿತು. ಶಿಲ್ಪವು ಸ್ವಲ್ಪ ಸಂಯತವಾಯಿತು; ಆದರೂ ತಲ್ಲೀನತೆಯನ್ನು ತ್ಯಜಿಸದೆ ದಾಸ್ಯಭಾವವನ್ನು ಅಂಗೀಕರಿಸದೆ ಉಳಿಯಿತು. ಶಿಲ್ಪವು ಬುದ್ಧದೇವನಿಗೆ ಶರಣೆಂದಿತೇ ಹೊರತಾಗಿ, ಮಹಾ ಮಹಿಮನಾದ ಅಶೋಕನೆ ಸಮ್ರಾಟನೆನಿಸಿದರೂ ಆ ಶಿಲ್ಪವು ಅವನ ಕಡೆಗೆ ಕಣ್ಣೆತ್ತಲಿಲ್ಲ. ನಿರ್ವಿಕಾರನಾದ ಭಗವಾನ್ ಬುದ್ಧನ ಪ್ರಶಾಂತ ನಿರ್ವಾಣ ಮೂರ್ತಿಯನ್ನು ಧ್ಯಾನಮಾಡುತ್ತ ಮೌನವನ್ನು ಧರಿಸಿತಲ್ಲದೆ, ಅಶೋಕ ಸ್ತಂಭಗಳ ಮೇಲೆ ಅಶೋಕನ ನಿಜಮೂರ್ತಿಯನ್ನು ಕೆತ್ತದೆ ಧರ್ಮಶಾಸ್ತ್ರಗಳನ್ನೆ ಅಂಕಿಸಿತು. ಆರ್ಯಶಿಲ್ಪವು ಬ್ರಾಹ್ಮಣ್ಯ ಯುಗದಲ್ಲಿ ಮೇಘರಾಜ್ಯದಲ್ಲೆ ಇದ್ದಿತೆಂದಾದರೆ, ಬುದ್ಧ ಯುಗದಲ್ಲಿ ಅದು ಅನಂತ ಆಕಾಶದ ಕಡೆಗೇ ಮುಖವೆತ್ತಿ ಹಿಡಿದೇ ಧರೆಗೆ ಅವತರಿಸಿತು.

ಭಾರತವರ್ಷವು ತನ್ನ ಸ್ವಾಧೀನತೆಯನ್ನು ಕಳೆದು ಕೊಂಡು ಮೊಗಲ ಬಾದಷಹನ ಪಾದಾಕ್ರಾಂತವಾದುದು, ಆರ್ಯ ಶಿಲ್ಪವೂ ಸ್ವಾಧೀನತೆಯನ್ನು ಕಳೆದುಕೊಂಡರೂ ಗುಲಾಮತನದ ಕರಾರನ್ನು ಬರೆದುಕೊಡಲಿಲ್ಲ. ಬಾದ ಷಹ ಬೇಗಮರ ಮೂರ್ತಿಗಳನ್ನು ಕೆತ್ತುವಾಗಲೂ ಅವ ರನ್ನು ಸಾಮಾನ್ಯ ಮನುಷ್ಯರಂತೆ ಬರೆಯಲಾರದಾಯಿತು; ಅದರಲ್ಲೂ ಅಪ್ರಾಕೃತದ ಸಂಪೂರ್ಣ ಪ್ರಭಾವವನ್ನೆ ಸೇರಿ ಸಿತು. ಅದು ಬಾದಷಹರ ರೂಪವನ್ನು ಬರೆಯಲಾರದೆ, ರಾಜಲಕ್ಷ್ಮಿಯ ಧ್ಯಾನ ಮೂರ್ತಿಯನ್ನೆ ಅಂಕಿಸಿತು. ಶಹಾಜಹಾನನ ಕಾಲದಲ್ಲಿ ಆರ್ಯ ಶಿಲ್ಪವು ಮುಕ್ತಿಯನ್ನು ಹೊಂದಿ ಸ್ವರ್ಗದ ತನಕ ಹಾರಾಡಿ, ಅಲ್ಲಿಂದ ಮೃತ್ಯುವಿನ ಸ್ವಪ್ನವೊಂದನ್ನು ಕಂಡು, ಯಮುನಾ ತೀರದಲ್ಲಿ ಆಗ್ರಾ ದಲ್ಲಿ ಆ ಸ್ವಪ್ನವನ್ನು ಶ್ವೇತಶಿಲೆಯಲ್ಲಿ ಕೆತ್ತಿರುವುದು. ಆರ್ಯ ಶಿಲ್ಪಕ್ಕೂ, ಆರ್ಯವಂಶಕ್ಕಿರುವಂತೆ, ಸ್ವರಾಜ್ಯವೇ ಜನ್ಮಸಿದ್ಧವಾದ ಹಕ್ಕು; ಭಗವಂತನಿಗೆ ಹೊರತಾಗಿ ಇನ್ನಾರಿಗೂ ಅದು 'ತ್ವಮಸಿ ಮಮ ಶರಣಮ್, ತ್ವಮಸಿ ಮಮ ಜೀವನಮ್' ಎಂದಿಲ್ಲ. ಇರಲಿ.

ಆರ್ಯ ಶಿಲ್ಪಕ್ಕೆ ಮೂಲ ಕಾರಣವಾವುದು? ಧ್ಯಾನರತಿಯೇ. ಪ್ರಕೃತಿಯ ಆತ್ಮದ ಪರಿಚಯವು ಮನು

ಷ್ಯನ ಆತ್ಮಕ್ಕೆ ಎಷ್ಟಕ್ಕೆ ಗೋಚರವಾಗಿದೆಯೊ, ಅಷ್ಟಕ್ಕೆ ಆದರ ಪ್ರಕಾಶವನ್ನು ಅಂಕಿಸುವುದೇ ಚಿತ್ರವಾಗಿದೆ. ಕಲಾ ಶಾಸ್ತ್ರವನ್ನಾದರೂ ಕಲಿತುಕೊಳ್ಳಬೇಕಾದರೆ ಮೊದಲು ಪ್ರಕೃತಿಯನ್ನು ಮನದಣಿಯೆ ಕಂಡು ಗ್ರಹಿಸಿಕೊಳ್ಳ ಬೇಕು. ಈಗ 'ನೇಚರ್‌ಸ್ಟಡಿ' ಎಂದು ಯಾವ ಪಾಠ ಗಳನ್ನು ಕಲಿತುಕೊಳ್ಳಲಾರಂಭಿಸುತ್ತೇವೊ, ಅವೇ ಶಿಲ್ಪ ಹಾಗೂ ಕಲಾಶಾಸ್ತ್ರದ ಮೊದಲನೆ ಮೆಟ್ಟಿಲು. ಸೃಷ್ಟ ಪದಾರ್ಥಗಳು ನಮ್ಮ ಮನಸ್ಸಿನಲ್ಲಿ ಮಾಡಿಸುವ ಭಾವ ಗಳನ್ನೆ ಬಿಡಿಸಿ ವಿವರಿಸುವುದೇ – ಚಿತ್ರಬಿಡಿಸುವುದು; ಆ ಭಾವದ ಬಿಂಬವನ್ನು ಸುಲಭವಾಗಿಯೂ ಸಹಜವಾಗಿಯೂ ಯಾವುದು ಬಣ್ಣಿಸುವುದೋ ಅದೇ ಬಣ್ಣದ ಚಿತ್ರ. ಮನುಷ್ಯನಲ್ಲಿಯ ಮನುಷ್ಯತ್ವ, ಹಸುವಿನಲ್ಲಿಯ ಗೋ ಭಾವ, ಹೂವಿನೊಳಗಣ ಅಂತರ್ಯಭಾವ, ಇವುಗಳ ಮೇಲೆಯೆ ಕಲಾನಿಪುಣನ ಕಾರ್ಯವು ಆದರಿಸಿರುವುದು. ಹೊರಕಣ್ಣಿಗೆ ಕಾಣಲಿ, ಕಾಣದಿರಲಿ, ಯಾವುದೊಂದು ಪದಾರ್ಥದ ಮನೋಬಿಂಬವನ್ನು ನಿಪುಣತೆಯಿಂದ, 'ಬ್ರಶ್ಶಿ'ನ ಮೂಲಕ, 'ಲೇಖನಿ'ಯಿಂದ, 'ಪೆನ್ಸಿಲಿ'ನಿಂದ, ಕಂಠಸ್ವರ ದಿಂದ, ಅಥವಾ ಅಂಗಭಂಗದಿಂದ ಪ್ರಕಾಶಗೊಳಿಸುವವನು ಯಾವನೋ ಅವನೇ ಕಲಾಪಂಡಿತನು. ತನ್ನ ಕಾರ್ಯ ಸಾಧನೆಯಲ್ಲಿ ಕೃತಾರ್ಥನೆನಿಸಬೇಕಾದರೆ, ಅವನೂ ಧ್ಯಾನಮಗ್ನನಾಗಿ ಮಾನಸಮೂರ್ತಿಯನ್ನು ಪೂಜಿಸಬೇಕಾ ಗುವುದು. 'ಮೂರುತಿಯನು ನಿಲ್ಲಿಸೋ; ಹೃದಯ ದೊಳು' ಅಥವಾ 'ಕೃಷ್ಣಾಮೂರ್ತಿ ಕಣ್ಣಾಮುಂದೆ ನಿಂತಿಪಂತಿದೆ' ಎಂಬುವ ದಾಸರ ಪದಗಳಾದರೂ ಇವೆ ಅರ್ಥ ವನ್ನು ಕಲಾಭಿಜ್ಞನಿಗೆ ಹೇಳುತ್ತಿವೆ. ಮಾನಸಮೂರ್ತಿ ಯನ್ನು ನಿಲ್ಲಿಸಬೇಕಾದರೆ, ಮನಸ್ಸೇ ಮೂಲಸಾಧನ; 'ಮನಸ್ಸನ್ನು ಕೊಟ್ಟು' ಮನಸ್ಸನ್ನು ಪಡೆಯಬೇಕು. ಕೊಟ್ಟರೆ ಸಿಗುವುದು ಮಾತ್ರವಲ್ಲ, ಕೊಟ್ಟಂತೆ ಸಿಗು ವುದು. ಮನಸ್ಸನ್ನು ಲಭಿಸಿಕೊಳ್ಳುವುದೇ ಶಿಲ್ಪಶಾಸ್ತ್ರದ ಮರ್ಮವು. ಶಿಲ್ಪಿಯು ಚಿತ್ತಾರದ ಅಥವಾ ಸಂಗೀತದ ಅಥವಾ ಕಾವ್ಯದ ಇಲ್ಲವೆ ಅಂಗಭಂಗದ ಮೂಲಕವಾಗಿ ತನ್ನ ಮನಸ್ಸನ್ನು ಕೊಟ್ಟುಬಿಡಲು ಅಶಕ್ತನಾದರೆ ಅವ ನಂಥ ದೀನನ ಪರಿಶ್ರಮವು ನಿರರ್ಥಕವಾಗುವುದು: ಅವನು ತನ್ನ ಮನಸ್ಸನ್ನೂ ಲಭಿಸಿಕೊಳ್ಳಲಾರನು, ಇತರರ ಮನ ಸ್ಸನ್ನು ಆಕರ್ಷಿಸಲಾರನು. ಈ ಬಗೆಯಾಗಿ ಮನಸ್ಸನ್ನು 'ಕೊಡು'ವ ಬಗೆಯನ್ನಾದರೂ ಇತರರ್ಯಾರೂ ಕಲಿಸಿ ಕೊಡಲಾಗುವುದಿಲ್ಲ; ಏಕೆಂದರೆ ಕಲಾವಿಷಯಕ್ಕೂ ಮನ ಸ್ಸಿಗೂ ಇರುವ ಗೂಢಸಂಬಂಧವನ್ನು ಕಲಿಸಿಕೊಡುವುದೇ ಅಸಾಧ್ಯವು. ಶಿಲ್ಪ ವಿಷಯದ ಸ್ವಭಾವ (ಸ್ವ—ಭಾವ) ವನ್ನು ತಿಳಿದುಕೊಳ್ಳಲು ಮೊದಲಾಗಿ ಪ್ರಯತ್ನಿಸುವುದೇ ಶಿಲ್ಪ ವಿದ್ಯಾರ್ಥಿಯ ಕರ್ತವ್ಯ.

ನಮ್ಮನ್ನು ನಾಲ್ಕೂ ಕಡೆ ಆವರಿಸಿಕೊಂಡಿರುವ ಪದಾರ್ಥಗಳೊಡನೆ ನಮ್ಮ ಮನಸ್ಸನ್ನು ಮಿಲನಗೊಳಿಸು ವುದೇ 'ನೇಚರ್‌ಸ್ಟಡಿ.' ಅಥವಾ ವಿಜ್ಞಾನ. ಸೃಷ್ಟಿಯು ಎಂದಾದರೂ ನಮ್ಮ ಕೈಗೆ ಸೆರೆಯಾಗಲಾರದೆಂದೇ ನಮ್ಮ ಮನಸ್ಸಿನ ದರ್ಪಣದಲ್ಲಿ ಅದರ ಬಿಂಬವು ಬೀಳಗೊಡು ವಂತೆ, ಅದರ ಆದರಸ್ವರದೊಡನೆ ನಮ್ಮ ಸ್ವರವೂ ಏಕ ತಾನತೆಯನ್ನು ಹೊಂದುವಂತೆ, ನಾವು ಆಸ್ಪದಕೊಡದಿದ್ದರೆ ಸೃಷ್ಟಿಯು ನಮ್ಮದಾಗದು. ಇದೂ ಒಂದು ಬಗೆಯ 'ಯೋಗ'ಸಾಧನೆ. ಇದರ ಮೂಲದಲ್ಲಿಯೂ 'ಚಿತ್ತವೃತ್ತಿ ನಿರೋಧ'ವೇ ಇದೆ. ಚಿತ್ತದ ಅತ್ಯಂತ ಶಾಂತತೆಯನ್ನು ವಿರೋಧಿಸುವ ಎಲ್ಲಾ ಮನೋವೃತ್ತಿಗಳನ್ನು ನಿರೋಧಿ ಸದೆ, ಮನಸ್ಸು ಸ್ಥಿರವಾದ ಜಲಭರಿತ ಸರೋವರದಂತೆ ಸ್ವಚ್ಛವಾಗಲಾರದು; ಹಾಗಾದರೆ ಅದರ ಮೇಲೆ ಸೃಷ್ಟಿಯ ಪ್ರತಿಬಿಂಬವು ಮೂಡಲಾರದು; ಈ ಬಿಂಬವು ಮೂಡದೆ ಜ್ಞಾನ ಸಂಪಾದನೆಯಾಗದು; ಇದೇ ಸ್ವಭಾವಗ್ರಹಣ ವಸ್ತುಜ್ಞಾನವು. ಎಂದರೆ ಈ ಸ್ವಭಾವಗ್ರಹಣವು ಸರಿಯಾಗಿ ರದೆ, ಕಲಾಶಾಸ್ತ್ರದಲ್ಲಿ ನಿಪುಣತೆಯುಂಟಾಗುವುದು ಹೇಗೆ? ಅಂತರಂಗ ವಿಚಾರವನ್ನು ಬಹಿರಂಗಗೊಳಿಸುವುದೇ ಕಲಾ ನೈಪುಣ್ಯದ ಲಕ್ಷಣವಾಗಿರುವುದರಿಂದ, ಬಹಿರಿಂದ್ರಿಯಗಳ ದ್ವಾರಾ ನಾವು ತಿಳಿದುಕೊಳ್ಳಬಹುದಾದೆಲ್ಲವೂ ಶಿಲ್ಪಿಗೆ ಪ್ರಾಮುಖ್ಯವಾದ ಅವಶ್ಯವೆನಿಸುವುದಿಲ್ಲ; ಅಂತರಿಂದ್ರಿಯ ಗಳಲ್ಲೇ ಅವನಿಗೆ ಭರವಸೆ. ಅವನು ಮನಶ್ಚಕ್ಷುಗಳಿಂದ ಸ್ಪಷ್ಟವೂ ಶುಭ್ರವೂ ಆಗಿ ನೋಡುವನು. ಅವುಗಳಿಂದ ಕಂಡಂತೆ ಅವನೇನನ್ನು ಚಿತ್ರಿಸುವನೋ ಅದೇ ದರ್ಶಕನ ಮನಸ್ಸನ್ನು ಸೆಳೆದುಕೊಳ್ಳುವುದು.

ಹೀಗೆ, ಸೃಷ್ಟಿಯ ತಿಳಿವಳಿಕೆಯನ್ನು ಲಭಿಸಿಕೊಳ್ಳು ವಾತನು ಮತ್ತು ಸೃಷ್ಟಿಯ ನಕಲನ್ನೆತ್ತುವವನು ಇವ ರೊಳಗೆ ಆಕಾಶ ಪಾತಾಳಗಳಲ್ಲಿರುವಷ್ಟು ಅಂತರವಿದೆ.

ಮಗುವಿನ ಮೈಯಲ್ಲಿ ಎಷ್ಟೆಷ್ಟು ಎಲುಬುಗಳಿವೆ ಎಂಬುದನ್ನು ತಾಯಿಗಿಂತಲೂ ವೈದ್ಯನೇ ಧಾರಾಳವಾಗಿ ಸಂಪೂರ್ಣವಾಗಿ ತಿಳಿದಿರಬಹುದಾದರೂ, ಮಗುವಿನ ಮನಸ್ಸನ್ನು ತಾಯಿಯು ಮಾತ್ರ ತಿಳಿದುಕೊಳ್ಳುವಷ್ಟು ಚೆನ್ನಾಗಿಯೂ ಸುಲಭವಾಗಿಯೂ, ಯಾವ ವೈದ್ಯನೂ ತಿಳಿದುಕೊಳ್ಳಲಾರನು. ಡಾಕ್ಟರನು ಚರ್ಮಚಕ್ಷುಗಳಿಂದ ನೋಡುವನು ಹೊರತಾಗಿ ತಾಯಿಯಂತೆ ಮನಶ್ಚಕ್ಷುಗಳಿಂದ ನೋಡುವವನಲ್ಲ. ಅದರಂತೆ ಸೃಷ್ಟಿ ವಿಜ್ಞಾನವು ಸೃಷ್ಟಿಯೊಡನೆ ನಿಕಟ ಸಂಬಂಧವನ್ನು ಈ ರೀತಿಯಾಗಿ ಮನಶ್ಚಕ್ಷುಗಳಿಂದ ಸ್ಥಾಪಿಸಿಕೊಡುವುದಲ್ಲದೆ, ಅದು ಡಾಕ್ಟರರ ರೀತಿಯ ಶವಚ್ಛೇದ ವ್ಯಾಪಾರದ ಮೂಲಕವಾಗಿಲ್ಲ. ಲೋಕದಲ್ಲಿನ ಪ್ರತಿಯೊಂದೂ ವಸ್ತುವು ನಮ್ಮ ಮನಸ್ಸುಗಳ ಮೇಲೆ ಪಂಚೇಂದ್ರಿಯಗಳ ಮುಖಾಂತರವಾಗಿ ಭಾವನೆಗಳ ಮಳೆಯನ್ನು ಸುರಿಯುತ್ತಲೇ ಇದೆ; ಈ ಮಳೆಯೆಲ್ಲ ಅಲ್ಲೇ ಕೂಡಿಕೊಂಡಿರಲು, ಅದನ್ನು—ಈ ಸಂಚಿತವಾದ ಮಧುವನ್ನು—ಮಧು ಚಕ್ರಾಕಾರದಿಂದ ಮೊದಲ್ಗೊಂಡು ಮಧು ಬಿಂದುವಾಕಾರದ ಪರಿಯಂತವೂ ವಿತರಣಮಾಡುವುದು ಶಿಲ್ಪಿಯ ಧರ್ಮವಾಗಿದೆ; ಆ ವಿತರಣ ಶಕ್ತಿಯನ್ನು ಲಭಿಸಿಕೊಳ್ಳುವುದು ಶಿಲ್ಪಿಯ ಸಾಧನೆ. ಈ ಕಾರಣದಿಂದಲೇ, ಪರಮಾತ್ಮನು ಎಂದಿಗೆ ಯಾವ ವೇಶದಿಂದ ಬರುವನೊ ಎಂದು ಭಕ್ತನು ಕಾದುಕೊಂಡಿರುವಂತೆಯೆ, ಶಿಲ್ಪಿಯಾದವನ ಮನಸ್ಸು ಸದಾಸರ್ವದಾ ಸಿದ್ಧವಾಗಿಯೆ ಪ್ರಸನ್ನವಾಗಿಯೆ ಇರಬೇಕಾಗುತ್ತದೆ.

ಶಿಲ್ಪವು ಎಂದಿಗೆ ಈ ರೀತಿಯಲ್ಲಿ ಸಿದ್ಧವಾಗುವುದಿಲ್ಲವೊ, ಅಂದಿಗೆ ಅದು ನಕಲೆತ್ತಲು ಪ್ರಾರಂಭಿಸುವುದು ಸಹಜ. ಅದೇ ಶಿಲ್ಪದ ಅಧಃಪಾತವು. ಅನುಕರಣವು ಕಲಾಶಾಸ್ತ್ರವಲ್ಲ. ಸಂಗೀತಾಚಾರ್ಯರ ಬದಲಾಗಿ ಗ್ರಮೋಫೋನಾಚಾರ್ಯರನ್ನು ಯಾರೂ ಗೌರವಿಸುವುದಿಲ್ಲ; ಕೋಗಿಲೆಯ ಸ್ವರವನ್ನು ಕವಿಗಳು ಬಣ್ಣಿಸುವುದಕ್ಕಿಂತ ಎಷ್ಟೋ ಚೆನ್ನಾಗಿ ಕಾಸುಬೆಲೆಯ 'ಬಿಗಿಲು' ಊದು ಕೊಳವೆಗಳು ಸ್ಪಷ್ಟಪಡಿಸಿ ಅನುಕರಣಮಾಡುತ್ತಿವೆಯಾದರೂ, ಊದು ಕೊಳವೆಗಳು ಕೋಗಿಲೆಗಳ ಪಂಚಮಸ್ವರದಂತೆಯಾಗಲಿ ಕವಿಗಳಂತೆಯಾಗಲಿ ನಾನಾ ಛಂದಗಳಲ್ಲಿ ನಾನಾ ಅಲಂಕಾರಗಳಲ್ಲಿಯಾಗಲಿ ವಸಂತಕಾಲದ ಭಾವವನ್ನು ಹುಟ್ಟಿಸಲಾರವು. ವೈನಾಹಕ್ಕಿಯು ಮನುಷ್ಯಕಂಠದಲ್ಲಿ ಹಾಡುವ ಸ್ವಭಾವವುಳ್ಳುದಲ್ಲ; ಬಿಗಿಲುಗಳ ಸ್ವಭಾವವು ಕೋಗಿಲೆಯಂತೆ ಹಾಡುವುದಲ್ಲ. ಈ ಬಗೆಯಲ್ಲಿ ಸ್ವಭಾವದ ಅಭಾವವೇ ಅನುಕರಣವೆನಿಸಿರುವುದು. ಸ್ವಭಾವದ ಅಭಾವವು ಎಲ್ಲಿರುವುದೋ ಅಲ್ಲೇ ಕಲೆಯ ಅಭಾವವೂ ಇದ್ದೇ ಇರುವುದು. ಅದುಕಾರಣವೆ ಅನುಕರಣವು ಶಿಲ್ಪವೂ ಅಲ್ಲ, ಶಿಲ್ಪದಂತೆ ಮನಸ್ಸನ್ನು ಆಕರ್ಷಿಸುವುದೂ ಅದಕ್ಕೆ ಸಾಧ್ಯವಲ್ಲ.

ಅನುಕರಣಶೀಲತೆಯ ಮತ್ತೂ ಶಿಲ್ಪದ ಅಧಃಪಾತದ ಪ್ರಸ್ತಾಪವನ್ನು ಎತ್ತಿದುದೇತಕ್ಕೆ? ಕಾರಣವೇನೆಂದರೆ, ಬೌದ್ಧ ಶಿಲ್ಪದಲ್ಲಿ ಗ್ರೀಕ್ ಭಾವವನ್ನು ಕಂಡು, ಕೆಲವರು 'ಆರ್ಯರು ಗ್ರೀಕರಿಂದ ಶಿಲ್ಪ ವಿದ್ಯಾವಿಶೇಷವನ್ನು ಕಲಿತುಕೊಂಡರು' ಎನ್ನುವರು; 'ಜಪಾನು ಶಿಲ್ಪವು ಆರ್ಯಶಿಲ್ಪದಿಂದ ಪಾಠ ಕಲಿಯಿತೆ'ಂದೂ ಎನ್ನುವರು ಆದರೆ ಮೂರು ಶಿಲ್ಪಗಳಿಗೆ ಅಧಿದೇವತೆ ಒಂದೇ ಎಂಬುದನ್ನು ಯಾರೂ, ಮುಖ್ಯವಾಗಿ ಯುರೋಪೀಯರು, ತಿಳಿಯಲೊಪ್ಪುವುದಿಲ್ಲ. ಅಚ್ಚ ಗ್ರೀಕ್ ಮೂರ್ತಿಯನ್ನೂ ಆರ್ಯವರ್ತದ ಮೂರ್ತಿಯನ್ನೂ ಜಪಾನಿನ ಬೋಧಿಸತ್ವ ಮೂರ್ತಿಯನ್ನೂ ಜತೆಯಲ್ಲಿರಿಸಿ ನೋಡಿದರೆ, ಅವು ಮೂರರಲ್ಲಿಯೂ ಒಂದೇ ಬಗೆಯ ಧ್ಯಾನದ ಪ್ರಭಾವವು ಹೊಳೆಯುತ್ತಿರುವುದನ್ನು ಕಾಣಬಹುದು. ಮೂಲಶಿಲ್ಪವು ಒಂದೇ ಎಂದು ಆಗ ತಿಳಿಯುವುದು. ಆದರೆ, ಯಾವ ದೇಶದ ಶಿಲ್ಪಿಗಳು ಇದುವರೆಗೂ ಧ್ಯಾನಮೂರ್ತಿಗಳನ್ನು ಇಂದಿಗೂ ಕೆತ್ತುತ್ತಿದ್ದಾರೆಯೊ ಅವರು ಮಾತ್ರ ಈ ಸತ್ಯವನ್ನು ತಿಳಿಯಬಹುದು. ಜಾಪಾನು ಇದನ್ನು ತಿಳಿದಿದೆ: ಅದು ತನ್ನ ಜಾತಿಯ ಶಿಲ್ಪವನ್ನೇ ಆದರ್ಶವಾಗಿಟ್ಟುಕೊಂಡಿದೆ ಹೊರತು ಯುರೋಪಿನ ಕಡೆಗೆ ಶಿಲ್ಪಶಿಕ್ಷಣಕ್ಕಾಗಿ ಓಡುತ್ತಿಲ್ಲ. ಗ್ರೀಕ್‌ಶಿಲ್ಪವು ತುಂಬ ಅಧಃಪಾತವನ್ನು ಹೊಂದಿದೆ ಗ್ರೀಕ್ ಸಾಮ್ರಾಜ್ಯವು ಕೊನೆಗೊಂಡೊಡನೆ ರೋಮ್ ಸಾಮ್ರಾಜ್ಯವು ತಲೆಯೆತ್ತಲು, ರೋಮದ ಸಮ್ರಾಟರು ನರದೇವ ಸೀಝರನಾಗಿ ರೂಪಾಂತರ ಹೊಂದಿದೊಡನೆ, ಶಿಲ್ಪ ಸಾಹಿತ್ಯ ಕಾವ್ಯಕಲೆ ಎಲ್ಲವೂ ಈ ನರದೇವನ ಮತ್ತು ಅವನ ಅನುಚರವರ್ಗದ ಸೇವೆಗೆ ನಿಯುಕ್ತವಾದುವು ಗ್ರೀಕ್‌ಶಿಲ್ಪವು ಜ್ಯುಪಿಟರನಿಂದ ಸೀಝರನಿಗೆ ಇಳಿಯಿತು. ಶಿಲ್ಪದ ಆದರ್ಶವೂ ಲಕ್ಷ್ಯವೂ

ಭಂಗಹೊಂದಿತು. ಸೌಂದರ್ಯಜ್ಯೋತಿಯು ಕ್ರಮೇಣ ಪಾರ್ಥಿವ ಧನೈಶ್ವರ್ಯಗಳ ತಳುಕನ್ನು ತಳೆಯಿತು. ಕ್ರಿಸ್ತಿಯಾನ್ ಧರ್ಮವು ಪ್ರಚಾರಹೊಂದುತ್ತಿರುವಾಗ ಪುನಃ ಗ್ರೀಕ್‌ಶಿಲ್ಪವು ರೋಮನ್‌ಶಿಲ್ಪದ ಅವತಾರವನ್ನೆತ್ತಿಕೊಂಡು ಧರ್ಮವಿಶ್ವಾಸಗಳಿಂದ ಬಲಹೊಂದಿ ಸ್ವರ್ಗೀಯ ತೇಜಸ್ಸನ್ನು ಪಡೆದು, ಧ್ಯಾನದ ಹಾಗೂ ಧರ್ಮದ ಪ್ರಭಾವವನ್ನು ಸಾರಿದ್ದಿತು. ಆದರೆ ಯಾವಾಗ ರೋಮರಾಜತ್ವದಲ್ಲಿ ಯೇಸುವಿನ ದೀನತೆ ಸಾಮ್ಯತೆ ಶಾಂತಮೂರ್ತಿ ಮುಂತಾದುವುಗಳ ಒಂದೂ ಲಕ್ಷಣ ಕಾಣದಾಯಿತೊ, ಯಾವಾಗ ಸೀಝರನಂತೆ ಪೋಪಸ್ವಾಮಿಯೂ ದೋರ್ದಂಡಪ್ರತಾಪಶಾಲಿಯಾದನೋ ಆಗ, ಶಿಲ್ಪಕಲೆಯು ಯೇಸುವಿನ ಉಪಾಸನೆಯನ್ನು ತ್ಯಜಿಸಿ ಪೋಪನ ಆರಾಧನೆಗೆ ಕೈಹಚ್ಚಿತು. ಈ ಉಪಚಾರವನ್ನು ಕೈಕೊಂಡು ಅದು ಉಪಚಾರಕನಾಗಿ ವೆಟಿಕೆನ್ ರಾಜಪ್ರಾಸಾದದಲ್ಲಿ ಒಂದು ಮೂಲೆಯ ನಿವಾಸಿಯಾಯಿತು. ಪೋಪರ ಅಧಿಕಾರವು ಕಡಿಮೆಯಾಗುತ್ತ ಬಂದಂತೆ,—ಸೂರ್ಯಾಸ್ತಮಯವಾದೊಡನೆ ಕತ್ತಲಲ್ಲಿ ಚಿಕ್ಕದೊಡ್ಡ ದೀಪಗಳು ಬೆಳಗಲಾರಂಭಿಸುವಂತೆ,--ಪೋಪರ ರಾಜತಂತ್ರವು ನಾಶವಾದೊಡನೆ ವಿಲಾಯತಿಯ ದೇಶದೇಶಗಳಲ್ಲಿ ನಾನಾ ರಾಜತಂತ್ರಗಳುಂಟಾದುವು. ಇಷ್ಟುಕಾಲ ಪೋಪರ ಮಹಾಶ್ರಯವನ್ನು ತಳೆದು ಉಳಿದಿದ್ದ ಗ್ರೀಕ್ ಶಿಲ್ಪವು, ಸಿಕ್ಕ ರಾಜರ ಮತ್ತು ರಾಜಪ್ರಣಯಿನಿಯರ ಉಪವನ ಸಜ್ಜಿಯನ್ನು ಮಾಡುತ್ತ ತೋಟಗಾರನ ಕೆಲಸವನ್ನು ಕೈಕೊಳ್ಳಬೇಕಾಯಿತು. ತನ್ನಲ್ಲಿ ಉಳಿದಿದ್ದ ಸ್ವಾಧೀನತೆಯನ್ನೂ ಉಚ್ಚಲಕ್ಷ್ಯವನ್ನೂ ಕಳೆದುಕೊಂಡು ಪ್ರತಿಯೊಬ್ಬ ಅಲ್ಪಶಿಕ್ಷಿತನ ಕೈಗೆ ನಕಲುಗಳನ್ನು ತಂದೊಪ್ಪಿಸಿತು. ಈ ಚಾಕರಿಯೆ ಅದರ ಅಧಃಪತನಕ್ಕೆ ಕಾರಣವಾಯಿತು. ಯೋಗಭ್ರಷ್ಟರಿಗೆ ತಪಸ್ಸಿದ್ಧಿಯಾಗುವುದುಂಟೆ? ಇಂಥ ಶಿಲ್ಪವು ಇನ್ನೂ ಇನ್ನೂ ಪಥಭ್ರಷ್ಟತೆಯನ್ನು ಹೊಂದಿ ಈಗ ಯುರೋಪಿನಲ್ಲಿ ರಾಜಿಸುತ್ತಿರುವುದು. ಗ್ರೀಕ್ ಪುರುಷೋತ್ತಮನು ಈಗ ಸತ್ಯಂಭಟ್ಟನಾಗಿ ವಿಲಾಯತಿಯಲ್ಲಿ ನರಳುತ್ತಿರುವನು.

ಇರಲಿ. 'ಆರ್ಯ ಶಿಲ್ಪವೆಂಬುದು ಎಲ್ಲಿದೆ? ಅದು ಎಂದೋ ಮುಗಿದಿದೆ' ಎನ್ನುವವರಿರುವರು. ಇದು ಸತ್ಯವೆ? ಯಾವ ಧರ್ಮವಿಶ್ವಾಸವನ್ನು ಅವಲಂಬಿಸಿ, ಆರ್ಯಾವರ್ತದ ಶಿಲ್ಪಿಗಳು ತಮ್ಮ ಶ್ರಮವನ್ನು ಶ್ರಮವೆಂದೇ ಬಗೆಯಲಿಲ್ಲವೋ, ಯಾವ ಅಂಥ ವಿಶ್ವಾಸದ ಬಲದಿಂದ ಅವರು ಇಡೀ ಪರ್ವತಗಳನ್ನಾದರೂ ಒಡೆದು ತಮ್ಮಿಚ್ಛೆಯಂತೆ ಮಠಮಂದಿರಗಳನ್ನು ನಿರ್ಮಿಸಿದರೊ, ಪರ್ವತ ಗುಹೆಗಳಲ್ಲಿ ಅಕ್ಷಯ ಪ್ರದೀಪಗಳಂತೆ ಮಹೋಜ್ವಲ ಚಿತ್ರಶ್ರೇಣಿಗಳನ್ನು ಅವರು ಬೆಳಗಿಸಿದರೊ, ಅಂಥ ಅವರ ಧರ್ಮವಿಶ್ವಾಸಕ್ಕೂ ನಮ್ಮಲ್ಲಿರುವ ಧರ್ಮವಿಶ್ವಾಸಕ್ಕೂ ಏನಾದರೂ ತಾರತಮ್ಯವಿದೆಯೇ? ಸನಾತನವಾದ ಹಿಂದೂ ಧರ್ಮವು ಅಂದು ಇದ್ದಂತೆಯೆ ಇಂದಿಗೂ ಇದೆ. ಯಾವ ಜಾತಿಯು ಸಾಂಚೀಸ್ತೂಪಗಳನ್ನು ನಿರ್ಮಾಣಮಾಡಿತೋ, ಅಜಂತಾಗುಹೆಗಳಲ್ಲಿ ಚಿತ್ರಗಳನ್ನು ಕೆತ್ತಿರುವುದೊ, ಅದು ಸ್ವರ್ಗದಿಂದ ಧರೆಗಿಳಿದುದೂ ಅಲ್ಲ, ಪಾತಾಳದಿಂದ ಮೇಲಕ್ಕೆದ್ದು ಬಂದುದೂ ಅಲ್ಲ. ಅಂದೂ ಇಂದೂ ಅದೊಂದೇ ಆರ್ಯಜಾತಿ. ಧರ್ಮದ ಆದರ್ಶವೂ ಸಮಾಜದ ನಿಯಮವೂ ಶಾಸ್ತ್ರದ ಅನುಶಾಸನವೂ ಅಂದಿನಷ್ಟೆ ಇಂದೂ ಪ್ರಚಾರದಲ್ಲಿವೆ. ನಮ್ಮ ಪೂರ್ವಪುರುಷರಿಗೆ ಮಾತ್ರ ನಾವೇತಕ್ಕೆ ಸಮಕಕ್ಷಿಗಳಾಗಿಲ್ಲ? ನಮಗೆ ಆದರ್ಶದ ಅಭಾವವಿಲ್ಲ, ಶಿಲ್ಪಶಾಸ್ತ್ರವೂ ಪ್ರಚಾರತೋರುವುದಿಲ್ಲ. ಆದರೆ, – ಯುರೋಪದ ಭ್ರಷ್ಟಶಿಲ್ಪವು ಮೋಹಕುಹಕದಿಂದ ನಮ್ಮನ್ನು ಆಚ್ಛಾದನಗೊಳಿಸಿದೆ, ಹೊರತಾಗಿ ಲಕ್ಷ್ಯಭ್ರಷ್ಟನಾಗಿ ಮಾಡಿಲ್ಲ. ಇಂದಿನ ಯುರೋಪಿಯ ಕಲಾವಿದ್ಯೆಯೆಂಬುದು ಪಣ್ಯವೀಥಿಗಳಲ್ಲಿ ವೇಶಭೂಷಾದಿದಿಗಳನ್ನು ಧರಿಸಿಕೊಂಡು ಅವುಗಳ ಚಾಕಚಕ್ಯದಿಂದಲೇ ಖಂಡಿತಕ್ರಯಕ್ಕೆ ಅಥವಾ ಡಿಸ್ಕೌಂಟಿಗೆ ಅಥವಾ ಕಂತುವಾಯಿದಗೆ ನಮಗೆ ತಾನಾಗಿ ಮಾರಿಕೊಳ್ಳುತ್ತಲಿದೆ. ಸ್ವರ್ಗಕಾಮನೆಯ ಲಕ್ಷ್ಯವುಳ್ಳ ಶಿಲ್ಪವು ಸ್ವರ್ಣಕಾಮನೆಗೆ ಮುಗ್ಧವಾಗಿದೆ. ಒಂದು ದುಡ್ಡು ಕೊಟ್ಟಲ್ಲಿ ಭಿಕ್ಷೆ ಕೊಟ್ಟ ಪುಣ್ಯವೂ ಬಂತು, ದೇವರ ನಾಮವನ್ನು ಹಾಡಿ ಕೇಳಿದ ಪುಣ್ಯವೂ ಲಭಿಸಿತು ಎಂಬುದೇ ಈಗಣ ಆದರ್ಶವಾಗಿದೆ. ಅಲ್ಲಲ್ಲಿ ಶಹರುಗಳ ಮೈದಾನುಗಳಲ್ಲಿ ಶಿಲಾಮೂರ್ತಿಯ ರೂಪದಲ್ಲಿ ಆಮದಾಗುವ ವಿಲಾಯತಿ ಶಿಲ್ಪವನ್ನೂ ನಮ್ಮ ದೇವಮಂದಿರಗಳಲ್ಲೂ ಬಾಲಕೃಷ್ಣರೂಪಿಂದ ಮೆರೆವ ಇದೇ ಶಿಲ್ಪವನ್ನೂ ನೋಡಸಿಗುವುದಿಲ್ಲವೆ? ಸ್ವರ್ಗ

ಕ್ಕೇರಿದವರು ಪುಣ್ಯಮುಗಿದೊಡನೆ ಪುನಃ ಭೂಮಿಗೆ ಇಳಿವಂತೆ, ದೈವಿಕವಾದ ಲಕ್ಷ್ಯವನ್ನು ಕಳೆದುಕೊಂಡ ಗ್ರೀಕ್ ಶಿಲ್ಪವು ಮರ್ತ್ಯಶಿಲ್ಪವಾಗಿ ತೋರುತ್ತಿರುವುದು, ದುರ್ದಶೆಯಿಂದ ಅದು ನರದೇವನ ಉಪಾಸನೆ ಮಾಡಲು ಕಲಿತುಕೊಂಡು ದೇವತೆಗಳಿಗೆ ಕುರುಡಾಗಿ ಬಂದಿದೆ. ಪ್ರಚಾರಕ್ಕೆ ಬಂದಿರುವ ಶಿಕ್ಷಣದಲ್ಲಿ ಸಹ ಈ ಕುರುಡುತನವೇ ರೂಢಿಗೆ ಬಂದಿದೆ.

ಶಿಲ್ಪದ ಶಿಕ್ಷಣದಲ್ಲಾಗಲೀ, ಪ್ರಚಾರದಲ್ಲಾಗಲಿ ಶಿಲ್ಪದ ಆತ್ಮವನ್ನು ಗ್ರಹಿಸಿಕೊಳ್ಳಬೇಕಾದುದೇ ಮುಖ್ಯವು. ಶಿಲ್ಪದಲ್ಲಿ ಶಿಲ್ಪಿಯ ಮನಸ್ಸು ನೋಡಸಿಗುವುದು. ಕೆಲ ವಂಗುಲ ಉದ್ದಗಲದ ಚೌಕಟ್ಟಿನೊಳಗೆ ಹಿಮಾಲಯವನ್ನು ಅಂಕಿಸಿಟ್ಟು ಗೋಡೆಗೆ ತೂಗಹಾಕಿದರೆ ಲಾಭವೇನು? ಹಿಮಾಲಯವನ್ನು ನೋಡಿದರೆ ನಾವೇನು ಗ್ರಹಣಮಾಡಬಹುದೋ, ಆ ಹಿಮಾಲಯದ 'ಮನಸ್ಸೇ' ಅದೇ ನಮಗೆ ಬೇಕಾದುದು. ಹಿಂದಣವರು ಮಾಡಿಟ್ಟಿರುವ ಶಿಲಾಗ್ರಹಗಳನ್ನು ನೋಡಿದರೆ, ಪ್ರಕೃತಿಯೊಡನೆ ಮಾನವ ಮನಸ್ಸು ಎಂಥ ಸಂಬಂಧವನ್ನು ಬೆಳೆಯಿಸಿದ್ದಿತೆಂಬುದನ್ನು ತಿಳಿಯಲಾಗುತ್ತಿದೆ. ಆದರೆ, ಆ ಶಿಲ್ಪಿಗಳು ಗಾಳಿಯನ್ನು ನುಂಗಿಕೊಂಡು, ಹೂಗಳ ಮಕರಂದವನ್ನು ಕುಡಿದು ಜೀವನಧಾರಣಮಾಡಿಕೊಂಡಿದ್ದಿಲ್ಲ; ಅವರಿಗೆ ಸಂಸಾರ ಚಿಂತೆ ಇದ್ದೇ ಇದ್ದಿತು. ಆದರೂ ಅವರು ಇಂಥ ಶಿಲಾಪ್ರತಿಮೆಗಳನ್ನು ಮಾಡಿಡುವುದಕ್ಕೆ ಸಾಹಸಪಟ್ಟರು. ಅವರ ಪ್ರತಿಮೆಗಳೇನೂ ಆ ಕಾಲದ ಮನುಷ್ಯರ ನಕಲುಗಳಾಗಿಲ್ಲ; ಇತರ ವಿಗ್ರಹಗಳ ಅನುಕರಣದಿಂದಲೂ ಉಂಟಾದುವಲ್ಲ. ಸ್ವಭಾವದೊಡನೆ ಭಾವ—ತನವನ್ನು ಗಳಿಸಿಕೊಳ್ಳಲು ಅವರು ಕಲಿತುಕೊಂಡಿದ್ದರಿಂದಲೇ ಅವರು ಅಂಥ ಸಾಹಿತ್ಯ, ಸಂಗೀತ, ಶಿಲ್ಪ, ಕಲಾ, ಕಾವ್ಯ ಮೊದಲಾದೆಲ್ಲವನ್ನೂ ರಚಿಸಿಡಲು ಅಪೂರ್ವ ಯೋಗ್ಯತೆ ಪಡೆದರು. ಆ ಯೋಗ್ಯತೆಯನ್ನು ಪಡೆಯುವುದಕ್ಕೆ ಅಗತ್ಯವಾದ ಸಾಧನೆಯ ಮರ್ಮವನ್ನು ಹುಡುಕುವುದೇ ನಮಗೀಗ ಮುಖ್ಯೋದ್ಯೋಗವಾಗಿರತಕ್ಕುದಾಗಿದೆ.

ಗ್ರೀಕರು 'ಅಯೊಲಿಯನ್ ಹಾರ್ಪ್' ಎಂಬುವ ವಿಚಿತ್ರ ಗಾಯನ ಯಂತ್ರವನ್ನು ನಿರ್ಮಿಸಿದ್ದರು. ಅದನ್ನು ಮನೆಯ ಬಾಗಿಲಲ್ಲಿ ತೂಗಹಾಕಿದರ, ಸಾಮಾನ್ಯ ಗಾಳಿಯು ಬೀಸಲು ಆ ಯಂತ್ರದಿಂದ ವಿಚಿತ್ರವಾದ ಸಂಗೀತವು ಹೊರಡುತಿದ್ದಿತು. ಶಿಲ್ಪಿಯ (ಹಾಗೂ ಸಾಹಿತ್ಯಿಕನ ಅಥವಾ ಕವಿಯ) ಮನೋವೀಣೆಯನ್ನು ಇದೇ ರೀತಿಯಲ್ಲಿ ನಾಲ್ಕು ದಿಕ್ಕಿನ ಪ್ರಕೃತಿಯೊಂದಿಗೆ ಸಮಸ್ವರವಾಗಿ ಮಿಲನಗೊಳಿಸಿಡುವ ಅವಶ್ಯಕತೆ ಇರುವುದು. ಆಗ ಸ್ವಭಾವದ ಸಾಮಾನ್ಯ ಸ್ಪರ್ಶದಿಂದಲಾದರೂ ಅದರಿಂದ ಅನುಪಮ ಸ್ವರವು ಹೊರಡದಿರದು. ಸುಖ ದುಃಖ, ಲಾಭ ಅಲಾಭಗಳು ಹಾಗೇ ಇರಲಿ,—ಈ ಮನೋವೀಣೆಯು ಮಾತ್ರ ವಿಶ್ವವೀಣೆಯೊಡನೆ ಸಮಸ್ವರವಾಗಿಯೆ ಸರ್ವದಾ ಇರಲಿ! ಸುಖದ ಆನಂದ ಬಾಷ್ಪ, ದುಃಖದ ಪೀಡನೋದ್ರೇಕ ಇವುಗಳಿಂದ ಈ ಮನೋವೀಣೆಯು ಅಗಲೆ ಸಂಗೀತಧ್ವನಿಯನ್ನು ಹೊರಡಿಸುವುದು. ನಾರದನ ವೀಣೆಯು ಇಂಥದೇ. ಅನ್ನಕಷ್ಟವುಂಟಾಗಲಿ, ಅರ್ಥಕಾಮನೆಯಿಂದ ನರಳುತ್ತಿರಲಿ,—ಪರಂತು ಮನೋವೀಣೆಯು ವಿರಾಟ್‌ವಿಶ್ವದ ಭಾವತರಂಗಗಳಿಂದ ಝೇಂಕರಿಸಿ ಮೊಳಗುವಂತೆ ಯಾವಾಗಲೂ ಸಿದ್ಧವಾಗಿರಲಿ!

*ಇನ್ನು ವಿಷಯ ಸಂಗ್ರಹವನ್ನು ಮಾಡಲಿಚ್ಛಿಸುವವರು ಸುಪ್ರಸಿದ್ಧ ಶಿಲ್ಪಶಾಸ್ತ್ರ ವಿಶಾರದ ಡಾ। ಅವನೀಂದ್ರನಾಥ ಠಾಕೂರರ ಕೆಲ ಪ್ರಬಂಧಗಳನ್ನು ಓದಿಕೊಳ್ಳಲು ಸೂಚನೆ.

# ಮಹಾಭಾರತ ಯುದ್ಧವು.

(ಲೇಖಕ:- ಶ್ರೀಯುತ ಐ. ಶಿವರಾಮಯ್ಯ, ಕನ್ನಡ ಪಂಡಿತ, ಬೋರ್ಡ್ ಹೈಸ್ಕೂಲು, ಕುಂದಾಪುರ).

ಮಹಾಭಾರತ ಯುದ್ಧವು ಯಾವಾಗ ನಡೆಯಿತು ಎಂಬುವುದನ್ನು ಕುರಿತು ಇದು ವರೆಗೆ ಸರಿಯಾದ ಆಧಾರವು ದೊರೆಯದಿದ್ದರೂ ಪುರಾಣೇತಿಹಾಸಗಳ ಮೇಲಿಂದ ಆ ಯುದ್ಧವು ನಡೆದು ಇಂದಿಗೆ ೫೦೨೮ ಸಂವತ್ಸರಗಳು ದಾಟದುವು ಎಂದು ಒಂದು ಮತವು. ಈ ಮತಕ್ಕೆ ಇರುವ ಆಧಾರ ವೇನೆಂದರೆ- ದುರ್ಯೋಧನನ ಮರಣದ ದಿನವೇ ಕಲಿ ಬಂದಿತೆಂತಲೂ, ಈಗ ಕಲಿಯುಗದಲ್ಲಿ ೫೦೨೮ ವರುಷಗಳು ದಾಟದುದರಿಂದ ಭಾರತಯುದ್ಧವು ನಡೆದು ೫೦೨೮ ವರುಷ ಗಳಾದುವೆಂದೂ ಒಂದು ಅಭಿಪ್ರಾಯವಿರುವುದು. ಇದಕ್ಕೆ ಎರಡನೆಯದಾದ ಇನ್ನೊಂದು ಮತವು:—

ಮಹಾಭಾರತ ಭೀಷ್ಮಪರ್ವ ಅ. ೧೨೦ ಶ್ಲೋ. ೯೨ರಿಂದ ೧೦೭ರ ವರೆಗೆ "ಭೀಷ್ಮನು ಭೂಪತನವಾಗುವ ವೇಳೆ ದಕ್ಷಿಣಾ ಯನವಾಗಿದ್ದಿತು. ಇದನ್ನು ನೋಡಿ ದೇವತೆಗಳು 'ಎಲೈ ಭೀಷ್ಮನೇ! ನೀನು ಇಷ್ಟು ಕಾಲ ಬದುಕಿ ಈಗ ದಕ್ಷಿಣಾಯನ ದಲ್ಲಿ ಮಡಿಯುವುದು ಉಚಿತವಲ್ಲ' ಎಂದು ನುಡಿದರು. ಅದೇ ವೇಳೆ ಗಂಗೆಯು ಇದನ್ನು ಚಿಂತಿಸಿ ಮಹರ್ಷಿಗಳೊಡನೆ- 'ನೀವು ಹಂಸಪಕ್ಷಿಗಳ ರೂಪದಿಂದ ಭೀಷ್ಮನ ಬಳಿಗೆ ಹೋಗಿ ಈ ದಕ್ಷಿಣಾಯನದಲ್ಲಿ ಮಡಿಯುವುದು ಉಚಿತವಲ್ಲವೆಂದು ನಾನು ತಿಳಿಸಿರುವುದಾಗಿ ಹೇಳಿ, ಹೋಗಿ!' ಎನ್ನಲು ಆ ಋಷಿ ಗಳು ಆ ಮೇರೆಗೆ ಹಂಸರೂಪವನ್ನು ಧರಿಸಿ ತ್ವರೆಯಾಗಿ ಭೀಷ್ಮನ ಬಳಿಗೆ ಬಂದು 'ಮಹಾತ್ಮನಾದ ಭೀಷ್ಮನೆ! ನೀನು ಈ ದಕ್ಷಿಣಾಯನದಲ್ಲಿ ಹೇಗೆ ಮಡಿಯುವುದಕ್ಕೆ ಇಚ್ಛಿಸಿದೆ?' ಎಂದು ನುಡಿದು ತ್ವರೆಯಾಗಿ ಹೊರಟುಹೋದವು. ಅದನ್ನು ಕೇಳಿ ಭೀಷ್ಮನು 'ನಿಮಗೆ ಆ ಯೋಚನೆಯು ಬೇಡ, ನಾನು ನನ್ನ ತಂದೆಯವರ ಬಲದಿಂದ ಆ ಉತ್ತರಾಯಣವು ಸನ್ನಿಹಿತ ವಾಗುವ ವರೆಗೂ ಬದುಕಿರುವೆನು' ಎಂದು ನುಡಿದು ಉತ್ತ ರಾಯಣವು ಬರುವ ವರೆಗೆ ಕಾದಿದ್ದನು" ಎಂದೂ ಹೇಳಿರು ವುದು. ಮುಂದೆ ಶಾಂತಿಪರ್ವದ ಅಂತ್ಯದಲ್ಲಿ ಭೀಷ್ಮನ ನಿರ್ಯಾಣದ ವೇಳೆಗೆ ಮಹಾಭಾರತ ಯುದ್ಧವು ಮುಗಿದು ಎರಡು ತಿಂಗಳ ಕಾಲವು ದಾಟಹೋಗಿದ್ದಿತೆಂತಲೂ ಆ ಸಮ ಯಕ್ಕೆ ಮಕರಸಂಕ್ರಾಂತಿಯು ಬಂದು ಉತ್ತರಾಯಣಕ್ಕೆ ಪ್ರಾರಂಭವಾದ ಕಾರಣ, ಮರುದಿನ ಅಷ್ಟಮಿಯ ದಿನ ಶೌರ್ಯ ಧೈರ್ಯಗಳಿಗೂ, ಧನುರ್ವಿದ್ಯೆಗೂ, ಜ್ಞಾನಕ್ಕೂ ಪರಾಕಾಷ್ಠೆ ಯನ್ನು ಹೊಂದಿದ್ದ ಭೀಷ್ಮನು ನಿರ್ಯಾಣೋನ್ಮುಖನಾಗಲು ವಿದುರನೂ, ಯುಧಿಷ್ಠಿರನೂ ಆ ಶವವನ್ನು ರಾಜೋಪಚಾರ ಗಳಿಂದಲೇ ಗಂಗಾತೀರಕ್ಕೆ ಹೊತ್ತೊಯ್ದು ಅಲ್ಲಿ ದಹಿಸಿದ ರೆಂದೂ ಹೇಳಿರುವುದು.

ಇಲ್ಲಿ ವಿಚಾರವಿರುವುದು. ಈಗ ಭೀಷ್ಮನಿರ್ಯಾಣವನ್ನು ಹೊಂದಿದ ಅಷ್ಟಮಿಯನ್ನು ಭೀಷ್ಮಾಷ್ಟಮಿಯೆಂದು ಕರೆಯು ವರು. ಈ ಭೀಷ್ಮಾಷ್ಟಮಿಯ ಹಿಂದಿನ ದಿನವೇ ರಥಸಪ್ತಮಿ ಯು. ಈಗ ಈ ರಥಸಪ್ತಮಿಯೂ, ಭೀಷ್ಮಾಷ್ಟಮಿಯೂ ಮಾಘಮಾಸದಲ್ಲಿ ಬರುತ್ತಿವೆ. ಮಕರ ಸಂಕ್ರಮಣವು ಮಾತ್ರ ಪುಷ್ಯದಲ್ಲಿಯೇ ಬಂದುಬಿಡುವುದು. ಭೀಷ್ಮನಿರ್ಯಾಣದ ವೇಳೆ ಮಕರ ಸಂಕ್ರಮಣವು ಕೂಡ ಮಾಘದಲ್ಲಿಯೇ ರಥಸಪ್ತಮಿ ಯ ದಿನವೇ ಬಂದಿರಬೇಕು. ರಥಸಪ್ತಮಿಯೆಂದರೆ ಸೂರ್ಯನ ರಥವು ಉತ್ತರಕ್ಕೆ ತಿರುಗುವ ದಿನವೆಂದು ಅರ್ಥವಾಗುವುದು.

ಮಹಾಭಾರತದ ಕಾಲದಲ್ಲಿ ಮಾರ್ಗಶೀರ್ಷ ಮಾಸ ವನ್ನೇ ಸಂವತ್ಸರದ ಆದಿಮಾಸವೆಂದು ಗಣಿಸುತ್ತಿರಬೇಕೆಂದು ತೋರುವುದು. ಇದರಿಂದ ಗೀತೆಯಲ್ಲಿ ಕೂಡ ಶ್ರೀಕೃಷ್ಣನು 'ಮಾಸಾನಾಂ ಮಾರ್ಗಶೀರ್ಷೋಽಸ್ಮಿ' ಎಂದು ನುಡಿದಿರುವನು. ಅಲ್ಲಿಂದ ಎರಡು ತಿಂಗಳ ಕಾಲವು ದಾಟದ ತರುವಾಯ ಮಾಘ ದಲ್ಲಿ ಉತ್ತರಾಯಣದ ದಿನ ಭೀಷ್ಮನ ನಿರ್ಯಾಣವಾಯಿತು. ಆದರೆ ಈ ಕಾಲದಲ್ಲಿ ಮಕರಸಂಕ್ರಮಣವು ಮಾಘದಲ್ಲಿ ಬಾ ರದೆ ಪುಷ್ಯದಲ್ಲಿಯೇ ಬಂದು ಬಿಡುವುದಕ್ಕೆ ಗ್ರಹಚಲನೆಯಲ್ಲುಂ ಟಾಗುವ ವ್ಯತ್ಯಾಸವೇ ಕಾರಣವೆಂದು ಬಲ್ಲವರು ಹೇಳುವರು. ಗಡಿಯಾರದೊಳಗಿನ ಮುಳ್ಳು ತಿರುಗುತ್ತಾ ತಿರುಗುತ್ತಾ ಕ್ರಮಕ್ರಮವಾಗಿ ಹಿಂದೆ ಬೀಳುವಂತೆ ಗ್ರಹಚಲನೆಯಲ್ಲಿಯೂ ವ್ಯತ್ಯಾಸವಾಗುವುದು. ಈ ವ್ಯತ್ಯಾಸಕ್ಕೂ ಒಂದು ನಿಯಮ ವಿರುವುದರಿಂದ ಆ ನಿಯಮವನ್ನು ಹಿಡಿದು ವಿದ್ವಾಂಸರು ಲೆಕ್ಕಹಾಕಿ ಭಾರತಯುದ್ಧವು ನಡೆದು ಸ್ವಲ್ಪ ಕಡಮೆ ಈಗ ೫೦೦೦ ವರುಷ ದಾಟರಬಹುದೆಂದು ತರ್ಕಿಸುತ್ತಾರೆ.

ಮೂರನೆಯ ಸಿದ್ಧಾಂತವೇನೆಂದರೆ ಶಾಕದ್ವಿತೀಯನಾದ ವರಾಹಮಿಹಿರಾಚಾರ್ಯನ ವಚನವು. ಈತನು

**ಆಸನ್ಮಘಾಸು ಮುನಯಃ ಶಾಸತಿ ಪೃಥ್ವೀಂ ಯುಧಿಷ್ಠಿರೇ ನೃಪತೌ ॥ ಷಡ್ದ್ವಿಕ ಪಂಚದ್ವಿಯುತಃ ಶಕಕಾಲಸ್ತಸ್ಯ ರಾಜ್ಞಶ್ಚ ॥** ಎಂದು ಹೇಳಿರುವನು.

ಅಂದರೆ ಮರೀಚ್ಯಾದಿ ಸಪ್ತರ್ಷಿಮಂಡಲವು ಮಘೆಯಲ್ಲಿರುವ ವೇಳೆ ಯುಧಿಷ್ಠಿರನ ಆಳಿಕೆಗೆ ಪ್ರಾರಂಭವಾಯಿತೆಂದೂ, ಆ ಮೇಲೆ ಯುಧಿಷ್ಠಿರಶಕೆಯು ೨೫೨೬ ವರ್ಷಕಾಲ ದಾಟಿತೆಂದೂ ಅರ್ಥವಾಗುವುದು. ಈ ಯುಧಿಷ್ಠಿರಶಕೆಗೆ ಈಗ ಸಲ್ಲುವ ಶಾಲಿವಾಹನ ಶಕವರ್ಷ ೧೮೪೯ನ್ನು ಸೇರಿಸಿದರೆ ಒಟ್ಟಿಗೆ ಬರುವ ೪೩೭೫ ವರುಷವು ಯುಧಿಷ್ಠಿರನು ಸಿಂಹಾಸನಕ್ಕೆ ಬಂದು ದಾಟಿ ಹೋದ ಸಮಯವನ್ನು ಸೂಚಿಸುವುದು. ಇದರಿಂದ ಭಾರತಯುದ್ಧವಾಗಿಯೂ ಇಷ್ಟು ಕಾಲ ಮಾತ್ರ ದಾಟಿರಬೇಕೆಂದು ವರಾಹಮಿಹಿರಾಚಾರ್ಯರ ಮತದಿಂದ ವ್ಯಕ್ತವಾಗುವುದು. ಈ ವಿಚಾರದಲ್ಲಿ ಕಹ್ಲಣನ ಮತವೂ ಒಂದಿರುವುದು. ಈತನು

**ಶತೇಷು ಷಟ್ಸು ಸಾರ್ಧೇಷು ತ್ರ್ಯಧಿಕೇಷು ಚ ಭೂತಲೆ । ಕಲೇರ್ಗತೇಷು ವರ್ಷಾಣಾಮಭೂವನ್ಕುರುಪಾಂಡವಾಃ ॥**

ಅಂದರೆ ಕಲಿಯುಗದಲ್ಲಿ ೬೫೩ ವರುಷಗಳು ದಾಟುತ್ತಿರುವ ವೇಳೆ ಕುರುಪಾಂಡವರು ಇದ್ದರು ಎನ್ನುವನು. ಇವನ ಮತದ ಪ್ರಕಾರ ವಿಚಾರ ಮಾಡುತ್ತಾ ಹೋದಲ್ಲಿ

| | |
|---|---|
| ಪಾಂಡವರು ಇರುವ ವೇಳೆಗೆ ಕಲಿಯುಗದಲ್ಲಿ ಸಂದ ಕಾಲ = | ೬೫೩ ವರುಷ |
| ಆ ಮೇಲೆ ಶಾಲಿವಾಹನಶಕ ಪ್ರಾರಂಭಕ್ಕೆ ಸಂದ ಯುಧಿಷ್ಠಿರಶಕಾಬ್ದ = | ೨೫೨೬ ” |
| ಈಗ ನಡೆಯುವ ಶಾಲಿವಾಹನ ಶಕೆಯಲ್ಲಿ ಸಂದ ಕಾಲ = | ೧೮೪೯ ” |
| ಒಟ್ಟು | ೫೦೨೮ ” |

ಅಂದರೆ ಈಗ ಕಲಿಯುಗದಲ್ಲಿ ಮಾತ್ರ ೫೦೨೮ ವರುಷಗಳು ಸಂದಂತಾಯಿತು. ಆದರೆ ಯುಧಿಷ್ಠಿರನು ಪಟ್ಟವೇರುವ ವೇಳೆಗೆ ಕಲಿಯುಗದಲ್ಲಿ ೬೫೩ ವರುಷಗಳು ಸಂದುಹೋಗಿರುವುದರಿಂದ ಭಾರತಯುದ್ಧವು ನಡೆದು ಸುಮಾರು ೪೩೭೫ ವರುಷಗಳು ಮಾತ್ರ ದಾಟಿದುವೆಂಬ ವರಾಹಮಿಹಿರಾಚಾರ್ಯರ ಮತವನ್ನು ಕಹ್ಲಣನೂ ಒಪ್ಪಿದಂತಾಯಿತು.

ಇನ್ನು ಮುಂದೆ ಬರುವುದು ಪೌರಾಣಿಕರ ಮತವು. ಇವುಗಳಲ್ಲಿ ಮೊತ್ತಮೊದಲು ವಿಷ್ಣುಪುರಾಣದ ಮತವನ್ನು ಕುರಿತು ವಿಚಾರಿಸುವ. ವಿಷ್ಣುಪುರಾಣ ಚತುರ್ಥಾಂಶ ೨೪ನೆಯ ಅಧ್ಯಾಯದಲ್ಲಿ:—

**ಯಾವತ್ಪರೀಕ್ಷಿತೋ ಜನ್ಮ ಯಾವನ್ನಂದಾಭಿಷೇಚನಮ್ । ಏತದ್ವರ್ಷಸಹಸ್ರಂ ತೇ ಜ್ಞೇಯಂ ಪಂಚಾಶದುತ್ತರಮ್ ॥**

ಅರ್ಥ:— ಪರೀಕ್ಷಿತ ಮಹಾರಾಯನು ಹುಟ್ಟಿದಂದಿನಿಂದ ಪಾಟಲಿಪುತ್ರದಲ್ಲಿ ನವನಂದರಿಗೆ ಪಟ್ಟಾಭಿಷೇಕವಾಗುವ ಪರ್ಯಂತ ೧೦೫೦ ವರ್ಷವು ಸಂದಿತು. ಆದರೆ ಇಲ್ಲಿ ಬಂದಿರುವ 'ಪಂಚಾಶದುತ್ತರಮ್' ಎಂಬ ಪದವು ತಪ್ಪಾಗಿರಬೇಕು. ಏಕೆಂದರೆ ವಾಯುಪುರಾಣದಲ್ಲಿ ಬಂದಿರುವ ಈ ಮಾತನ್ನು 'ಪಂಚಶತೋತ್ತರಮ್' ಎಂದು ಹೇಳಿದೆ. ಇದರಿಂದ ಇಡೀ ಶ್ಲೋಕಕ್ಕೆ ಪರೀಕ್ಷಿತನ ಜನ್ಮಕಾಲದಿಂದ ನಂದರ ಪಟ್ಟಾಭಿಷೇಕ ಕಾಲದ ವರೆಗೆ ೧೫೦೦ ವರುಷಗಳು ಸಂದವು ಎಂದೇ ಅರ್ಥವಾಗಬೇಕು. (ಎಂದು ವಿಷ್ಣುಚಿತ್ತ್ಯಾಚಾರ್ಯರ ಅಭಿಪ್ರಾಯವು.)

ಈ ಮೇಲಿನ ಶ್ಲೋಕಕ್ಕೆ ವಿಷ್ಣುಚಿತ್ತ್ಯಾಚಾರ್ಯರು ಹೀಗೆ ಅರ್ಥ ಬರೆದಿರುವರು. ಪರೀಕ್ಷಿತನು ಪಟ್ಟವೇರುವ ವೇಳೆ ಮಗಧದೇಶದಲ್ಲಿ ಸೋಮನೆಂಬವನು ಆಳುತ್ತಿದ್ದನು. ಅವನಿಂದ ರಿಪುಂಜಯನ ಆಳ್ವಿಕೆಯ ವರೆಗೆ ೧೦೦೦ ವರುಷಗಳು ದಾಟಿದುವು. ಆಮೇಲೆ ಪ್ರದ್ಯೋತಶಿಶುನಾಭರ ಸಂತತಿಯವರು ೫೦೦ ವರುಷ; ಹೀಗೆ ನಂದರ ಕಾಲಕ್ಕೆ ೧೫೦೦ ವರುಷ ದಾಟಿತು. ಯಾವಾಗ ನಂದರು ಸಿಂಹಾಸನದ ಮೇಲೆ ಕೂತರೋ ಆಗ ಅವರ ದುಷ್ಟವಾದ ಆಳುವಿಕೆಯ ನಿಮಿತ್ತ ಕಲಿಯು ಪ್ರಖರವಾಗಿ ಹರಡಹತ್ತಿತು. ನಂದರು ಪಟ್ಟವೇರುವಾಗ ಸಪ್ತರ್ಷಿಮಂಡಲವು ಪೂರ್ವಾಷಾಢ ನಕ್ಷತ್ರಕ್ಕೆ ಹೋಗುತ್ತಿದ್ದಿತು. ಅಂದೇ ಅಧರ್ಮದ ವೃದ್ಧಿಯು. 'ನಂದಾಂತಂ ಕ್ಷತ್ರಿಯಕುಲಂ' ಎಂಬ ವಚನವನ್ನನುಸರಿಸಿ ಜಾತಿಕ್ಷತ್ರಿಯರ ವಂಶವು ನಂದರ ವರೆಗೆ ಮಾತ್ರವೇ ಇದ್ದು ಆ ಮೇಲೆ ಅದು ಸಂಪೂರ್ಣವಾಗಿ ನಾಶವಾಗಿ ಮುಂದೆ ಶೂದ್ರರು ಸಿಂಹಾಸನಕ್ಕೆ ಬರತೊಡಗಿದುದರಿಂದ ಪಾಪವು ವೃದ್ಧಿಯಾಗಹತ್ತಿತು.

ಅದೇ ಶ್ಲೋಕಕ್ಕೆ ಶ್ರೀ ಶ್ರೀಧರ ಸ್ವಾಮಿಗಳು ಸ್ವಲ್ಪ ವ್ಯತ್ಯಾಸವಾಗಿ ವ್ಯಾಖ್ಯಾನ ಹೇಳುತ್ತಾರೆ:— ಪರೀಕ್ಷಿತನ ಜನ್ಮಕಾಲದಿಂದ ನಂದಾಭಿಷೇಚನದ ವರೆಗಿನ ೧೫೦೦ ವರುಷಗಳಲ್ಲಿ ಶುದ್ಧ ಕ್ಷತ್ರಿಯ ವಂಶವು ಇದ್ದಿತು. ಅನಂತರ ಪ್ರದ್ಯೋತನ ಮೊದಲಾದ ಇತರ ವಂಶೀಯರ ಆಳುವಿಕೆಗೆ ತೊಡಗಿತು. ಆದರೆ ಅವರು ಎಷ್ಟು ಕಾಲವಾಳಿದರೆಂಬುವುದನ್ನು ಇಲ್ಲಿ

ಹೇಳಲಿಲ್ಲ. ಹೀಗೆ ಅರ್ಥ ಹೇಳದೆ ಹೋದರೆ ಪರೀಕ್ಷಿತನ ಸಮಕಾಲೀನನಾದ ಸೋಮನೆಂಬ ಮಗಧರಾಜನಿಂದ ತೊಡಗಿ ರಿಪುಂಜಯನ ವರೆಗೆ ಮಗಧವಂಶೀಯರಿಗೆನೇ ಸಾವಿರ ವರುಷಗಳು ದಾಟುತ್ತವೆ; ಆ ಮೇಲೆ ಪ್ರದ್ಯೋತ ಶಿಶುನಾಭರ ವರೆಗೆ ೫೦೦ ವರುಷಗಳು; ಹೀಗೆ ೧೫೦೦ ವರುಷಗಳು ಮಾತ್ರವಾಗುವುದರಿಂದ ಹಿಂದಿನ ಶ್ಲೋಕಾರ್ಥಕ್ಕೆ ವ್ಯತ್ಯಾಸ ಬರುವುದು ಎಂದು. ಸ್ವಾಮಿಗಳ ಈ ಅಭಿಪ್ರಾಯವು ಸಮಂಜಸವೆಂದು ತೋರುವುದು. ಏಕೆಂದರೆ ಇದೇ ಅಧ್ಯಾಯದ ಪ್ರಾರಂಭದಿಂದ ಬಂದಿರುವ ವಂಶವೃಕ್ಷವನ್ನು ನೋಡಿದರೆ ಪರೀಕ್ಷಿತನ ಕಾಲದಲ್ಲಿ ಮಗಧದೇಶದ ಸಿಂಹಾಸನವೇರಿದವನು ಜರಾಸಂಧನ ಮೊಮ್ಮಗನಾದ ಸೋಮನು. ಈ ಸೋಮನಿಂದ ತೊಡಗಿ ರಿಪುಂಜಯನ ವರೆಗೆ ಇಪ್ಪತ್ತು ಮಂದಿ ಅರಸರು ಒಂದು ಸಾವಿರ ವರುಷ ಮಗಧವನ್ನು ಆಳಿದರು.

ತರುವಾಯ ರಿಪುಂಜಯನ ಮಂತ್ರಿಯಾದ ಮುನಿಕನೆಂಬವನು ತನ್ನ ಸ್ವಾಮಿಯಾದ ರಿಪುಂಜಯನನ್ನು ಕೊಂದು ಅವನ ಸ್ಥಾನದಲ್ಲಿ ತನ್ನ ಮಗನಾದ ಪ್ರದ್ಯೋತನಿಗೆ ಪಟ್ಟಾಭಿಷೇಕವನ್ನು ಮಾಡುವನು. ಈ ಪ್ರದ್ಯೋತನ ಸಂತತಿಯ ಆರು ಮಂದಿ ಅರಸರು ೬೩೮ ವರುಷ ಮಗಧವನ್ನು ಆಳುವರು.

ಆ ಮೇಲೆ ಶಿಶುನಾಭನಿಂದ ತೊಡಗಿ ಮಹಾನಂದಿಯ ವರೆಗೆ ಹತ್ತು ಮಂದಿ ಅರಸರು ೩೬೨ ವರುಷ ಆಳುವರು.

ಮಹಾನಂದಿಯ ತರುವಾಯ ಶೂದ್ರಗರ್ಭದಲ್ಲಿ ಹುಟ್ಟಿದ ಮಹಾ ಬಲಶಾಲಿಯಾದ ಮಹಾಪದ್ಮನಂದನು ರಾಜನಾಗುವನು. ಈತನು ಮಹಾಲೋಭಿ, ಮಹಾಬಲಿಷ್ಠನು. ಈತನಿಗೆ ಸುಮಾಲಿ ಮೊದಲಾದ ಎಂಟು ಮಂದಿ ಮಕ್ಕಳು; ೧೦೦ ವರುಷ ರಾಜ್ಯವಾಳುವರು. ಇವರೇ ಚರಿತ್ರೆಯಲ್ಲಿ ನವನಂದರೆಂದು ಪ್ರಸಿದ್ಧಿಗೆ ಬಂದವರು. ಇವರನ್ನು ಕೌಟಲ್ಯನೆಂಬ ಬ್ರಾಹ್ಮಣನು ನಾಶಮಾಡುವನು. ಈ ಮಹಾಪದ್ಮನಂದನಲ್ಲಿ ಒಂದು ಲಕ್ಷಕೋಟಿ ದ್ರವ್ಯವಿದ್ದಿತೆಂದೂ, ಅದರಿಂದಲೇ ಈತನಿಗೆ ಮಹಾಪದ್ಮನಂದನೆಂದು ಹೆಸರಾಯಿತೆಂದೂ ವಿಷ್ಣುಪುರಾಣವು ಹೇಳುವುದು.

ಆ ಮೇಲೆ ಮೌರ್ಯರು ರಾಜರಾಗುವರು. ಚಂದ್ರಗುಪ್ತ ಮೌರ್ಯನಿಂದ ತೊಡಗಿ ಬೃಹದ್ರಥನ ವರೆಗೆ ಹತ್ತು ಮಂದಿ ಮೌರ್ಯರು ೧೩೭ ವರುಷ ಆಳುವರು. ತರುವಾಯ ಶುಂಗ ವಂಶೀಯರು ಪಟ್ಟಕ್ಕೆ ಬರುವರು. ಇವರಲ್ಲಿ ಹತ್ತು ಮಂದಿ ರಾಜರು ೧೧೨ ವರುಷ ಆಳುವರು. ಆ ಮೇಲೆ ಕಣ್ವವಂಶೀಯರು ಪಟ್ಟಕ್ಕೆ ಬಂದು ಈ ವಂಶದ ನಾಲ್ವರು ಅರಸರು ೪೫ ವರುಷ ಆಳುವರು. ತರುವಾಯ ಆಂಧ್ರ ವಂಶೀಯರ ಪಾಲಿಗೆ ರಾಜ್ಯವು ಹೋಗುವುದು. ಈ ವಂಶದ ಸುಮಾರು ೩೫ ಮಂದಿ ರಾಜರು ೪೮೬ ವರುಷ ಮಗಧರಾಜ್ಯವನ್ನು ಆಳುವರು. ತರುವಾಯ ಇನ್ನೂ ಕೆಲವು ಶೂದ್ರವಂಶೀಯರೂ, ತುರುಸ್ಕರೂ ಇವರೆಲ್ಲಾ ಸೇರಿ ೧೪೯೦ ವರುಷ ಆಳುವರು. ವಿಷ್ಣುಪುರಾಣವು ಆ ಮೇಲೆಯೂ ೧೦೬ ವರುಷಗಳ ವರೆಗೆ ಆಳಿದವರ ಹೆಸರು ಹೇಳಿ, ಮುಂದೆ ಅಲ್ಲಿ ಆಳಿದ ಕೆಲವು ವಂಶೀಯರ ಹೆಸರು ಮಾತ್ರ ಹೇಳುವುದು.

ಈ ವಂಶವೃಕ್ಷದ ಪ್ರಕಾರ ಎಣಿಕೆ ಹಾಕುತ್ತಾ ಹೋದರೆ ನವನಂದರ ಕಾಲಕ್ಕೆ ಪರೀಕ್ಷಿತನು ಪಟ್ಟವೇರಿ ೨೩೦೦ ವರುಷವಾಗುವುದು. ಆ ಮೇಲೆ ಈಚೆಗೆ ದಾಟಿದ ಸುಮಾರು ೨ ಸಾವಿರ ಚಿಲ್ಲರೆ ವರುಷಗಳನ್ನು ಇವುಗಳ ಜತೆಗೆ ಸೇರಿಸಿದರೆ ವರಾಹಮಿಹಿರಾಚಾರ್ಯರೂ ಕಲ್ಹಣನೂ ಕೂಡ ಹೇಳುವ ೪೩೭೫ ವರುಷಗಳೆಂಬ ಸಂಖ್ಯೆಯೇ ಸರಿಯೆಂದು ತೋರುವುದು.

ಸಪ್ತರ್ಷಿಮಂಡಲದ ಆಧಾರದಿಂದ ಆ ಕಾಲವನ್ನು ಗೊತ್ತುಮಾಡುವುದು. ಈ ವಿಷಯವನ್ನು ಕುರಿತು ವಿಷ್ಣುಪುರಾಣದಲ್ಲಿ—

**ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೇ ಹ್ಯುದಿತೌ ದಿವಿ । ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯತೇ ಯತ್ಸಮಂ ನಿಶಿ ॥ ತೇನ ಸಪ್ತರ್ಷಯೋ ಯುಕ್ತಾಸ್ತಿಷ್ಠಂತ್ಯಬ್ದಶತಂ ನೃಣಾಮ್ । ತೇ ತು ಪಾರೀಕ್ಷಿತೇ ಕಾಲೇ ಮಘಾಸ್ವಾಸನ್ ದ್ವಿಜೋತ್ತಮ ॥ ತದಾ ಪ್ರವೃತ್ತಶ್ಚ ಕಲಿರ್ದ್ವಾದಶಾಬ್ದ ಶತಾತ್ಮಕಃ ॥**

ಈ ಶ್ಲೋಕಗಳಿಗೆ ಶ್ರೀಧರೀಯ ವ್ಯಾಖ್ಯಾನದಂತೆ ಆಕಾಶದಲ್ಲಿ ಉತ್ತರ ಕಡೆಗೆ ನೋಡಿದರೆ ತುದಿಯಲ್ಲಿ ಭಂಡಿಯ ಆಕೃತಿಯುಳ್ಳ ಏಳು ನಕ್ಷತ್ರಗಳಿಂದ ಕೂಡಿದ ಸಪ್ತರ್ಷಿ ಮಂಡಲವು ಕಣ್ಣಿಗೆ ಗೋಚರವಾಗುವುದು. ಈ ಮಂಡಲದ ತುದಿಯಲ್ಲಿ ಪೂರ್ವಕ್ಕೆ ಮರೀಚಿ ನಕ್ಷತ್ರವು. ತರುವಾಯ ಅದರ ಪಶ್ಚಿಮಕ್ಕೆ ಬಗ್ಗಿದ ಕಡೆಯಿರುವುದೇ ವಸಿಷ್ಠ ತಾರೆಯು. ಈ ತಾರೆಯ ಒತ್ತಿಗೆ ಕೆಳಗಡೆ ಮಿಣುಗುಟ್ಟುವುದೇ ವಸಿಷ್ಠಪತ್ನಿಯಾದ ಅರುಂಧತೀ ತಾರೆಯು. ಈ ಎರಡು ನಕ್ಷತ್ರಗಳ ಪಶ್ಚಿಮಕ್ಕೆ ಸ್ವಲ್ಪ ಎತ್ತರವಾಗಿ ಆ ಈಸಿನ ಬುಡದಲ್ಲಿರುವುದೇ ಅಂಗಿರಾನಕ್ಷತ್ರವು. ಈ ಅಂಗಿರಾನಕ್ಷತ್ರಕ್ಕೆ ಪಶ್ಚಿಮಕ್ಕೆ ಅದಕ್ಕೆ ಸಮೀಪವಾಗಿ ಇರುವ ನಾಲ್ಕು ತಾರೆಗಳ ಚೌಕದಲ್ಲಿ ಈಶಾನ್ಯಕ್ಕಿರುವುದೇ ಅತ್ರಿ, ಅತ್ರಿಯ ಮೇಲ್ಗಡೆ ದಕ್ಷಿಣಕ್ಕಿರುವುದೇ ಪುಲಸ್ತ್ಯ, ಪುಲಸ್ತ್ಯದ ಪಶ್ಚಿಮಕ್ಕೆ ಪುಲಹ, ಪುಲಹದ ಉತ್ತರಕ್ಕೆ ಅಂದರೆ ಚೌಕದ ವಾಯುವ್ಯಕ್ಕೆ ಕ್ರತು. ಈ

ಪ್ರಕಾರ ಸಪ್ತರ್ಷಿನಕ್ಷತ್ರಗಳು ಇರುವುವು. ಇವುಗಳ ಚಿತ್ರವು ಹೇಗೆಂದರೆ—

× **ಪುಲಹ** × **ಪುಲಸ್ತ್ಯ**

× **ಮರೀಚಿ**

× **ಕ್ರತು** × **ಅತ್ರಿ** × **ಅಂಗಿರಾ** × **ವಸಿಷ್ಠ**

× ಅರುಂಧತಿ

ಹೀಗಿರುವ ಈ ಸಪ್ತರ್ಷಿನಕ್ಷತ್ರಗಳಲ್ಲಿ ಮೊತ್ತಮೊದಲು ಉದಯಕ್ಕೆ ಬರುವ ಪುಲಸ್ತ್ಯ, ಕ್ರತುಸಂಜ್ಞಾ ಚತುಷ್ಕದಲ್ಲಿ ಪುಲಸ್ತ್ಯ ಕ್ರತುನಕ್ಷತ್ರಗಳ ನಡುವಿನಿಂದ ದಕ್ಷಿಣೋತ್ತರವಾಗಿ ಎಳೆದ ರೇಖೆಯ ಮೇಲೆ ಅಶ್ವಿನಿಯೇ ಮೊದಲಾದ ಇತರ ನಕ್ಷತ್ರಗಳು ಕಂಡುಬರುವುವು. ಈ ನಕ್ಷತ್ರ ೨೦ ದೊಂದರಲ್ಲಿ ಈ ಸಪ್ತರ್ಷಿಮಂಡಲವು ಮನುಷ್ಯಮಾನದ ನೂರು ಸಂವತ್ಸರಗಳ ವರೆಗೂ ಇರುವುದು. ಈ ನಿಯಮವನ್ನು ಅನುಸರಿಸಿ ಪರೀಕ್ಷಿತನು ಪಟ್ಟವೇರುವ ಕಾಲದಲ್ಲಿ ಸಪ್ತರ್ಷಿಮಂಡಲವು ಮಖೆಯಲ್ಲಿದ್ದಿತು, ಆ ಕಾಲಕ್ಕೆ ಕಲಿಗತಾಬ್ದವರ್ಷಗಳು ೧೨೦೦ ಆಗಿದ್ದುವು ಎಂದು.

ಈ ವಿಚಾರದಲ್ಲಿ ವಿಷ್ಣುಚಿತ್ತೀಯ ವ್ಯಾಖ್ಯಾನಕ್ಕೂ ಶ್ರೀಧರೀಯ ವ್ಯಾಖ್ಯಾನಕ್ಕೂ ವ್ಯತ್ಯಾಸವಿಲ್ಲ. ನಂದರಾಯನು ಸಿಂಹಾಸನವನ್ನು ಏರುವ ವೇಳೆ ಸಪ್ತರ್ಷಿಮಂಡಲದ ಶಕಟಾಕೃತಿಯ ಚೌಕದ ಮಧ್ಯಕ್ಕೆ ಸರಿಯಾಗಿ ಪೂರ್ವಾಷಾಢ ನಕ್ಷತ್ರ ವಿದ್ದಿತು. ಈಗ ನಾವು ಸಪ್ತರ್ಷಿಮಂಡಲದ ಕಡೆಗೆ ನೋಡುವಾಗ ಅಲ್ಲಿ ಹುಬ್ಬಾನಕ್ಷತ್ರವು ಕಾಣುವುದು. ಇದರಿಂದ ನಂದರಾಜ್ಯವು ಪರಿಸಮಾಪ್ತವಾಗಿ ಸುಮಾರು ೨೦೦೦ ವರುಷಗಳು ದಾಟಹೋದಂತೆ ಸ್ಥೂಲಮಾನದಿಂದ ವ್ಯಕ್ತವಾಗುವುದು.

ಯುಧಿಷ್ಠಿರನು ಸಿಂಹಾಸನವನ್ನು ಏರುವ ಸಮಯ ಸಪ್ತರ್ಷಿಗಳು ಮಘೆಯಲ್ಲಿ ಇದ್ದು ಈಗ ಹುಬ್ಬೆಯಲ್ಲಿ ಇರುವುದರಿಂದ ಈ ನಡುವಿನ ಅಂತರದಲ್ಲಿ ಈ ಚಕ್ರವು ಎರಡು ಸಲ ಉರುಳಿರಬೇಕೆಂದು ತೋರುವುದು. ರಾಶಿಚಕ್ರವು ಪೂರ್ಣವಾಗಿ ಒಂದು ಉರುಳು ಉರುಳುವಷ್ಟಕ್ಕೆ ೨೭೦೦ ವರುಷಗಳು ದಾಟುತ್ತವೆ. ಎರಡು ಸಲ ಉರುಳಿದರೆ ೫೪೦೦ ವರುಷಗಳೂ ಯುಧಿಷ್ಠಿರನು ಸಿಂಹಾಸನವನ್ನು ಏರುವಾಗ ಸಪ್ತರ್ಷಿಮಂಡಲವು ಮಘೆಯಲ್ಲಿದ್ದು ಈಗ ಹುಬ್ಬೆಯಲ್ಲಿರುವುದರಿಂದ ಸ್ಥೂಲಮಾನದಿಂದ ಭಾರತಯುದ್ಧವು ನಡೆದು ೫೦೦೦ ವರುಷಗಳು ದಾಟದುವೆಂದೂ, ಸೂಕ್ಷ್ಮವಾಗಿ ಹೇಳುವುದಾದರೆ ವರಾಹ ಮಿಹಿರಾಚಾರ್ಯರ ಮತದಂತೆ ೪೩೭೫ ವರುಷಗಳು ಮಾತ್ರ ದಾಟದವೆಂದೂ ಅನ್ನಬೇಕು.

॥ ಶ್ರೀಃ ॥

# ಹೊಸಗನ್ನಡ ಕವಿತೆ.

(ಲೇಖಕ:- ಸೇಡಿಯಾಪು ಕೃಷ್ಣ ಭಟ್ಟ).

"ಹೊಸಗನ್ನಡ ಕವಿತೆ" ಎಂಬೀ ಲೇಖನದ ವಿಷಯದೊಳಗೆ ಎಲ್ಲಾ "ಹೊಸ ಕನ್ನಡ ಕವಿತೆ"ಗಳು ಸೇರುವುದಿಲ್ಲ. "ಹೊಸ ಕನ್ನಡ ಕವಿತೆ" ಎಂಬುದರ ಅರ್ಥವು ಹೊಸತಾಗಿ ಕನ್ನಡ ಭಾಷೆಯಲ್ಲಿ ಬರೆದ ಕವಿತೆ ಎಂದಾಗುವುದರಿಂದ [ಹೇಳಿದ ಕವಿತೆ ಎನ್ನುವುದು ಆದ್ಯರ ರೀತಿ; ಬರೆದ ಕವಿತೆ ಎಂಬುದು ಅದ್ಯತನರ ರೀತಿ. ಇದರಿಂದ ಅವರಿವರ ಕವಿತಾಶಕ್ತಿಯ ತಾರತಮ್ಯವು ತಿಳಿಯುವುದು!] ಹೊಸಬರು ಬರೆದ ಹಳೆಗನ್ನಡ ಕವಿತೆಯೂ ಅದರಲ್ಲಿ ಸೇರುತ್ತದೆ. ಅದು ನಮ್ಮ ವಾಙ್ಮಯದ ಮುಂದಿನ ಏಳಿಗೆಗೆ ಸಹಾಯವಾಗಲಾರದೆಂಬ ಸ್ವಾಭಿಪ್ರಾಯದಿಂದಲೂ, ಪ್ರಕೃತ ಚರ್ಚಿಸುವ ಉದ್ದೇಶವಿಲ್ಲದುದರಿಂದಲೂ, ವಿಷಯ ಮರ್ಯಾದೆಯನ್ನು ನಿರ್ದೇಶಿಸುವುದಕ್ಕಾಗಿಯೇ "ಹೊಸಗನ್ನಡ" ಎಂದು ಏಕಪದವಾಗಿ ರೂಪಿಸಿದುದಾಗಿದೆ.

ಕವಿತೆಯ ಫಲವನ್ನು (ಪ್ರಯೋಜನವನ್ನು) ಪ್ರಾಚೀನ ಟೀಕಾಕಾರರು ಬೇಕಾದಷ್ಟು ಜಗಿದಿಟ್ಟಿರುವುದರಿಂದ ಅದಕ್ಕೆ

ಕೈಯಿಕ್ಕುವುದವಶ್ಯವಿಲ್ಲ. ಅದನ್ನೆಲ್ಲರೂ ಬಲ್ಲರು. ಕವಿತೆಯು, ಭಾಷೆಯು ಜೀವಿಸಿರುವುದರ ಲಕ್ಷಣ; ಅಲ್ಲದೆ ಹಳೆಗಾಲದ ಕವಿತೆಗಳು ಹೊಸಗಾಲಕ್ಕೆ ತೃಪ್ತಿಯನ್ನುಂಟುಮಾಡವು. ಇದರಿಂದ ಹೊಸ ಬಗೆಯ ಕಾವ್ಯಗಳು ಹೊಸಗನ್ನಡದಲ್ಲಿ ಅವಶ್ಯವೆಂಬುದರಲ್ಲಿ ಭಿನ್ನಾಭಿಪ್ರಾಯವಿರಲಾರದು. ಮತ್ತು ಅದರಿಂದಲೇ ಈಗ ಅನೇಕರು ಅದೇ ಕೆಲಸದಲ್ಲಿರುವುದು ಕನ್ನಡ ಮಾಸಪತ್ರಿಕೆಗಳೇ ಮೊದಲಾದುವನ್ನು ನೋಡಿದರೆ ಗೊತ್ತಾಗದಿರದು. ಆದರೆ ಅವುಗಳನ್ನು ಎಲ್ಲ ಕನ್ನಡಿಗರು ಪ್ರೀತಿಯಿಂದಾದರಿಸುವರೇ ಎಂಬುದು ನೋಡಬೇಕಾದ ವಿಷಯ. ವಿಚಾರಾಂತದಲ್ಲಿ ಉತ್ತರವು ವಿಮುಖವಾಗಿ ತೋರದಿರದು. ಇದಕ್ಕೇನು ಕಾರಣ? ಹಳಬರ ಸಾಮಾನ್ಯತರದ ಕಾವ್ಯಗಳೂ ಎಲ್ಲಾ ಕನ್ನಡಿಗರಿಗೆ ಒಂದೇ ರೀತಿಯಾಗಿ ಪ್ರಿಯವಾಗಿವೆ. ಈಗಿನ ಕವಿಗಳಲ್ಲೊಬ್ಬನಿಗೂ ಆ ಸಾಮಾನ್ಯ ಶಕ್ತಿಯಾದರೂ ಇಲ್ಲವೆ? ಅಥವಾ ಅನುಸರಿಸುವ ರೀತಿಯು ಸದೋಷವೆ? ವಿಚಾರಿಸುವ.

ಕನ್ನಡದಲ್ಲಿ ಮೈಸೂರು ಕನ್ನಡ, ಧಾರವಾಡ ಕನ್ನಡ, ದಕ್ಷಿಣ ಕನ್ನಡ ಎಂಬ ಮೂರು ರೂಪಗಳಿರುವುದರಿಂದ ಒಂದು ಕಡೆಯ ಕವಿತೆಯು ಮತ್ತೊಂದು ಕಡೆಗೆ ರುಚಿಸುವುದಿಲ್ಲವೆಂದು ಕೆಲವರು ಹೇಳುವರು. [ವಸ್ತುತಃ ಈ ಮೂರು ಭೇದಗಳು ರುಚಿ ಕೆಡಿಸುವಷ್ಟು ಘೋರವಾಗಿಲ್ಲವೆಂದು ನನ್ನ ಮತ. ಈ ತರದ ಭೇದಗಳು ಮೊದಲೂ ಇದ್ದುವು. ಕುಮಾರ ವ್ಯಾಸನ ಭಾರತ, ಲಕ್ಷ್ಮೀಶನ ಜೈಮಿನಿ ಭಾರತ, ರತ್ನಾಕರನ ಭರತೇಶ ವೈಭವಗಳನ್ನು ನೋಡಿದರೆ ಗೊತ್ತಾಗುವುದು.] ಆದರೆ ಬರೆದವರನ್ನು ಮತ್ತು ನಾಲ್ಕಾರು ಜನ ಅವರ ಸ್ನೇಹಿತರನ್ನು ಬಿಟ್ಟು ಉಳಿದವರಿಗಾರಿಗೂ ಅವು ರುಚಿಸುವುದಿಲ್ಲವೆಂದು ಅನುಭವವು ಹೇಳುತ್ತದೆ. ಮತ್ತು ಮುಕ್ಕಡೆಯ ಭೇದವು ಪದ್ಯದಲ್ಲಿ ಮಾತ್ರವಲ್ಲ ಗದ್ಯದಲ್ಲಿಯೂ ಇರುವುದಷ್ಟೆ. ಹಾಗಿರುವಾಗ ಈ ತರದ ಅಪ್ರೀತಿಯು ಅದರ ಮೇಲೇಕಿಲ್ಲ? ಗಳಗನಾಥರ ಕಾದಂಬರಿಗಳು ಮುಕ್ಕಡೆಯನ್ನೂ ಮೀರಿ ಮೆರೆಯುತ್ತವೆ. ಪದ್ಯವೇ ಈ ಕಾಲಕ್ಕೆ ರುಚಿಸುವುದಿಲ್ಲವೆಂದು ಹೇಳಬಹುದೇ? ಪರಭಾಷೆಯ ಅಥವಾ ಹಳೆ ಪದ್ಯ ಕಾವ್ಯಗಳಿಗೆ ಈ ಗತಿ ಬಂದಿಲ್ಲ.

ಗದ್ಯವು ಭಾಷೆಯ ವ್ಯಾವಹಾರಿಕ ಸ್ವರೂಪವು; ಅದರಲ್ಲಿ ಅರ್ಥಕ್ಕೇ ಪ್ರಾಧಾನ್ಯವು. ಪದ್ಯವು ಕಲಾಸ್ವರೂಪವು; ಅದರಲ್ಲಿ ಶಬ್ದಕ್ಕೂ ಪ್ರಧಾನತೆ ಇದೆ. "ನುಡಿಗಬ್ಬವೆನಲು ಗಂಡುಸು। ಬೆಡಗಿನ ಹಾಡೆನಲು ಹೆಂಗುಸು." ವರನಲ್ಲಿ ರೂಪ ಸಂಪತ್ತು ಇಲ್ಲದಿದ್ದರೂ ಮನ್ನಿಸುವರು. ವಧುವಿನಲ್ಲಿ ಎಷ್ಟೇ ಗುಣಗಳಿದ್ದರೂ ರೂಪ ಸಂಪತ್ತು ಅವಶ್ಯವೆಂದು ಭಾವಿಸುವರು. ಈ ಭಾವನೆ ಇರುವ ವರೆಗೆ ಕರ್ಣ ಸುಖವನ್ನು ಕೊಡದ ಕವಿತೆಗೆ ಸ್ವಾಗತವು ದೊರೆಯದು. ಒಳಗೆ ತಿರುಳಿದ್ದರೂ ಹೊರಗೆ ಸೊಗಸಾಗಿರದಿದ್ದರೆ ಕವಿತೆಯು ಸುಖವನ್ನು ಕೊಡುವುದಿಲ್ಲವೆಂಬುದು ಈ ಉದಾಹರಣೆಯಿಂದ ತಿಳಿಯಬಹುದು.

**ಹಾಯ ಕರ್ನಾಟದಿತಿಹಾಸ ನನ್ನಭಿಮಾನ ಹೆಚ್ಚಿಸುವುದಕ್ಕೆ ಬೇಕೆ। ತಾಯಿ ತಾಯೆಂದು ಸಲೆ ಸಿದ್ಧ ಮಾಡಲು ಬಣಗು ಒಣತರ್ಕ ಶಾಸ್ತ್ರವೇಕೆ ॥**

*  *  *  *  *

**ನನ್ನ ರಕ್ತದ ನೀರಿನಿಂದ ನಿನ್ನಂಗಳದ ಥಳಿಯನ್ನು ಹೊಡೆಯುವೆನು ನಾ । ನನ್ನ ಕರುಳಿನ ಮಾಲೆ ನಿನ್ನ ಕೊರಳಲಿ ಹಾಕಿ ಮೋದದಿಂ ಕುಣಿಯುವೆನು ನಾ ॥**

ಈಗಿನ ಪದ್ಯಗಳು ರುಚಿಸದಿರುವುದಕ್ಕೆ ಮುಖ್ಯವಾದ ಕಾರಣವಿನ್ನೊಂದಿದೆ. ಎಷ್ಟೋ ಪದ್ಯಗಳ ಅರ್ಥವೇ ಆಗುವುದಿಲ್ಲ. ಇದಕ್ಕೂ ಮುಕ್ಕಡೆಯ ಕಾರಣವನ್ನೇ ಹಲವರು ಹೇಳುವರು. ಹಾಗಾದರೆ ಗದ್ಯವು ಅರ್ಥವಾಗುತ್ತದಲ್ಲವೇ? ಆಗದಿದ್ದರೆ ಕನ್ನಡದಲ್ಲಿ ಪ್ರಚಲಿತವಾಗಿರುವ ಲೇಖನ ಕಲೆಯು ಸಾಧ್ಯವಾಗುತಿತ್ತೇ? ಭಾಷೆ ತಿಳಿಯದವರು ಬರೆದರೆ ಮಾತ್ರ ಅರ್ಥವಾಗಲಾರದು. ಆದ್ದರಿಂದ ಅರ್ಥವಾಗದ ಆ ಪದ್ಯಗಳು "ಪದ್ಯ ಭಾಷೆ"ಯಲ್ಲಿ ಬರೆದವಾಗಿಲ್ಲವೆಂದೇ ಹೇಳಬೇಕು. [ಬರೇ "ಭಾಷೆ" ಎಂದರೆ "ಮಾತಾಡುವ ಭಾಷೆ" ಎಂದರೆ ಗದ್ಯವೆಂದು ಅರ್ಥ. ಪದ್ಯಕ್ಕೆ ಬೇರೆ ಭಾಷೆ ಇಲ್ಲವೆಂದು ಹೇಳತೊಡಗಿದರೆ ಎಲ್ಲರಿಗೂ ಪದ್ಯ ಬರೆಯುವ ಶಕ್ತಿಯುಂಟೆಂದು ಹೇಳಿದ ಹಾಗಾಗುತ್ತದೆ!] ಕನ್ನಡ ಭಾಷೆಯೆಂದರೆ ಕನ್ನಡ ಶಬ್ದಗಳ ಗುಂಪಿಗೆ ಹೆಸರಲ್ಲ; ಕನ್ನಡದಲ್ಲಿಯೇ ಆಲೋಚನೆ ಮಾಡಿ, ಕನ್ನಡ ಶಬ್ದಗಳಲ್ಲಿ, ಕನ್ನಡ ವಾಕ್ಯರೂಪವಾಗಿ ವ್ಯಕ್ತವಾದರೆ ಮಾತ್ರ ಆ ಹೆಸರು ಸಲ್ಲುವುದು. ಆ ಕವಿತೆಗಳಲ್ಲಿ ಇಂಗ್ಲಿಷ್, ಕನ್ನಡ, ರವೀಂದ್ರರ ಕನ್ನಡ, ಉಪನಿಸತ್ಕನ್ನಡ ಮುಂತಾದ ಅಸಂಖ್ಯ "ಕನ್ನಡ"ಗಳು ಬೆರೆತಿರುವುದರಿಂದಲೇ ಕೇವಲ ಕನ್ನಡಿಗರಿಗೆ ಅವು ಅರ್ಥವಾಗುವುದಿಲ್ಲ. ಉದಾಹರಣೆ ಇದು:—

**ಬಗೆಹಗಲ ಮುಚ್ಚಂಜೆ ಬಂಜೆಯಾಗಿರೆ ಬಂದೆ ಸವಿಯಾದ ಹರಕೆಯಾಗಿ। ಗಗನ ದಿಙ್ಮಂಡಲದಿ ಲಕ್ಷ್ಮಿನಿಂತಳು ನೋಡು ವಿಶ್ವತೋನಯನಳಾಗಿ॥ ಚವಲಂಬಗಳ ತೆರೆದು ಚಲ್ಲುತಿದೆ ಕುಣಿಕುಣಿದು ತಿಳಿಗಣ್ಣು ಚಲ್ಲವನ್ನು। ಜೀವನೆನ್ನುವ ಜಮುನೆ ದಡವಿಮೀರಿ ಮುಟ್ಟುವಳು ಪ್ರೇಮಪದಯುಗಲವನ್ನು॥ ಒಡಮೂಡುವನು ದೇವ ಒಡನುಡಿಯುವನು ಜೀವನೆಂದು ತೋರಿಸಿದೆ ಹಾದಿ। ಮಾನಸವ**

**ನೀಜುತಿದೆ ರಾಜಹಂಸವು ನುಡಿದು ಅವಿರಾಮೀಮರ್ಗ ವಿಧಿ ॥**

**ಕರದಲ್ಲಿ ಮೆರೆವಂಥ ಮುರಳಿ ನಾನಾಗುತ್ತ। ಉರಿಯುತಿಹ ನೋವಿನಾಲಾಪಗಳ ನುಲಿಯುವೆನು ॥ ಧರೆಗೆಲ್ಲ ಮೋಹಿನಿಯ ಹಾಕಿ ಬರುವೊಲು ಮೊಳ್ಪಿ। ಹರಿಯುವ ನಿರಂಕುಶ ಪ್ರವಾಹವಿದ್ದೆಡೆಗೆ ॥ ಅಂತರಿಕ್ಷದ ಪಕ್ಷಿಯಂತೆನ್ನ ಮಾಡೈ ॥**

**ಲಲಿತ ವೀಣಾಗಾನಲೀಲಾತರಂಗದಲಿ । ಕಲುಷಪೂರಿತ ತನುವ ಭ್ರಮೆಯನುಳಿದು ॥ ಲಾಲಿತ್ಯಮಾಧುರ್ಯದೆಳನುಡಿಯ ಹೊಸೆದಾಡಿ । ಹಾಲಹಸುಳೆಯು ನಾನು ಕವನದೊಳಗೆ ॥ ಚೆನ್ನಕೇಶವ ನೀನದಾರೆಂದು ತಿಳಿದೆ । ಉನ್ನತದ ವ್ಯಾಪನದಿ ನಿನ್ನನರಿತೆ ॥ ಇತ್ಯಾದಿ ॥**

ಈ ಪದ್ಯಗಳ ಅರ್ಥವಾಗದಿರುವುದಕ್ಕೆ, ಬಿಚ್ಚಿ ಹೇಳಿದರೆ ವಾಚ್ಯವೃತ್ತಿಯಾಗಿ ಕವಿತೆಯು ಉತ್ಕೃಷ್ಟ ತರದ್ದಾಗುವುದಿಲ್ಲವೆಂದು ಬಗೆದು, ಭಾಷೆಯ ನೆಲವನ್ನು ಬಿಟ್ಟು ಭಾವನೆಯ ಗಾಳಿಯಲ್ಲಿ ಹಾರಹೋಗಿ ದಿಕ್ಕು ತಪ್ಪಿ ತಿರುಗಿದುದೂ ಒಂದು ಕಾರಣವಾಗಿದೆ.

ಈ ಮೇಲಣ ಪ್ರತಿಪಾದನೆ ಉದಾಹರಣೆಗಳನ್ನು ನೋಡಿ, ಹಳೆಯ ಕನ್ನಡ ಕಾವ್ಯಗಳ ರೀತಿಯಂತೆ ನವೀನ ಭಾವನೆಗಳಿಗೆ ಮಹತ್ವ ಕೊಡದೆ ಲಕ್ಷಣಬದ್ಧವಾಗಿ ಕಾವ್ಯರಚನೆ ಮಾಡುತ್ತಿರಬೇಕೆಂದು ಲೇಖಕನ ಮತವೆಂದು ಭ್ರಮಿಸಲಾಗದು. ಹೊಸ ಬಗೆಯ ಕಾವ್ಯಗಳೇ ಬೇಕೆಂದು ಹಿಂದೆಯೇ ಹೇಳಿದೆ. ಚೆನ್ನಾಗಿ ಅರ್ಥವಾಗುವಂತೆ ಕಿವಿಗೂ ಮನಸ್ಸಿಗೂ ರಂಜಿಸುವಂತೆ ಬರೆದರೆ ಸರಿ. ಹಾಗೆ ಬರೆದ ಪದ್ಯಗಳು ಬಹಳ ವಿರಳವಾಗಿವೆ. ಅಲ್ಲಲ್ಲೊಂದು ಮಿನುಗುತ್ತವೆ. ನೋಡಿರಿ:—

**ಭರದಿಂದ ನಭದಲ್ಲಿ ಕೂಡುತಿವೆ ಮೋಡಗಳು । ಕಿರುಮನೆಯ ದೀವಿಗೆಯು ನಂದಿಸಿದೆ ಮೆಲ್ಲಲರು। ಬಿರುಗಾಳಿಯಾ ಕೊಳಲು ಹಾಡುತಿದೆ ಬಿರುಸುದನಿಯಿಂದೊರಟು ಹಾಡುಗಳನು ॥ ಹೊಳೆ ಹೊಳೆವ ಮಿಂಚುಗಳ ಕೂರಲಗು ದಯೆಯುಳಿದು । ಛಲದಿಂದ ಸೀಳುತಿದೆ ಕಾರಿರುಳ ಗರ್ಭವನು । ಸುಲಿಯಿತಿಥ್ಥು ಮನದಾಸೆ ಕತ್ತಲೆಯೊಳುಳಿದೆನ್ನನೊಬ್ಬಳನೆ ಎಲ್ಲಿ ಹೋದೆ ॥**

ಇದೇನು ಲಾಕ್ಷಣಿಕರನ್ನು ಲಕ್ಷಿಸಲಿಲ್ಲ. ಆದರೂ ಸೊಗಸಾಗಿ ಕಾಣುತ್ತದೆ.

**ಜಗವನಾಂ ಮರೆದಪೆನು ಜಗವೆನ್ನ ಮರೆತಿರಲಿ। ಜಗದೆನ್ನ ಸಂಬಂಧವನು ಮರವು ಮರೆಯಿಸಲಿ ॥ ಜಸವೆಂಬ ಪರಿಮಳಕೆ ಮನವೆನ್ನುವಳಿ ಮೊರೆಯೆ। ದೆಸೆಯೆಂಬ ಕುಸುಮದಲಿ ದೊರೆವುದಾವುದು ಸೆರೆಯೆ ॥ ರಸೆಯೊಳಗೆ ಕೀರ್ತಿ ಕವಿರತ್ನಗಳ ಸದ್ಗುಣದೆ। ಮಿಸುಪ ಕಂಠಾಭರಣವನು ಮಾಡುವವಸರದೆ ॥ ಬಗೆಗೊಂಬ ಮಣಿಯೊಂದು ನೆಲದಡಿಯೊಳಡಗಿರಲಿ। ಜಗವನದು ಮರೆದಪುದು ಜಗವದನು ಮರೆತಿರಲಿ ॥ ಆಗಸದ ಮಧ್ಯದಲಿ ತಾರೆಗಳು ಥೀಂಕಿಡಲು। ರಾಗದಿಂ ರಾಜನೈತಂದು ನೆರೆಮೆರೆದಿರಲು ॥ ತಾರಗೆಯುದೊಂದುರುಳಿ ಕತ್ತಲೆಯೊಳಡಗಿರಲಿ। ಜಗವನದು ಮರೆದಪುದು ಜಗವದನು ಮರೆತಿರಲಿ ॥ ಹಿಸುಣೆಂಬ ಕೂರಲಗು ಹೆಸರೆಂಬ ಹರಿಣದೆಡೆ। ಗಸವಸದೆ ಬೆಂಬತ್ತೆ ಬೇಡ ನೋಡಿಸಿ ಕಾಡೆ ॥ ಜಸವನಾಶಿಸದೆ ಮರವಿನ ಗುಹೆಯೊಳಡಗಿರಲಿ। ಜಗವನದು ಮರೆದಪುದು ಜಗವದನು ಮರೆತಿರಲಿ ॥**

ಇಂಥ ಪದ್ಯಗಳೆ ಈಗ ಬೇಕಾದವುಗಳು. ಇವುಗಳಲ್ಲಿ ಹೊಸ ಭಾವಗಳಿಗೇನು ಕಡಿಮೆ? ಯಾವ ಕನ್ನಡಿಗನಿಗೆ ಅರ್ಥವಾಗುವುದಿಲ್ಲ? ಯಾರ ಕಿವಿಗೆ ಬೇಡವೆನಿಸುತ್ತದೆ?

ಈ ಪದ್ಯಗಳು ಸೊಗಸಾಗಲಿಕ್ಕೂ ಆ ಪದ್ಯಗಳು ಆಗದಿರುವುದಕ್ಕೂ ಏನು ಕಾರಣ? ಇವುಗಳನ್ನು ಕನ್ನಡ ಪದ್ಯಭಾಷೆಯಲ್ಲಿ ಕನ್ನಡಿಗರೇ ಬರೆದಿರುವರು. ಎಂದರೆ ಇವರಿಗೆ ಚೆನ್ನಾಗಿ ಕನ್ನಡ ಬರುತ್ತದೆ. ಅವುಗಳನ್ನು ಬರೆದುದು ಉಪನಿಷತ್ಕಾರರಾದ ಋಷಿಗಳೋ, ಅಥವಾ ರವೀಂದ್ರರೋ, ಯಾರೋ! ಹೀಗೆ ತೀಕ್ಷ್ಣವಾಗಿ ಟೀಕಿಸಿದ್ದಕ್ಕೆ ಯಾರೂ ಬೇಸರಪಡಬಾರದು. ಕನ್ನಡವನ್ನು ಚೆನ್ನಾಗಿ ಕಲಿಯದೆ ಪರಭಾಷಾಭ್ಯಾಸದಿಂದ ತಮ್ಮಲ್ಲುಂಟಾದ ಭಾವಗಳನ್ನು ಪದ್ಯಗಳಲ್ಲಿ ತರಲು ಪ್ರಯತ್ನ ಮಾಡಿ ತಮ್ಮ ಕಲ್ಪನಾಶಕ್ತಿಯನ್ನು ವೃಥಾ ವ್ಯಯ ಮಾಡುವುದಲ್ಲದೆ, ಭಾಷೆಯು ರೂಪುಗೊಳ್ಳುತ್ತಿರುವ ಈ ಕಾಲದಲ್ಲಿ ಅದನ್ನು ವಿರೂಪಗೊಳಿಸುವುದು ತರವಲ್ಲವೆಂಬ ತಾಪದಿಂದ ಬರೆದದ್ದಾಗಿರುತ್ತದೆ. "ಶಬ್ದ ದರಿದ್ರಂಗಕ್ಕುಮೆ ನವೀನ ಕಾವ್ಯಾರಂಭಂ" ಎಂದು ಹರಿಹರನು ಹೇಳಿರುವುದು ಅಕ್ಷರಶಃ ನಿಜವೇ ಸರಿ. ಭಾಷೆಯೂ ಭಾವವೂ ಎರಡೂ ತುಂಬಿದ್ದರೇ ಉತ್ತಮ ಕಾವ್ಯವಾಗುವುದು. ಇಲ್ಲದಿದ್ದರೆ ಒಕ್ಕಾಲಿನವನ ಗತಿಯಾಗುವುದು. ಆದ್ದರಿಂದ ಕವಿತೆಗಳಲ್ಲನೇಕ ಭಾವವಿರಹಿತವಾಗಿವೆಯೆಂಬುದು ಒಪ್ಪತಕ್ಕದ್ದೇ. ಆದರೆ ಯಾವುದೊಂದೂ ಕನ್ನಡ ಭಾಷೆಯದಲ್ಲದಿಲ್ಲ. ಸಾಮಾನ್ಯವಾಗಿ ಅವರಿಗೆ "ಕಬ್ಬ

ವನುಸಿರ್ವ" ಶಕ್ತಿಯಿತ್ತು. ಆ ಶಕ್ತಿಯನ್ನುಂಟು ಮಾಡಿಕೊಂಡರೆ ಪರಭಾಷೆಯ ಕಾವ್ಯಗಳನ್ನೋದಿ ನಮ್ಮಲ್ಲುದಿಸಿದ ಹೊಸ ಭಾವಗಳನ್ನಾದರೂ ಸರಸವಾಗಿ ಬಣ್ಣಿಸಬಹುದು.

ಆ ಶಕ್ತಿಯನ್ನು ಹೇಗೆ ಸಂಪಾದಿಸಿಕೊಳ್ಳಬಹುದೆಂಬುದು ಮುಂದಿನ ಪ್ರಶ್ನೆ. ಗದ್ಯದಲ್ಲಿ ಬರೆಯಲು ಶಕ್ತಿ ಬರಲಿಕ್ಕೆ ಮೊದಲು ಏನು ಮಾಡುತ್ತೇವೆ? ಗದ್ಯವಾಙ್ಮಯವನ್ನು ಅಭ್ಯಾಸಿಸುತ್ತೇವೆ. ಪದ್ಯ ಬರೆಯಬೇಕಾದರೆ ಪದ್ಯ ವಾಙ್ಮಯವನ್ನೋದಬೇಕು. ಭಾಷೆಯು ನಮ್ಮ ವಶವಾದರೆ ಮಾತ್ರ ಭಾವವನ್ನದರಲ್ಲಿ ತುಂಬಬಹುದು.

ಪೂರ್ವದ ಪದ್ಯ ಗ್ರಂಥಗಳನ್ನೋದಿ ಬಂದ ಸಂಸ್ಕಾರವು ಅಂತಹ ಕವಿತೆಗಳನ್ನೇ ನಮ್ಮಿಂದ ಮಾಡಿಸುವುದೆಂದೂ ಹೊಸ ರೀತಿಯ ಕವಿತೆಯನ್ನುಂಟು ಮಾಡಲಾರದೆಂದೂ ಹಲವರು ಹೇಳಬಹುದು. ಏಕೆಂದರೆ, ತರ್ಕವನ್ನೋದಿದವರು ಆ ತಮ್ಮ 'ಕಾಕತಾಲ'ದ ಹೊರತು ಮಾತಾಡಲರಿಯರು. ಸಂಸ್ಕೃತ ಕಲಿತವರು ಶ್ಲೋಕಗಳ ಉದಾಹರಣೆಗಳ ಹೊರತು ಉಪನ್ಯಾಸ ಮಾಡಲರಿಯರು. ಇಂಗ್ಲೀಸು ಕಲಿತವರು ಮೊದಲು ಸಾಗುತ್ತಿದ್ದರೂ, ಕಲಿತ ಮೇಲೆ ಆ ಶಬ್ದಗಳನ್ನು use ಮಾಡದೆ (ಉಪಯೋಗಿಸದೆ) ವ್ಯವಹಾರ ಸಾಗಿಸಲರಿಯರು. ಹಳೆಗನ್ನಡ ಪಂಡಿತರು 'ಆಗಲೊಡಂ' 'ಎಂದನಣಂ' ಎಂದು ಮುಂತಾಗಿಲ್ಲದೆ ಪದ್ಯ ಬರೆಯಲರಿಯರು. ಹಾಗಾದರೆ ಅವುಗಳನ್ನೋದಿ ನಮ್ಮ ಹೊಸಬತನವನ್ನೇಕೆ ಕಳೆದುಕೊಳ್ಳುವುದು? ವಿಚಾರ ಮಾಡಿದರೆ ಮೇಲೆ ಉದಾಹೃತರಾದವರೆಲ್ಲರೂ ತಾವು ಕಲಿತ ವಿಷಯಗಳ ದಾಸರಾಗಿರುವವರೇ ಹೊರತು ಅವುಗಳನ್ನು ವಶೀಕರಿಸಿಕೊಂಡವರಲ್ಲವೆಂದು ಅವರನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಗೊತ್ತಾಗುವುದು. ಅಲ್ಲದಿದ್ದರೆ ಕಾವ್ಯ ಭೂಮಿಯಲ್ಲಿ ಹೊಸ ಬೆಳೆಯನ್ನು ಬೆಳೆದ ಕವಿಗಳು ತತ್ಪೂರ್ವದ ಕಾವ್ಯಗಳನ್ನೋದಿರಲಿಲ್ಲವೆ? ಓದಿಯೆ ಅವರಿಗೆ ಆ ಶಕ್ತಿ ಬಂದುದು. ಹರಿಶ್ಚಂದ್ರ ಕಾವ್ಯ, ಕುಮಾರವ್ಯಾಸನ ಭಾರತಗಳನ್ನು ನೋಡಿರಿ, ಭರತೇಶವೈಭವ ರಾಮಾಶ್ವಮೇಧಗಳನ್ನು ಪರೀಕ್ಷಿಸಿರಿ; ಅವುಗಳಿಗಿಂತ ಮೊದಲು ಆ ಬಗೆಯ ಕಾವ್ಯಗಳು ಕನ್ನಡದಲ್ಲಿದ್ದವೇ? ನಿರ್ಜೀವ ವಸ್ತುಗಳನ್ನು ಸಜೀವಿಗಳನ್ನಾಗಿಯೂ, ಅಮೂರ್ತ ಭಾವಗಳನ್ನು ಮೂರ್ತ ವಸ್ತುಗಳನ್ನಾಗಿಯೂ ಭಾವಿಸಿ ವರ್ಣಿಸುವ ಕ್ರಮವು ಈಗಿನ ಕವಿತೆಯ ವೈಶಿಷ್ಟ್ಯವೆಂದು ಹೇಳುವರಷ್ಟೆ. (ಪೂರ್ವ ಕಾಲದ ಎಷ್ಟೋ ಉತ್ತಮ ಕಾವ್ಯಗಳಲ್ಲಿ ಇದನ್ನು ನೋಡಬಹುದು.) ಹಳೆಗನ್ನಡದಲ್ಲಿಯೇ, ಪೂರ್ವಾನುಸರಣೆಯಿಂದಲೇ. ಲಕ್ಷಣಬದ್ಧವಾಗಿ ಬರೆದ ನೇಮಿಚಂದ್ರನಾದರೂ,

**ತುರಗಿ ತುಂಬಿಗುರುಳ ಬಂಬಲಿದೆ ಕಪೋಲ ರಂಗದೊಳ್ । ತುಳುಂಕೆ ಪೊಂಗರಂಗದೊಳ್ ಮಲಂಗೆ ವಿಜಯಮಂಗದೊಳ್ ॥**

ಮೊದಲಾಗಿ ಬರೆದಿರುವನು. ಪ್ರತಿಭೆಯಿದ್ದರೆ ಹೊಸ ರೀತಿಗೆ ಹಂಬಲಿಸಬೇಕಾಗಿಲ್ಲ. ಈ ಮೊದಲು ಹಳೆ ರೀತಿಯಲ್ಲೇ ಬರೆಯುತ್ತಿದ್ದವರಾದರೂ, ಪ್ರತಿಭಾಶಾಲಿಗಳು ಹೊಸಬರಾಗಬಲ್ಲರೆಂಬುದು, "ಶ್ವಸನಮುದುದ್ಗತ ಸ್ವಸನ ಮಂಬರ ಮಂಬರಮುನ್ನತಪ್ರಭಾ । ಪ್ರಸರಮೆ ಕಾಂತಿ ಜೀವನಮೆ ಜೀವನಮಾಗಿರೆ ಭೂಮಿಕಾಯನಿ । ನ್ನಸಮಸಮಸ್ತ ವಿಸ್ತರ ಯಶೋ ಗುಣಮಂ" ಮುಂತಾಗಿ ಬರೆಯುತ್ತಿದ್ದವರೊಬ್ಬರು, "ಇಲ್ಲಿ ಮಲಗಿದ ಜನರ ಹೆಸರೆತ್ತಿ ಕರೆಯದಿರು । ಸೊಲ್ಲನಾಲಿಸರವರು ಬರಿದೆ ಹಂಬಲಿಸದಿರು" ಎಂದು ಬರೆಯುತ್ತಿರುವುದೇ ನಿದರ್ಶನವಾಗಿದೆ.

ಕನ್ನಡ ಪದ್ಯ ಭಾಷೆಯನ್ನು ಮೊದಲು ಮಯ್ಗೂಡಿಸಿಕೊಂಡರೆ ಮುಂದೆ ಕಾರ್ಯವು ಸುಸಾಧ್ಯವಾಗುವುದಾದರೂ ನಮ್ಮ ಕವಿತೆಯ ಮುಂದಣ ಅಭಿವೃದ್ಧಿಗೆ ಬೇರೆ ಕೆಲವು ವಿಷಯಗಳನ್ನೂ ಗಮನಿಸುವುದು ಅವಶ್ಯವಾಗಿದೆ.

ಸುಧಾರಕರೆಲ್ಲರೂ, ಮತ ಸುಧಾರಕರಾಗಲಿ, ಸಮಾಜ ಸುಧಾರಕರಾಗಲಿ ಯಾವುದಾದರೊಂದು ಬಾಹ್ಯ ಚಿಹ್ನವನ್ನು ತಮ್ಮ ಸುಧಾರಣೆಯ ವೈಶಿಷ್ಟ್ಯವನ್ನಾಗಿ ಕಲ್ಪಿಸಿಕೊಂಡಿರುವರು. ಮಾಧ್ವರು ತಮ್ಮದೊಂದು ವಿಶಿಷ್ಟ ಬಗೆಯ 'ನಾಮ'ವನ್ನೂ ರಾಮಾನುಜೀಯರು ಮತ್ತೊಂದು ತರದ 'ನಾಮ'ವನ್ನೂ, ಲಿಂಗಾಯತರು ಲಿಂಗವನ್ನೂ, ಕಿರಿಸ್ತಾನರು 'ಕ್ರೂಜೆ'ಯನ್ನೂ ಗುರುತಾಗಿ ಇಟ್ಟುಕೊಳ್ಳುವರು. ಯಾವುದೊಂದು ಸರಕಾರವು ಪ್ರಜೆಗಳಲ್ಲಿ ವಿಶಿಷ್ಟವಾದ ರಾಜಕೀಯ ಸತ್ತೆಯ ಭಾವನೆ ಬರುವುದಕ್ಕಾಗಿ ತನ್ನದೊಂದು ವಿಶಿಷ್ಟರೂಪದ ಪತಾಕೆಯನ್ನು ನೆಡುತ್ತದೆ. ಸದ್ಯ ತುರ್ಕಿ ದೇಶದಲ್ಲಿ ಸಮಾಜವನು ಅಡಿಮೇಲು ಮಾಡುವುದಕ್ಕಾಗಿ ಕೆಮಲ್‌ಪಾಶನು ಸಮಾಜದ ಸಂಪೂರ್ಣ ವೇಷವನ್ನೇ ಬೇರೆ ಮಾಡಿರುವನು. ಹಿಂದುಸ್ಥಾನದ ರಾಜಕೀಯ ಸುಧಾರಣೆ ಮಾಡುವುದಕ್ಕಾಗಿ ಮಹಾತ್ಮ ಗಾಂಧಿಯರು ಖಾದಿ ಪ್ರಸಾರ ಮಾಡುತಿದ್ದಾರೆ. ಕೇವಲ ಅಂತರಂಗಿಕ ಸುಧಾರಣೆಯನ್ನಿಚ್ಛಿಸುವವರಾದರೂ, ಬಾಹ್ಯ ಸುಧಾರಣೆ ಮಾಡದಿರುವುದಿಲ್ಲ. ಏಕೆಂದರೆ ಆ ಬಾಹ್ಯ ಚಿಹ್ನದ ಸನ್ನಿಧಾನದಿಂದ ಅದಕ್ಕೆ ಸಂಬಂಧಪಟ್ಟ ಭಾವನೆಗಳು ಜಾಗೃತವಾಗುತ್ತವೆ. ಆ ಮೂಲಕ ಅಭೀಷ್ಟವಾದ ಆಂತರಿಕ ಸುಧಾರಣೆಯು ಸುಗಮವಾಗುವುದರಿಂದ ಬಾಹ್ಯ ಸುಧಾರಣೆ ಅವಶ್ಯವೆಂದಾಯಿತು.

ಭಾಷೆಯ ವಿಷಯದಲ್ಲಿಯೂ ಇದೇ ನಿಯಮವು ಅನುಸರಣೀಯವಾಗಿದೆ. ನಮ್ಮ ಕನ್ನಡ ಭಾಷೆಯ ಪೂರ್ವದ ಸುಧಾರಕರೂ ಇದೇ ಮಾರ್ಗದಲ್ಲಿ ನಡೆದಿರುವರು. ನೃಪತುಂಗನ ಅನಂತರದವರು ಅದಕ್ಕಿಂತ ಮೊದಲಿನ ಕನ್ನಡದ ಕಾವ್ಯರೂಪವಾಗಿದ್ದ ಬೆದಂಡೆ, ಚತ್ತಾಣ ಮುಂತಾದ ಬಂಧಗಳನ್ನು ಹರಿದೊಗೆದು ಚಂಪೂಪ್ರಬಂಧವೊಂದನ್ನೇ ಮೆರೆಯಿಸಿದರು. ಕವಿತೆಯ ರೂಪವನ್ನೇ ಪೂರ್ಣ ಬೇರೆ ಮಾಡಿದ ರಾಘವಾಂಕಾದಿಗಳು ಆ ಚಂಪೂಪ್ರಬಂಧಗಳನ್ನು ಬಿಟ್ಟು ಷಟ್ಪದೀಕಾವ್ಯಗಳನ್ನೇ ರಚಿಸಿದರು. ಹೀಗಿರುವಾಗ ನಾವಾದರೂ ಹೊಸ ಕವಿತೆಗೆ ಒಪ್ಪುವ ಹೊಸ ಛಂದಸ್ಸುಗಳನ್ನು ತೊಡಿಸಬೇಕು. ಅಲ್ಲದೆ ಇನ್ನೊಂದು ದೃಷ್ಟಿಯಿಂದಲೂ ಇದು ಅವಶ್ಯವಾಗಿದೆ. ಭಾಷೆಯ ರೂಪಾನುರೂಪವಾಗಿ ಛಂದಸ್ಸು ಇಲ್ಲದಿದ್ದರೆ ಕವಿತೆಯು ಕಷ್ಟವಾಗುತ್ತದೆ; ಅಥವಾ ಅಶ್ರಾವ್ಯವಾಗುತ್ತದೆ. ಇದನ್ನು ಆದ್ಯರು ಚೆನ್ನಾಗಿ ತಿಳಿದಿದ್ದರು. ಅವರ ಛಂದಸ್ಸುಗಳು ಸಂಸ್ಕೃತ ಛಂದಸ್ಸಿನವೇ ಆಗಿದ್ದರೂ, ಕನ್ನಡಕ್ಕೆ ಅನುರೂಪವಾದುವನ್ನೇ ಆಯ್ದು ಪ್ರಯೋಗಿಸಿರುವರು. ಸಂಸ್ಕೃತದಲ್ಲಿ ಅತ್ಯಂತ ಪ್ರಸಿದ್ಧವಾದ ಅನುಷ್ಟುಪ್‌ಶ್ಲೋಕವು ಕನ್ನಡಕ್ಕೆ ನಿಷ್ಪ್ರಯೋಜನವಾಯಿತು. ಚಂಪೂಪ್ರಬಂಧಗಳಲ್ಲಿ ಪ್ರಯುಕ್ತಗಳಾದ ವೃತ್ತಗಳಲ್ಲಿ ಹೊಸಗನ್ನಡ ಕವಿತೆಯನ್ನು ಸುಶ್ರಾವ್ಯವಾಗಿ ಬರೆಯುವುದು ಅಸಾಧ್ಯವೆಂದೇ ಹೇಳಬಹುದು. ಹಾಗೆಯೇ ಷಟ್ಪದೀಕಾವ್ಯರೂಪವಾಗಿ ಪೂರ್ಣ ಹಳೆಗನ್ನಡದಲ್ಲಿ ಬರೆಯುವುದೂ ಅಸಾಧ್ಯವಾಗಿ ಪರಿಣಮಿಸುವುದು.

ಆದುದರಿಂದ ಈಗಿನ ಭಾಷೆಗೆ ಯೋಗ್ಯವಾದ ಛಂದಸ್ಸುಗಳನ್ನೇ ಆಶ್ರಯಿಸಬೇಕು. ಷಟ್ಪದಿಗಳೂ ರಗಳೆಗಳೂ ಚೌಪದಿಯ ಭೇದಗಳೂ ತ್ರಿವುಡೆಗಳೂ, ಕವಿಯು ಇಷ್ಟಪಡುವ ಬೇರೆ ಕೆಲವು ಬಂಧಗಳೂ, ಕಲ್ಪಿಸಬಹುದಾದ ಹೊಸಬಂಧಗಳೂ ಹೊಸಗನ್ನಡದಲ್ಲಿ ಹೊಸರೀತಿಯ ಹೊಸ ಕವಿತೆಗಳನ್ನು ಮಾಡಲನುಕೂಲವಾಗುವವೆಂಬ ಗುಟ್ಟನ್ನು ಕವಿಗಳೂ ರಸಿಕರೂ ಆದ ಕನ್ನಡಿಗರೇ ಬಲ್ಲರು.

ಛಂದಸ್ಸುಗಳನ್ನು ಪ್ರಯೋಗಿಸುವುದರಲ್ಲಿಯೂ ಔಚಿತ್ಯವು ಅವಶ್ಯವಾಗಿದೆ. ವಿಶಿಷ್ಟ ರಾಗಗಳು ಹೇಗೆ ವಿಶಿಷ್ಟರಸವನ್ನು ಪ್ರಕಾಶಪಡಿಸುವವೋ ಹಾಗೆಯೇ ವಿಶಿಷ್ಟ ಛಂದಸ್ಸುಗಳು ವಿಶಿಷ್ಟ ರಸಕ್ಕೆ ಅನುಕೂಲವಾಗಿವೆ. ಕೆಲವು ಛಂದೋಬಂಧಗಳು ಎಲ್ಲ ರಸಗಳಿಗೂ ಅನುಕೂಲವಾಗುವುದುಂಟು. ಉಚಿತ ಪ್ರಯೋಗಗಳಲ್ಲಿ ಅತ್ಯಂತ ನಿಪುಣನಾದ ಕಾಳಿದಾಸನ ಕಾವ್ಯಗಳನ್ನು ಪರಿಶೀಲಿಸಿದರೆ ಈ ವಿಷಯವು ಮನಗಾಣುವುದು. ಅವನು ಅಜವಿಲಾಪ ರತಿವಿಲಾಪಗಳಿಗೆ ಆಯ್ದುಕೊಂಡ ವೃತ್ತವನ್ನು ನೋಡಿರಿ; ವಸಂತವರ್ಣನೆಗೆ ಆಯ್ದುಕೊಂಡ ವೃತ್ತವನ್ನು ನೋಡಿರಿ; ಮೇಘದೂತವನ್ನು ನೋಡಿರಿ. ಆ ವೃತ್ತಗಳನ್ನು ನಿರರ್ಥಕಶಬ್ದಗಳಿಂದ ಉಚ್ಚರಿಸಿದರೂ ರಸಾಂತರಾನುಕೂಲ್ಯವು ಗೋಚರಿಸುವುದಿಲ್ಲ. ಇದನ್ನು ನಾವು ಲಕ್ಷ್ಯದಲ್ಲಿಟ್ಟುಕೊಂಡು ಆಯಾ ರಸಾನುರೂಪವಾದ ವೃತ್ತಗಳನ್ನು ಆರಿಸಿಕೊಳ್ಳಬೇಕು. ಸಂಸ್ಕೃತ ಮಹಾಕಾವ್ಯಗಳಲ್ಲಿ ಪ್ರತಿಸರ್ಗಕ್ಕೂ ಬೇರೆ ವೃತ್ತವನ್ನು ಉಪಯೋಗಿಸುವುದು ಇದಕ್ಕಾಗಿಯೇ. ಚಂಪೂಪ್ರಬಂಧವು ಈ ಆನುಕೂಲ್ಯವನ್ನು ಅತ್ಯಂತವಾಗಿ ಒದಗಿಸಿಕೊಡುವುದಕ್ಕಾಗಿಯೇ ಜನ್ಮವೆತ್ತಿತು. ಆದರೆ ಅದನ್ನೆಷ್ಟು ಮಂದಿ ಕನ್ನಡ ಕವಿಗಳು ತಿಳಿದು ಉಪಯೋಗಿಸಿಕೊಂಡಿರುವರೆಂಬುದು ಮಾತ್ರ ವಿಚಾರದೊಳಗೆ ಬದ್ದಿರತಕ್ಕ ವಿಷಯ. ಇರಲಿ, ನಾವು ವರ್ಣಿಸತಕ್ಕ ವಿಷಯಕ್ಕೆ ಯಾವ ಬಂಧವು ಚೆನ್ನಾಗಿ ಒಪ್ಪುತ್ತದೆ, ಯಾವುದಿಲ್ಲವೆಂಬ ವಿವೇಚನೆ ಮಾಡಿಕೊಂಡು ಪ್ರಯೋಗಿಸಿದರಾಯಿತು. ಈ ಒಪ್ಪಿಗೆಯು 'ಭಿನ್ನರುಚಿ'ಯಾಗಬಹುದೆಂದು ಹೇಳಲಿಡೆಯಿಲ್ಲ. ಪದ್ಯಭಾಷೆ ಬರುವ ರಸಿಕನಿಗೆ ಇದರ ವಿವೇಚನೆ ತಾನಾಗಿ ತಿಳಿಯುತ್ತದೆ. ಇತರರಿಗೆ ಗೊತ್ತಾಗಲರಿಯದು.

ಈಗ ಎಲ್ಲಿ ನೋಡಿದರೂ ಸಣ್ಣ ಪುಟ್ಟ ಪದ್ಯಗಳನ್ನು ಬರೆಯುವವರೇ ಹೆಚ್ಚಾಗಿರುತ್ತಾರೆ. ಅದರಲ್ಲಿಯೂ ಆದಷ್ಟು ಮಟ್ಟಿಗೆ ಸಂಗೀತಕ್ಕೆ ಅನುಕೂಲವಾಗುವಂತೆಯೂ, ಆದಷ್ಟು ಹೆಚ್ಚು ವ್ಯಂಗ್ಯವು ಬರುವಂತೆಯೂ ಶಾಂತ, ಕರುಣ, ಶೃಂಗಾರ ರಸಗಳಲ್ಲಿಯೇ ಬರೆಯುತ್ತಾರೆ. ಇದಕ್ಕೆ ಅನೇಕ ಕಾರಣಗಳಿದ್ದರೂ ಇಡೀ ಪ್ರಪಂಚದ ಕವಿಸಮ್ರಾಟ್ ರವೀಂದ್ರನಾಥ ಠಾಕೂರರ ಕವಿತೆಗಳೇ ಮುಖ್ಯ ಕಾರಣವಾಗಿವೆಯೆಂದು ಹೇಳಬಹುದು. ನಮ್ಮ ಕನ್ನಡ ಕವಿಗಳೂ ಅದೇ ದಾರಿಯಲ್ಲಿ ನಡೆಯತೊಡಗಿರುವರು. ಈ ತರದ ಕವಿತೆಗಳು ಅತ್ಯಂತ ಮನೋರಂಜಕಗಳೆಂಬುದರಲ್ಲಿ ಸಂಶಯವಿಲ್ಲ. ಆದರೆ ಹೊಸ ವಿಮರ್ಶಕರು ಪ್ರಾಚೀನರ ಮೇಲೆ ಯಾವ ದೋಷವನ್ನಾರೋಪಿಸುವರೋ ಅದನ್ನೇ ಇವರೂ ಮಾಡುತ್ತಾರೆ. ಪೂರ್ವಕಾಲದಲ್ಲಿ ಎಲ್ಲವೂ ಮಹಾಕಾವ್ಯಗಳೇ, ಎಲ್ಲವೂ ಚಂಪೂಪ್ರಬಂಧಗಳೇ, ಇರುವುದೆಲ್ಲ ವರ್ಣನೆಯೇ. ಈಗ ಎಲ್ಲವೂ ಗೀತಗಳೇ, ಇರುವುದೆಲ್ಲ ವ್ಯಂಗ್ಯವೇ. ಇದರಿಂದ ವಿವಿಧತೆಯು ನಾಶವಾಗಿ ಓದುಗಾರರಲ್ಲಿ ಔದಾಸೀನ್ಯವುಂಟಾಗುತ್ತದೆ. ಮತ್ತೊಂದು ದೋಷವೇನೆಂದರೆ- ಇವುಗಳನ್ನೋದುವುದರಿಂದ ಭಾಷಾ ಉತ್ಪತ್ತಿಯಾಗುವುದಿಲ್ಲ. ಭಾಷೆಗೊಂದು ಶೈಲಿಯುಂಟುಮಾಡುವುದಿಲ್ಲ. ಇವುಗಳುಂಟಾಗಬೇಕಾದರೆ ದೊಡ್ಡ ಕಾವ್ಯಗಳೂ ವಿವಿಧ ರಸಗಳೂ ಬೇಕು. ವಿಶಾಲವಾದ ವಿಷಯಪ್ರಪಂಚವೂ ಬೇಕು. ಸಣ್ಣ ಕವಿತೆಗಳ ದೊಡ್ಡದೊಂದು ಗುಂಪುಂಟುಮಾಡಿದರೂ ಏಕೆ ಭಾಷಾವ್ಯುತ್ಪತ್ತಿಯಾಗುವುದಿಲ್ಲ?

ಏಕೆ ಭಾಷೆಗೊಂದು ಶೈಲಿ ಬರುವುದಿಲ್ಲ? ಎಂದು ಪ್ರಶ್ನಿಸಬಹುದು. ಓದುಗಾರರಲ್ಲಿ ಯಾವ ರೀತಿಯಿಂದ ಉತ್ಪತ್ತಿಯಾಗುವುದೆಂಬ ವಿಷಯವನ್ನು ಮನನ ಮಾಡಿದರೆ ಇದರ ಕಾರಣವು ತಿಳಿಯುವುದು. ಉತ್ಪತ್ತಿಯೆಂದರೆ ಭಾಷಾಜ್ಞಾನಕ್ಕೆ ರೂಢಿಯಾದ ಹೆಸರು. ಈ ಗೀತಗಳಲ್ಲಿ ಕೆಲವೇ ವಿಷಯಗಳಿರುವುದರಿಂದ ಕೆಲವೇ ಶಬ್ದಗಳೂ, ಕೆಲವೇ ರೀತಿಯ ಪ್ರಯೋಗಗಳೂ ಬರುವುದು ಸ್ವಾಭಾವಿಕವು. ಇದರಿಂದ ಉತ್ಪತ್ತಿಯಾಗಲು ಅಡ್ಡಿಯಾಯಿತು. ಭಾಷೆಗೊಂದು ಶೈಲಿ ಸ್ಥಿರವಾಗಬೇಕಾದರೆ ಒಂದೇ ರೀತಿಯಾದ ಶೈಲಿಯಲ್ಲಿ ಬರೆಯಲ್ಪಡತಕ್ಕ ವಿಷಯವೊಂದು ಮನಸ್ಸಿನಲ್ಲಿ ಹೆಚ್ಚು ಹೊತ್ತು ಸಂಸ್ಕಾರ ಮಾಡಬೇಕು. ಪ್ರತಿಭಾಶಾಲಿಯಾದ ಕವಿಗೆ ವಿಷಯಾನುರೂಪವಾಗಿ ಶೈಲಿಯು ಬೇರ್ಪಡುವುದು ಸ್ವಾಭಾವಿಕವು. ಸಂಗೀತದ ಯಾವುದೊಂದು ರಾಗವು ಮನಸ್ಸಿನಲ್ಲಿ ಮುದ್ರಿಸಬೇಕಾದರೆ ಕ್ಷಣಕ್ಕೊಂದು ರಾಗವನ್ನು ಹಾಡದೆ ದೀರ್ಘ ಸಮಯ ಒಂದೇ ರಾಗವನ್ನು ಹಾಡಬೇಕು. ಕತ್ತಲೆಯಲ್ಲಿ ಯಾವುದಾದರೊಂದು ವಸ್ತುವಿನ ಪೂರ್ಣಜ್ಞಾನವಾಗಬೇಕಾದರೆ ಕೆಲವು ಹೊತ್ತು ನಿರಂತರ ಬೆಳಗುತ್ತಿರುವ ಪ್ರಕಾಶವು ಅಗತ್ಯ. ಬಹಳ ಉಜ್ವಲವಾಗಿ ಸಾವಿರ ಬಾರಿ ಮಿಂಚಿದರೂ ಒಂದು ಸಣ್ಣ ದೀಪದಿಂದಾಗಬಹುದಾದ ಉಪಯೋಗವು ದೊರೆಯಲಾರದು. ದೊಡ್ಡ ಕಾವ್ಯದಲ್ಲಿಯಾದರೂ ಭಿನ್ನವಿಷಯಗಳು ಬರುವುದರಿಂದ ಏಕಶೈಲಿಯು ಸಿದ್ಧವಾಗುವುದೆಂತೆಂದು ಯಾರಾದರೂ ಕೇಳಬಹುದು. ಸ್ಥಾಯಿಭಾವವನ್ನು ಸಂಚಾರಿಭಾವಗಳು ಅಳಿಸದೆ ಹೇಗೆ ಪೋಷಿಸುತ್ತವೆಯೋ, ಸ್ವರಾರೋಹಾವರೋಹಗಳು ಹೇಗೆ ಶ್ರುತಿಯನ್ನು ಅಳಿಸುವುದಿಲ್ಲವೋ, ಹಾಗೆಯೇ ಕಾವ್ಯದ ಆದ್ಯಂತವಾಗಿಯೂ ಒಂದೇ ಶೈಲಿಯು ಸಿದ್ಧಿಸುತ್ತದೆ.

ಶೇಕ್ಸ್‌ಪಿಯರ್, ಮಿಲ್ಟನ್ ಮೊದಲಾದ ಕವಿಪುಂಗವರು ಪ್ರತಿಷ್ಠಿಸಿದ ಆಂಗ್ಲ ಭಾರತಿಯನ್ನೇ ಶೆಲ್ಲಿ ವರ್ಡ್ಸ್‌ವರ್ತರು ಅಲಂಕರಿಸಿದರು. ತುಲಸೀದಾಸನ ರಾಮಾಯಣವನ್ನುಂಡ ಹಿಂದೀ ಭಾರತಿಯೇ ಸೂರದಾಸಾದಿಗಳ ಗೀತಗಳನ್ನು ಸವಿದಳು. ಮಧುಸೂದನದತ್ತನ ಮೇಘನಾದವಧವೇ ಮೊದಲಾದ ಮಹಾಕಾವ್ಯಗಳಿಂದ ಪೂಜಿತಳಾದ ವಂಗ ಭಾರತಿಯೇ ಇಂದು ರವೀಂದ್ರರ ಗೀತಗಳನ್ನು ಆಲಿಸುತ್ತಿರುವಳು. ವ್ಯಂಗ್ಯಗೀತಗಳು ಮೆರೆಯುತ್ತಿರುವ ಯಾವ ಭಾಷೆಯಾದರೂ ಪ್ರೌಢಾವಸ್ಥೆಗೆ ಬಂದುದು ಮಹಾ ಕಾವ್ಯಗಳ ಬಲದಿಂದಲೇ ಎಂಬುದು ನಿರ್ವಿವಾದ. ಹೀಗಿರುವಾಗ ಇನ್ನೂ ಬಾಲ್ಯಾವಸ್ಥೆಯನು ದಾಟದ ಈ ನಮ್ಮ ಹೊಸಗನ್ನಡವು ಪ್ರೌಢಾವಸ್ಥೆಗೆ ಬರಬೇಕಾದರೆ ದೊಡ್ಡ ಕಾವ್ಯಗಳು ಅವಶ್ಯವೇ? ಅಲ್ಲವೇ? ಕಾವ್ಯಕ್ಕೊಂದು ಶೈಲಿಯು ನೆಲಗೊಂಡಿದ್ದರೆ ಹಿಂದೆ ಉದಾಹರಿಸಿದ ಕೆಲವು ಪದ್ಯಗಳ ಅಶ್ರಾವ್ಯತೆಯು ಕವಿಗಳಿಗೇ ಗೋಚರಿಸಿ ಆ ಮಾರ್ಗವನ್ನವರು ಬಿಡುತಿದ್ದರು.

ಈ ವರೆಗೆ ಹೊಸ ಬಗೆಯ ಕಾವ್ಯಗಳು ಹೊಸ ರೀತಿಯ ಕಾವ್ಯಗಳು ಎಂದು ಮುಂತಾಗಿ ಹೇಳಿದ್ದಾಯಿತೇ ಹೊರತು ಅದು ಯಾವ ಬಗೆಯದಾಗಬೇಕು, ಯಾವ ರೀತಿಯದಾಗಬೇಕೆಂದು ಹೇಳಿರುವುದಿಲ್ಲ; ಹೇಳಲು ಸಾಧ್ಯವೂ ಇಲ್ಲ. ಪ್ರತಿಭಾಶಾಲಿಯಾದ ಕವಿಯು ಸ್ವತಂತ್ರ ಮಾರ್ಗವನ್ನೇ ಅವಲಂಬಿಸುವನು. ಇನ್ನೊಬ್ಬನಿಗೆ ರುಚಿಸಿದ ರೀತಿಯು ಅವನಿಗೆ ಸಮ್ಮತವಾಗುತ್ತದೆಂದು ಹೇಳಲು ಸಾಧ್ಯವಿಲ್ಲ. ಆದುದರಿಂದ ಈ ವಿಷಯದಲ್ಲಿ ಅಭಿಪ್ರಾಯವು ವಿಫಲವಾಗುವುದು. ಮಾತ್ರವಲ್ಲ, ಇದೇ ರೀತಿಯಾಗಬೇಕೆಂಬ ನಿರ್ಬಂಧಕ್ಕೊಳಗಾಗಿಸಿ ಬರೆದುದರಿಂದಲೇ ಎಷ್ಟೋ ಪ್ರಾಚೀನ ಕಾವ್ಯಗಳು ನಿಸ್ಸಾರವಾಗಿವೆ. ಅವುಗಳನ್ನು ನಾವು ದೂರಿ ಅದೇ ತಪ್ಪುಂಟಾಗಬಹುದಾದ ನಿಯಮಗಳನ್ನು ಮಾಡುವುದು ಸರ್ವಥಾ ಕ್ಷಮ್ಯವಲ್ಲ. ಸಾಹಿತ್ಯಶಾಸ್ತ್ರಜ್ಞರು ಕವಿತೆಯನ್ನು 'ನಿಯತಿ ಕೃತನಿಯಮರಹಿತಾ' 'ಅನನ್ಯಪರತಂತ್ರಾ' ಎಂಬುದಾಗಿ ಹೇಳಿರುವುದು ಪ್ರಗಲ್ಭವಿಚಾರಪೂರ್ವಕವಾಗಿಯೇ ಆಗಿದೆ.

ಆದರೂ, ಅಂಥ ಸ್ವತಂತ್ರವಾದ ಪ್ರತಿಭಾದ್ಯೋತಕವಾದ ಕಾವ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಓದುವುದರಿಂದ ನಮ್ಮಲ್ಲಿಯೂ ಅಂತಹ ಪ್ರತಿಭೆಯು ತಾನಾಗಿ ಅಂಕುರಿಸುತ್ತದೆ. ಹಳೆಗನ್ನಡದಲ್ಲಿ ಅನೇಕ ಕಾವ್ಯರತ್ನಗಳಿದ್ದರೂ ಎಲ್ಲವುಗಳಲ್ಲಿಯೂ ಈ ಸ್ವತಂತ್ರತೆ ಇಲ್ಲ. ಹಾಗಾದರೆ ಅವುಗಳನ್ನು ಓದುವುದು ನಿಷ್ಫಲವೇ? ಅಲ್ಲ. ಅವುಗಳನ್ನೋದಿ ನಮ್ಮಲ್ಲಿ ಕನ್ನಡ ಪದ್ಯಭಾಷೆಯ ಸಂಸ್ಕೃತಿಯನ್ನುಂಟು ಮಾಡಿಕೊಳ್ಳಬೇಕು. ಇದು ಅತ್ಯಾವಶ್ಯಕವು. ಪಂಪನ ಭಾರತ, ಹರಿಶ್ಚಂದ್ರ ಕಾವ್ಯ, ನಡುಗನ್ನಡದ ಕಾವ್ಯಗಳಲ್ಲಿ ಮುಕುಟಪ್ರಾಯವಾದ ಕುಮಾರವ್ಯಾಸನ ಭಾರತ, ರತ್ನಾಕರನ ಭರತೇಶವೈಭವ ಮುಂತಾದ ಕೆಲ ಕಾವ್ಯಗಳು ಈ ದೃಷ್ಟಿಯಿಂದ ಓದಲು ಅತ್ಯಂತಾರ್ಹವಾಗಿವೆ. ಕುಮಾರವ್ಯಾಸನ ಭಾರತದಲ್ಲಿ ಬೇರೆ ಯಾವ ಕನ್ನಡ ವಾಕ್ಯಗಳಲ್ಲಿಯೂ ಕಾಣದ ದೋಷಗಳಿರಬಹುದು. ಆದರೆ ಬೇರೆಲ್ಲಿಯೂ ದೊರೆಯದ ಉತ್ಕೃಷ್ಟ ಗುಣಗಳಿವೆ. ಭರತೇಶವೈಭವದ ಕೆಲವು ಪ್ರಸಂಗಗಳು ಅತ್ಯಂತ ನೀರಸಗಳಾಗಿ ತೋರಬಹುದು. ಆದರೆ ಅದರಲ್ಲಿರುವ ಅತ್ಯಂತ ರಸವತ್ತಾದ ಸಂದರ್ಭಗಳು ಕನ್ನಡದಲ್ಲಿ ಬೇರೆ ಸಿಕ್ಕಲಾರವು. ಕವಿಯು ಪರಾಮರ್ಶಿಸಿ ಇಂಥಾ ಕಾವ್ಯಗಳನ್ನೋದುವುದರಿಂದ ಹೊಸ ಜೀವವೇ ಕವಿ

ತೆಗೆ ಬರುವುದು. ಹಾಗೆಂದು ನಾವು ಆ ಕಾವ್ಯಗಳ ದಾಸರಾಗಿ ಅವುಗಳನ್ನೇ ಅನುಕರಿಸತೊಡಗಬಾರದು. ಸ್ವತಂತ್ರ ಭಾವದ ಕವಿಯು ಹಾಗೆಂದೂ ಮಾಡನು. ಅವನು ತನ್ನ ರೀತಿಯೇ ತನಗೆಂದು ತಿಳಿಯುವನು.

ಎನ್ನೆದೆಯ ಕುಂದಣದ ಹರಿವಾಣದೊಳಗುಂಬೆ ।
ಅನ್ಯರೆಂಜಲ ಬಟ್ಟಲೆನಗೇತಕೆ ॥
ಎನ್ನ ಸವಿನುಡಿಯಿಂದೆ ಎನ್ನ ರಮಣಿಯು ಕರೆವೆ ।
ಅನ್ನಿಗರ ಕೊಂಕು ನುಡಿಗಳನರಸಲೇಕೆ ॥
ನಳನಳಿಸುವೆನ್ನ ಹೂದೋಟದಲಿ ಘಮಘಮಿಸ।
ಬಿರಿಮುಗುಳುಗಳ ಮಾಲೆಯಾಂತುಕೊಂಬೆ ॥
ಹೆರರ ಕಾಡಿನ ಮುಳ್ಳ ಹೊದರೆಯ್ದಿ ಸಿಡಿದಿರ್ದ ।
ಹಳಿಯ ಹೂಗಳನಾರಿಸುವ ಭಂಗವೇಕೆ ॥
ಎನ್ನ ಕೈಯಿಂ ಸಮೆದ ಪೀತಾಂಬರವನುಡುವೆ ।
ಅನ್ಯರುಡಿಗೆಯ ತೊಡುವ ಹಂಬಲೇಕೆ ॥
ಎನ್ನ ರನ್ನದ ದೀಪದಿಂದ ಮನೆಬೆಳಗಿಸುವೆ ।
ಅನ್ನಿಗರ ಕೈದೀವಟಿಗೆಯಾಸೆ ಯೇಕೆ ॥

ಎಂದೊಬ್ಬ ಕವಿಯು ಹೇಳಿದಂತೆ ಅನ್ಯರ ಭಾವ, ಅನ್ಯರ ಮಾತು, ಅನ್ಯರ ರೀತಿಗಳನ್ನು ಅನುಕರಿಸನು. ಈ ತರದ ಸ್ವಾತಂತ್ರ್ಯಕ್ಕೆ ಅನುರೂಪವಾದ ಕವಿತಾ ಶಕ್ತಿ, ಭಾಷಾವ್ಯುತ್ಪತ್ತಿಗಳಾರಿಗುಂಟೋ ಆತನನ್ನೇ ಈಗ ಕನ್ನಡವು ಹಾರೈಸುತ್ತಿದೆ. ಅಂಥವನ ಕವಿತೆಯು ತತ್ಕಾಲದ ಜನರಲ್ಲಿ ಅಭಿರುಚಿಯನ್ನು ಪಡೆಯದಿದ್ದರೂ, ಕಾಲಾಂತರದಲ್ಲಿ ಅವನು ಭಾಷಾ ಚಕ್ರವರ್ತಿಯಾಗುವನು. ಅವನು 'ಉತ್ಪತ್ಸ್ಯತೇ ಮಮ ತು ಕೋಪಿ ಸಮಾನಧರ್ಮಾ' ಎಂದು ಧೈರ್ಯವಾಗಿ ಹೇಳಬಹುದು. ಅಥವಾ ಮುಂದೆ ಮನ್ನಣೆ ದೊರೆವುದೆಂಬ ಹಂಬಲಾದರೂ ಸ್ವತಂತ್ರನಾದ ಅವನಿಗೆ ಅವಶ್ಯವಿಲ್ಲ. ಇತರರ ತೃಪ್ತಿಗಾಗಿ ಅವನು ಬರೆವುದಲ್ಲ. ತನ್ನ ಹೃದಯ ತೃಪ್ತಿಗಾಗಿಯೇ ಬರೆಯುವುದು. ನಿರ್ಜನವಾದ ಅರಣ್ಯದಲ್ಲಿ ಹಕ್ಕಿಗಳು ಹಾಡುವಂತೆ, ನವಿಲು ಕುಣಿಯುವಂತೆ, ನಿರ್ಝರಿಣಿಯು ಹರಿಯುವಂತೆ, ಕವಿತಾರಚನೆ ಮಾಡುವುದಾಗಿದೆ. ಅವನು 'ಬೇಕಾದರಾಲಿಸುವುದು ಬೇಡವಾಗೆ ಪರಾಕು ಮಾಡುವುದೆನಗಿಲ್ಲ, ವ್ಯಾಕುಲವಿಲ್ಲ, ಸಂತಸವಿಲ್ಲ ನಾನು ನಿರಾಕಾಂಕ್ಷಿ' ಎಂದೇ ಹೇಳುವನು.

## ಪಲ್ಲಟನಾಯಕನ ಧರ್ಮ.

(ಲೇಖಕ:— ಕೊರಡ್ಕಲ್ ಶ್ರೀನಿವಾಸರಾವ್, ಬೋರ್ಡ ಹೈಸ್ಕೂಲು ಉಪಾಧ್ಯಾಯ, ಉಡುಪಿ.)

ಉಡುಪಿಯ ಶ್ರೀಮದನಂತೇಶ್ವರ ದೇವಸ್ಥಾನದ ಪೌಳಿಯಲ್ಲಿ ಜನರದೊಂದು ಗುಂಪು. ಗಂಡಸು ಹೆಂಗಸರೆಂದು ಸುಮಾರು ಐವತ್ತು ಮಂದಿ ಗಂಟುಮೂಟೆಗಳನ್ನು ಕಟ್ಟಿಕೊಂಡು ಕುಳಿತಿರುವರು. ಅವರ ಬಳಿಯಲ್ಲಿ ಅವರ ಬಂಧು ಬಾಂಧವ ಇಷ್ಟ ಮಿತ್ರವರ್ಗಕ್ಕೆ ಸೇರಿದವರನೇಕರು ಕುಳಿತು ಮಾತಾಡುತ್ತಿರುವರು. ಅಲ್ಲಿ ನಡೆಯುತಿದ್ದ ಮಾತುಕಥೆಗಳನ್ನು ಕೇಳಿದರೆ ಅವರಲ್ಲನೇಕರು ಯಾತ್ರಾರ್ಥಿಗಳಾಗಿ ಹೊರಟವರೆಂದೂ ಮತ್ತುಳಿದವರು ಅವರನ್ನು ಕಳುಹಿಕೊಡಲು ಬಂದವರೆಂದೂ ತಿಳಿಯಬರುತಿತ್ತು. ನಿಶ್ಚಿತ ಮುಹೂರ್ತವು ಒದಗಿತು. 'ಶ್ರೀ ವೆಂಕಟಾಚಲ ವಾಸ! ಶ್ರೀನಿವಾಸ! ಶ್ರೀಮದ್ರಮಾರಮಣ ಗೋವಿಂದಾ! ಗೋವಿಂದ!' ಎಂದು ಹೇಳುತ್ತ ಎಲ್ಲರೂ ಎದ್ದು ನಿಂತರು. ಯಾತ್ರಿಕರಾಗಿ ಹೊರಟವರು ತಮ್ಮ ತಮ್ಮ ಗಂಟುಮೂಟೆಗಳನ್ನು ಹೊತ್ತುಕೊಂಡು 'ಶ್ರೀಮದ್ರಮಾರಮಣ ಗೋವಿಂದಾ! ಗೋವಿಂದ!' ಎಂಬ ಕೀರ್ತನೆಯನ್ನು ಒಟ್ಟಾಗಿ ಹೇಳುತ್ತ ಹೇಳುತ್ತ ಕಿನ್ನಿಮೂಲ್ಕಿಯತ್ತಕಡೆಗೆ ನಡೆದರು. ಅವರಲ್ಲೊಬ್ಬನು ಬಹು ದೊಡ್ಡದೊಂದು ಮೂಟೆಯನ್ನು ಹೊತ್ತಿದ್ದನು. ಅದನ್ನು ಪರೀಕ್ಷಿಸಿದರೆ ಅದು ನಾಲ್ಕಾರು ಗಂಟುಗಳನ್ನು ಒಟ್ಟುಮಾಡಿ ಕಟ್ಟಿದ್ದೊಂದು ದೊಡ್ಡ ಮೂಟೆಯೆಂದು ತೋರುತಿತ್ತು. ಆತನಾದರೋ ಹರಕು ಪಂಚೆಗಳನ್ನು ಸೊಂಟಕ್ಕೆ ಸುತ್ತಿಕೊಂಡಿದ್ದನು. ಮತ್ತೊಂದೆರಡು ಪಂಚೆಯ ಸಣ್ಣದೊಂದು ಗಂಟನ್ನು ಪ್ರತ್ಯೇಕವಾಗಿ ಬಗಲಿಂದ ತೂಗಹಾಕಿದ್ದನು. ಇದು ಮಾತ್ರ ಅವನದು. ಹಾಗಾದರೆ ತಲೆಯ ಮೇಲಿನ ಆ ದೊಡ್ಡ ಮೂಟೆ? ಬೇರೆ ಯಾತ್ರಿಕರ ಗಂಟುಮೂಟೆಗಳನ್ನು ಹೊತ್ತಾದರೂ ಶ್ರೀನಿವಾಸನ ದರ್ಶನಮಾಡಬೇಕೆಂದು ಇವನೇನು ಹೊರಟರುವನೆ? ಅಷ್ಟೊಂದು ಭಕ್ತಿ ಇವನಲ್ಲಿರುವುದೇ? ಏಕಿರಬಾರದು!

ಬೇರೆ ಯಾತ್ರಿಕರು 'ಶ್ರೀಮದ್ರಮಾರಮಣ ಗೋವಿಂದಾ!' ಎನ್ನುವಷ್ಟರಲ್ಲಿ ಈತನ ಬಾಯಿಂದ ಅತ್ಯುತ್ಸಾಹದಿಂದ ಹೊರಬೀಳುವ 'ಗೋ((((ವಿಂದ' ಎಂಬುದು ಇವನ ಹೃದಯದ ಎಷ್ಟೊಂದು ಆಳದಿಂದ ಹೊರಟು ಬಂದಿರುವುದೆಂಬುದೂ, ಇಷ್ಟೊಂದು ಪರ್ಯಂತ ತಡೆಗಟ್ಟಿ ಹೃದಯದೊಳಗೆ ಒತ್ತೊತ್ತಿಟ್ಟಿದ್ದ ಆ ಭಕ್ತಿಯು ಇಂದು ಏರಿಮುರಿದು ಹೊರಹರಿವ ನದಿಯ ಪ್ರವಾಹದಂತೆ ರಭಸದಿಂದ ಬರುತ್ತಿರುವುದೆಂಬುದೂ ವ್ಯಕ್ತವಾಗುತಿತ್ತು. ಆ 'ಗೋ((((ವಿಂದ' ಎಂಬ ನಾಮೋಚ್ಚಾರಣೆಯನ್ನು ಮಾಡುವಾಗ ಆತನಿಗೆ ತನ್ನ ತಲೆಯ ಮೇಲಿನ ಮೂಟೆಯ ಭಾರವಾಗಲೀ ಮಾರ್ಗಾಯಾಸವಾಗಲೀ ತಿಳಿಯುತ್ತಲೇ ಇದ್ದಿಲ್ಲ. ಬದಲಾಗಿ ಹಾಗೆಂದ ಹಾಗೆಲ್ಲ ಹೊಸದೊಂದು ಬಲವು ಆತನ ಪ್ರತಿಯೊಂದು ಅಂಗಾಂಗದಲ್ಲಿ ತುಂಬಿ ಬಂದಂತೆ ಆತನಿಗೆ ಬೋಧೆಯಾಗುತಿತ್ತು.

"ಕಾಲು ನಡೆಯ ತಿರುಪತಿಯಾತ್ರೆ! ದಾರಿಯೆಲ್ಲ 'ಶ್ರೀಮದ್ರಮಾರಮಣ ಗೋವಿಂದ' ಎಂಬ ಕೂಗು! ಇದೆಲ್ಲಾದರೂ ಇದೆಯೆ? ಯಾತ್ರಿಕರು ಮೋಟರ್ ಸ್ಟೇಶನಿಗೆ ಹೋದರಾಯಿತು, ಬೇಕೆಂದರೆ ಮೋಟರ್ ಬಸ್ಸೇ ಅವರು ಹೊರಡುವಲ್ಲಿಗೆ ಬಂದೇ ಬಿಡುವುದು! ಇದು ೨೦ನೆಯ ಶತಮಾನದಲ್ಲಿ ನಡೆದುದೊ? ೧೧ನೆಯ ಶತಮಾನದಲ್ಲಾದುದೊ?" ಎಂದು ವಾಚಕಮಹಾಶಯರು ಕೇಳಬಹುದು. ನಮ್ಮ ಈ ಯಾತ್ರಿಕರು 'ಶ್ರೀಮದ್ರಮಾರಮಣಗೋವಿಂದಾ! ಗೋ(((ವಿಂದ!' ಎಂದು ಗಟ್ಟಿಯಾಗಿ ಹೇಳಲು ನಾಚುವಷ್ಟು ಶಿಥಿಲ ಭಕ್ತಿಯ ೨೦ನೆಯ ಶತಮಾನದ ಯಾತ್ರಿಕರಲ್ಲ. ನಮ್ಮ ಕಥೆಯು ಸುಮಾರು ಒಂದು ಸಾವಿರ ವರುಷಗಳ ಹಿಂದಿನದು.

ಆಗ ಉಡುಪಿಯ ವಾಯುವ್ಯ ಬದಿಯ ಬನ್ನಿಂಜೆಯಲ್ಲಿ ಕಡು ಬಡವನೊಬ್ಬನಿದ್ದನು. ಬರೇ ಗರೀಬನೆಂದೋ ಏನೋ ಆತನನ್ನು ಉಡುಪಿಯವರೆಲ್ಲರು '*ಪಳ್ಪಟ್ ನಾಯ್ಕ'ನೆಂದು ಕರೆಯುತಿದ್ದರು. ಲೌಕಿಕ ಸ್ಥಿತಿಗತಿಯಲ್ಲಿ ತುಲನೆ ಮಾಡಿ ನೋಡಿದರೆ ಅವನು ಬಡವರಲ್ಲಿ ಬಡವನೆಂಬುದು ನಿಸ್ಸಂದೇಹ. ಬರಮುಗುಡ್ಡೆಯ ಬದಿಯಲ್ಲಿ ಯಾರೂ ಬೇಡವೆಂದು ಬಿಟ್ಟಿದ್ದ ಅದೊಂದು ಜಾಗದಲ್ಲಿ ಅವನದೊಂದು ಮನೆ. ಮನೆಯೆಂದರೆ ಹುಲ್ಲು ಮಾಡಿನ ಚಿಕ್ಕದೊಂಧು ಎರಡರೆಯ ಗುಡಿ. ಅದಕ್ಕೆ ಎದುರಲ್ಲೊಂದು ಅಗಲಕಿರಿದಾದ ಜಗಲಿ. ಹರಕು ಮುರುಕಾದ ಮಡಲಿನ ತಟ್ಟಿಯ ಗೋಡೆ. ಬೇಸಿಗೆಯಲ್ಲಿ ಸೂರ್ಯನ ಕಿರಣಗಳೂ ಮಳೆಗಾಲದಲ್ಲಿ ನೀರೂ ಸರಾಗವಾಗಿ ಒಳಗೆ ಬರುವುದಕ್ಕೆ ಅಡ್ಡಿಯೇನೂ ಇದ್ದಿಲ್ಲ. ಆದರೆ ಎದುರಲ್ಲಿದ್ದ ಜಾನುವಾರುಗಳ ಕೊಟ್ಟಿಗೆಗೆ ಮಾತ್ರ ಎಲ್ಲಿಂದಾದರೂ ಕಬ್ಬಿನ ಸೋಗೆಗಳನ್ನು ಬೇಡಿ ತಂದು ಹೊದಿಸಿ ತಾಳಿಯ ಮಡಲುಗಳಿಂದ ತಟ್ಟಿಕಟ್ಟಿ ಅದನ್ನು ಆದಷ್ಟು ಚೊಕ್ಕಟವಾಗಿಟ್ಟಿದ್ದನು. ಅವನು ಮೊಟ್ಟಮೊದಲು ಯಾರೋ ಒಬ್ಬರದೊಂದು ದನವನ್ನು ಸಾಕಿ ಕರು ಹಾಕಿಸಿ ಕಳುಹಿಸಿಕೊಟ್ಟಿದ್ದನು. ಅದಕ್ಕವರು ಆ ಕರುವನ್ನು ಇವನಿಗೆ ಉಚಿತವಾಗಿ ಕೊಟ್ಟಿದ್ದರು. ಆ ಕರು ದನವಾಯಿತು. ಅದಕ್ಕೆ ಕರುಗಳಾದವು. ಕರುಗಳಿಗೆ ಕರುಗಳಾದವು. ಈ ನಡೆಗಳೇ ಪಳ್ಪಟನ ಲೌಕಿಕ ಸೊತ್ತುಗಳು.

ಆ ಬಂಜರು ಜಾಗದಲ್ಲಿಯೂ ಅವನೊಂದು ಚಿಕ್ಕ ತೋಟವನ್ನು ಎಬ್ಬಿಸಿದ್ದನು. ಅದರಲ್ಲಿರುವುದು ದೇವರ ಪೂಜೆಗೆ ಬೇಕಾದ ಫಲ ಪುಷ್ಪ ಪತ್ರಗಳ ಗಿಡಗಳು. ಪೂಜೆಗೆ ಬೇಕಾದ ಹೂದೊಳಸಿ ಮುಂತಾದುವು ಬೇಕಾದರೆ ಪಳ್ಪಟನಾಯ್ಕನ ಹಿತ್ತಲಿಗೆ ಹೋಗಬೇಕೆಂಬುದು ಉಡುಪಿಯವರೆಲ್ಲರಿಗೂ ಗೊತ್ತು. ಬೆಳಗಾಯಿತೆಂದರೆ ಅವನ ಆ ಚೊಕ್ಕಟವಾಗಿರಿಸಿದ್ದ ತೋಟಕ್ಕೆ ಅನೇಕ ಬ್ರಾಹ್ಮಣರು ಬರುತಿದ್ದರು. ಅನಂತೇಶ್ವರ ದೇವರ ಅಭಿಷೇಕಕ್ಕೆ ಒಂದು ಸೇರು ಹಾಲೂ ಫಲಪುಷ್ಪಪತ್ರಗಳೂ ಪಳ್ಪಟನಾಯ್ಕನ ಸ್ವಹಸ್ತದಿಂದಲೆ ದಿನಾಲೂ ಸಲ್ಲುತಿದ್ದುವು.

ಬಡ ಪಳ್ಪಟನಾಯ್ಕನು ಬಡವರ ಗೆಳೆಯ. ನೆರೆಹೊರೆಯ ಬಡವರ್ಯಾರೇ ಆಗಲಿ ಅಸ್ವಸ್ಥದಲ್ಲಿದ್ದರೆ ಅಲ್ಲಿಗವನು ದಿನಂಪ್ರತಿ ಹೋಗದೆ ಇರುತಿದ್ದಿಲ್ಲ. 'ಅಣ್ಣಾ, ಮದ್ದಿಗಾಗಲಿ ಅನುಪಾನಕ್ಕಾಗಲಿ ಹಾಲು ಬೆಣ್ಣೆ ತುಪ್ಪಗಳೇನಾದರೂ ಬೇಕಿದ್ದರೆ ನಮ್ಮಲ್ಲಿ ನಿನ್ನದಾಗಿದೆ. ಕೊಂಡುಹೋಗು. ಹೇಗಾದರೂ ದೇವರು ಒಮ್ಮೆಗೆ ನಿನ್ನನ್ನು ನೆಟ್ಟಗೆ ಮಾಡಲಿ!' ಎಂಬುದೇ ಪಳ್ಪಟನು ರೋಗಿಗೆ ಹೇಳುವ ಮಾತು. ಬಡತಾಯಿಯು ತನ್ನ ನರಳುವ ಮಗುವಿಗೆ ಹಾಲು ಬೇಕಾಗಿದ್ದರೆ ಪಳ್ಪಟನಾಯ್ಕನಲ್ಲಿಗೆ ಹೋಗುತಿದ್ದಳು. ಬಡ ಕೂಲಿಗೆ ಮಜ್ಜಿಗೆ ಕುಡಿಯಬೇಕೆಂದಾಶೆ ಹುಟ್ಟಿದರೆ ಆ ಬಯಕೆ ನೆರವೇರುವುದು ಪಳ್ಪಟನಾಯ್ಕನಲ್ಲಿ. ದೊಡ್ಡ ದೊಡ್ಡವರಿಗೂ ಪಳ್ಪಟನಾಯ್ಕನ ಹಾಲೇ ಬೇಕು. ಅವರು ಕೊಟ್ಟ ದುಡ್ಡು ತಕ್ಕೊಳ್ಳುವನು. ಹಾಲಿಗೆ ನೀರು ಬೆರೆಸುವುದೇನೆಂಬುದು ಪಳ್ಪಟನಿಗೆ ಗೊತ್ತಿಲ್ಲದ ವಿಷಯ. ಕುರುಡರು, ಕುಂಟರು, ಹಸಿವಿಂದ ಕಂಗೆಟ್ಟ ಬಡಪಾಯಿಗಳು ಇವರ್ಯಾರೇ ಬರಲಿ, ತನ್ನ ಊಟವನ್ನಾದರೂ ಅವರಿಗೆ ಬಡಿಸಿ ತಾನೊಂದಿಷ್ಟು ಮಜ್ಜಿಗೆ ಕುಡಿದು ಮಲಗುತಿದ್ದನು. ಆಗ ಪಳ್ಪಟನಿಗಾಗುವ ಆನಂದವು ಹೊಟ್ಟೆತುಂಬ ಉಂಡ ದಿನವೂ ಆಗುತಿದ್ದಿಲ್ಲ.

ಪಳ್ಪಟನಿಗೂ ಚಿಕ್ಕದೊಂದು ಸಂಸಾರವಿತ್ತು. ಆತನ ಹೆಂಡತಿ, ಮೂರು ಮಕ್ಕಳು, ಇಷ್ಟೆ! ಎಲ್ಲರಂತೆ ಆತನಿಗೂ

[* ನಿಷ್ಪ್ರಯೋಜಕವಾದುದಕ್ಕೆ ತುಳುಭಾಷೆಯಲ್ಲಿ 'ಪಳ್ಪಟ್' ಎಂದೆನ್ನುವರು.]

ಸಂಸಾರದಲ್ಲಿ ಸಂಕಷ್ಟಗಳು ಒದಗಿದ್ದುವು. ಮುದ್ದು ಮುದ್ದಾಗಿದ್ದ ಎರಡು ಮಕ್ಕಳು ತೀರಿ ಹೋಗಿದ್ದುವು. ಹಟ್ಟಿಯಲ್ಲಿ ಆಗಾಗ ದನವೋ ಕರುವೋ ಸಾಯುತಿತ್ತು. ಆದರೆ ಅವಕ್ಕಾಗಿ ಆತನು ಅತ್ತು ರಂಬಾಟ ಮಾಡುತಿದ್ದಿಲ್ಲ. **ಅವನೇ** ಕೊಟ್ಟುದು! ಅವನೇ ಕೊಂಡು ಹೋದುದು! ಎಲ್ಲವೂ **ಅವನ** ಇಚ್ಛೆ! ನನ್ನದೇನು ಸಾಗುವುದು? ಎನ್ನುತಿದ್ದನಲ್ಲದೆ ಮರುಗುತಿದ್ದಿಲ್ಲ. ಬಡತನದಿಂದ ನರಳುತ್ತಿರುವವರನ್ನು ಕಂಡರೆ ಮಾತ್ರ ಆತನ ಎದೆಯು ಕರಗಿ ನೀರಾಗುತಿತ್ತು. ಆಗ ಮಾತ್ರ ಅವನು ದೇವರನ್ನುದ್ದೇಶಿಸಿ, "ಅಯ್ಯೋ! ನನ್ನೊಡೆಯಾ! ನನ್ನ ಕೈಯನ್ನೇಕೆ ಗಿಡ್ಡ ಮಾಡಿದೆ" ಎಂದೆನ್ನುತಿದ್ದನು.

ಪಳ್ಪಟನಿಗಿದ್ದುದು ಎರಡೇ ಎರಡು ಆಸೆ. 'ನನ್ನೊಡೆಯಾ! ತಿರುಪತಿ ವೆಂಕಟೇಶಾ! ಬಡವರ ಕಡೆಗೆ ಕೈನೀಡುವಂತೆ ಮಾಡು! ಸಾಯುವ ಮೊದಲೊಮ್ಮೆ ನಿನ್ನ ದರ್ಶನವಾಗುವಂತೆ ದಾರಿತೋರಿಸು!' ಇವೇ ಆತನ ಎರಡು ಬಯಕೆಯ ಪ್ರಾರ್ಥನೆಗಳು. ಶ್ರಾವಣ ಮಾಸದ ಶನಿವಾರಗಳಲ್ಲಿ ಬೇಡಿ ಶ್ರೀನಿವಾಸನ ಕಾಣಿಕೆಯ ಮುಡಿಪನ್ನು ಮಾಡಿದ್ದನು. ಪ್ರತಿ ವರ್ಷವೂ ಶ್ರಾವಣ ಮಾಸದ ಕಡೆಯ ಶನಿವಾರ ಮುಡಿಪನ್ನು ಕಟ್ಟುವಾಗ, 'ಸ್ವಾಮಿ! ಬೆಟ್ಟದೊಡೆಯಾ! ಇದನ್ನು ನಾನೇ ನನ್ನ ಕೈಯಿಂದ ನಿನಗರ್ಪಿಸುವಂತಾಗಲಿ'! ಎಂದು ಅದಕ್ಕೆ ಅನನ್ಯ ಭಕ್ತಿಭಾವದಿಂದ ನಮಸ್ಕರಿಸುತಿದ್ದನು. ಕೆಲವು ವರುಷಗಳ ಮೇಲಾದರೂ ಶ್ರೀನಿವಾಸನು ಆತನ ಕಡೆಗೆ ತನ್ನ ಕೃಪಾದೃಷ್ಟಿಯನ್ನು ಬೀರಿದಂತಾಯಿತು. ಉಡುಪಿಯಿಂದ ಅನೇಕರು ತಿರುಪತಿ ಯಾತ್ರೆಗೆ ಹೊರಡುವರೆಂಬ ಸುದ್ದಿಯು ಪಳ್ಪಟನಿಗೆ ಮುಟ್ಟಿತು. ಅವನು ಅವರಲ್ಲಿ ಕೆಲವರ ಬಳಿಗೆ ಹೋಗಿ, 'ಸ್ವಾಮಿ! ತಮ್ಮ ಗಂಟು ಮೂಟೆಗಳನ್ನು ಹೊರುತ್ತೇನೆ. ಬಿದ್ದ ಯಾವ ಕೆಲಸಕ್ಕೂ ಸಿದ್ಧನಿದ್ದೇನೆ. ನನಗೊಮ್ಮೆ ಬೆಟ್ಟದೊಡೆಯನ ದರ್ಶನ ಮಾಡಿಸಿರಿ' ಎಂದು ಅಂಗಲಾಚಿ ಬೇಡಿಕೊಂಡನು. ಆ ಕಾಲದಲ್ಲಿ ಯಾತ್ರಾರ್ಥಿಗಳಿಗೆ ತಮ್ಮೊಡನೆ ಪಳ್ಪಟನಂತಹ ಜನರಿದ್ದರೆ ಬಹಳ ಪ್ರಯೋಜನ. ಎಂದ ಮೇಲೆ ಅವರು ಇವನನ್ನು ಕರೆದುಕೊಂಡು ಹೋಗಲು ಒಪ್ಪಿದರು. ಪಳ್ಪಟನ ಸಂತೋಷಕ್ಕೆ ಮಿತಿಯೇ ಇಲ್ಲದಂತಾಯಿತು.

ವಾಚಕಮಹಾಶಯ! ಪೂರ್ವೋಕ್ತ ಯಾತ್ರಿಕರ ಗುಂಪಿನಲ್ಲಿ ಅತ್ಯುತ್ಸಾಹದಿಂದ 'ಗೋ‌ೀೀವಿಂದ' ಎನ್ನುತ್ತ ದೊಡ್ಡ ಮೂಟೆಯನ್ನು ಹೊತ್ತುಕೊಂಡು ನಡೆಯುತ್ತಿರುವವನ್ಯಾರೆಂದು ತಿಳಿಯಿತೆ? ಅವನೇ ನಮ್ಮ ಬಡ ಪಳ್ಪಟ್ ನಾಯ್ಕ, ಅವನ ಬಗಲಲ್ಲಿ ನೇತಾಡುತ್ತಿರುವ ಪಂಚೆಯ ಗಂಟನೊಳಗಿರುವುದು ಶ್ರೀನಿವಾಸನ ಮುಡಿಪು! ಸುಮಾರು 3 ತಿಂಗಳ ಪಯಣದ ಮೇಲೆ ಯಾತ್ರಿಕರು ತಿರುಪತಿಯನ್ನು ಮುಟ್ಟಿದರು. ಅವರೊಡನೆ ಪಳ್ಪಟನಿಗೂ ಬೆಟ್ಟದೊಡೆಯನ ದರ್ಶನವಾಯಿತು. ಯಾತ್ರಿಕರಲ್ಲಿ ಒಬ್ಬೊಬ್ಬರು ಒಂದೊಂದು ಬಯಕೆಯನ್ನು ಬೇಡಿ ಹರಕೆಯನ್ನು ಹೊತ್ತರು. ಕೆಲವರು ಸಂತಾನ ಕೇಳಿದರು, ಕೆಲವರು ಐಶ್ವರ್ಯ ಕೊಡೆಂದರು, ಕೆಲವರು ತಮ್ಮ ವೈರಿ ನಾಶವಾಗಲೆಂದರು, ಮತ್ತೆ ಕೆಲವರು ತಮ್ಮ ರೋಗ ನಿವಾರಿಸೆಂದರು, ನಮ್ಮ ಪಳ್ಪಟನು ತನ್ನ ಕೈಯಿಂದಲೇ ಮುಡಿಪನ್ನು ಸಮರ್ಪಿಸಿ, 'ನನ್ನೊಡೆಯಾ! ಇಂದಿಗೆ ನನ್ನೊಂದಾಶೆಯನ್ನು ತೀರಿಸಿದೆ! ನಿನ್ನ ಇಚ್ಛೆಯಿದ್ದರೆ ನನ್ನ ಮತ್ತೊಂದು ಬಯಕೆಯನ್ನು ಸಲ್ಲಿಸಲಾಪೆ!' ಎಂದು ಹೇಳಿ ಕಣ್ಣು ತುಂಬ ಶ್ರೀನಿವಾಸ ಮೂರ್ತಿಯನ್ನು ನೋಡಿ ಹೊರಗೆ ಬಂದು ಒಂದು ಮರದ ಕೆಳಗೆ ಕುಳಿತುಕೊಂಡನು.

ಪಳ್ಪಟನು ಅಲ್ಲಿ ಕೂತು ಯೋಚಿಸತೊಡಗಿದನು. 'ಶ್ರೀನಿವಾಸನ ದರ್ಶನದಿಂದ ನನ್ನ ಸರ್ವಪಾಪವು ದೂರವಾಯಿತು. ಇನ್ನು ಊರಿಗೆ ಹೋದೆನೆಂದರೆ ತಿಳಿದೋ ತಿಳಿಯದೆಯೋ ಪಾಪ ಸಂಘಟನೆಯಾಗಿಯೇ ಆಗುವುದು. ಇದಲ್ಲದೆ ಇನ್ನು ಜೀವಿಸಿಯಾದರೂ ಮಾಡತಕ್ಕದ್ದೇನಿದೆ? ಸಂಸಾರ! **ಅವನೇ** ಕೊಟ್ಟುದು! **ಅವನೇ** ನೋಡಿಕೊಳ್ಳುವನು! ಅದೆಲ್ಲಾ ಗೊಂದಲ ಹಚ್ಚಿಕೊಳ್ಳಲು ನಾನ್ಯಾರು? ನಾನೆಷ್ಟರವನು? ಎಷ್ಟರತನಕ ಬಂದೇನು? ಬಡವರ ಸಂಕಷ್ಟ ನಿವಾರಣೆ ಮಾಡುವ ಶಕ್ತಿಯು ನನ್ನಲ್ಲಿದ್ದರೆ ನಾನಿನ್ನು ಬದುಕಿಯಾದರೂ ಮಾಡುವ ಮಹತ್ಕಾರ್ಯವಿದೆಯೆಂದು ಹೇಳಬಹುದಿತ್ತು; ಆದರೆ ನನ್ನ ಕೈಗಿಡ್ಡಾಗಿರುವುದು! ಎಂದ ಮೇಲೆ ನನಗೆ ಈ ಪುಣ್ಯಕ್ಷೇತ್ರದಲ್ಲಿ ಮರಣ ಉಂಟಾದರೆ ನಾನೆಂತಹ ಧನ್ಯನು!' ಎಂದು ಮುಂತಾದ ಯೋಚನೆಯಲ್ಲಿ ಪಳ್ಪಟನು ಮಗ್ನನಾಗಿರಲು, ಮೇಲಿಂದ ಆತನ ಮೈಮೇಲೆ ಗೋಲಿಯ ಗಾತ್ರದ ಕಲ್ಲೊಂದು ಬಿತ್ತು! ಮೇಲೆ ನೋಡಲು ಮರದ ರೆಂಬೆಯ ಮೇಲೆ ತಿಮ್ಮಣ್ಣನೊಬ್ಬನು ಕುಳಿತು ಆತನನ್ನೇ ನೋಡುತಿದ್ದನು. ಆಗ ಪಳ್ಪಟನು ಆ ಮಂಗನಿಗೆ ಹೊಡೆಯದೆ ನಗುತ್ತ, 'ತಿಮ್ಮಣ್ಣಾ, ಬಡವನೆಂದರೆ ನಿನಗೂ ಕುಚೋದ್ಯಮಾಡಬೇಕೆಂದು ಕಾಣುವುದಲ್ಲವೆ? ನಿನಗೂ ಅಷ್ಟೊಂದು ತಾತ್ಸಾರವೆ?' ಎಂದು ಹೇಳುತ್ತ ಆ ಕಲ್ಲನ್ನು ತೆಗೆದು ಅಲ್ಲೇ ಆಚೆಗೆ ಒಗೆದು ಪುನಃ ಆಲೋಚನಾಪರನಾದನು. ತಿಮ್ಮನು ಮೆಲ್ಲಗೆ ಮರದಿಂದಿಳಿದು ಆ ಕಲ್ಲನ್ನು ಹೆಕ್ಕಿ ಪುನಃ ಪಳ್ಪಟನ ಮೇಲೆ ಬಿಸಾಡಿದನು. ಪಳ್ಪಟನು ಇದನ್ನು ಕಂಡು ನಗುತ್ತ 'ಏನೋ! ತಿಮ್ಮಣ್ಣಾ! ನನ್ನೊಡನೆ ಆಟವಾಡುವೆಯಾ? ಆಗಲಿ! ನಿನ್ನಿಷ್ಟ! ಹತ್ತಿರದಲ್ಲೇ ಬಿಸಾಟರೆ ಹೆಕ್ಕಿ ತಂದು ನನಗೆ ಎಸೆಯುವೆಯಲ್ಲವೆ? ಈಗ ನೋಡೋಣ, ನಿನ್ನ ಚಮತ್ಕಾರ!' ಎನ್ನುತ್ತ ಪಳ್ಪಟನು ಆ ಕಲ್ಲನ್ನು ತೆಗೆದು ಶಕ್ತಿಯನ್ನೆಲ್ಲಾ ಉಪಯೋಗಿಸಿ ಬಹು ದೂರ ಎಸೆದನು. ಅನಂತರ ತನ್ನ ಚೀಲದಿಂದ ವೀಳೆಯವನ್ನು ತೆಗೆದು ಜಗಿಯುತ್ತ ಕೂತನು. ಒಂದು ಚೂರು ಅಡಿಕೆ ಬೇಕೆಂದು ತೋರಿತು.

ಒಂದಡಿಕೆಯನ್ನು ತೆಗೆದು ಅದನ್ನು ಚೂರಿಯಿಂದ ತುಂಡು ಮಾಡುತ್ತಿರುವಷ್ಟರಲ್ಲಿ ಆ ಚೂರಿಯ ಮೇಲೆ 'ಕಟ್' ಎಂದು ಅದೇ ಕಲ್ಲು ಮೇಲಿಂದ ಪುನಃ ಬಿತ್ತು. ಮೇಲೆ ನೋಡಲು ಅದೇ ತಿಮ್ಮನು ರೆಂಬೆಯ ಮೇಲೆ ಕುಳಿತು ಪಳ್ಳಟನನ್ನೇ ನೋಡುತಿದ್ದನು. ಆಗ ಆ ತಿಮ್ಮನ ಮುಖದಲ್ಲಿ ಪಳ್ಳಟನಿಗೇನು ಕಾಂತಿ ತೋರಿತೋ ಅವನಿಗೇ ಗೊತ್ತು. ಚೂರಿಯು ಕೈಯಲ್ಲಿದ್ದಂತೆ ಕೈಮುಗಿಯಲು ಕೈಗಳನ್ನು ಮೇಲಕ್ಕೆತ್ತಿದನು. ಆಗ ನೋಡುವುದೇನು! ಆ ಕಬ್ಬಿಣದ ಚೂರಿಯು ಬಂಗಾರದ ಚೂರಿಯಾಗಿತ್ತು! 'ದೇವಾ! ಬೆಟ್ಟದೊಡೆಯಾ! ಪಳ್ಳಟನ ಜನ್ಮ ಇಂದಿಗೆ ಸಾರ್ಥಕಗೈದೆ' ಎನ್ನುತ್ತ ಅನನ್ಯ ಭಕ್ತಿಯಿಂದ ಮೇಲಕ್ಕೆ ನೋಡಿದನು. ಆದರೆ ರೆಂಬೆಯ ಮೇಲಿದ್ದ ಆ ತಿಮ್ಮನೆಲ್ಲಿ! ಅದೃಶ್ಯ! ಪಳ್ಳಟನಿಗೆಲ್ಲವೂ ಗೊತ್ತಾಯಿತು. ಆತನು 'ಶ್ರೀಮದ್ರಮಾರಮಣ ಗೋವಿಂದಾ! ಗೋೞೞವಿಂದ' ಎನ್ನುತ್ತ ಆ ಕಲ್ಲನ್ನು ತೆಗೆದು ತಾನು ಮುಡಿಪು ತಂದಿದ್ದ ಬುಟ್ಟಿಯಲ್ಲಿಟ್ಟು ತನ್ನ ಬಗಲಗಂಟಿನಲ್ಲಿ ಕಟ್ಟಿಕೊಂಡನು.

ಯಾತ್ರಿಕರು ತಿರುಪತಿಯಿಂದ ಹೊರಟರು. ಪಳ್ಳಟನೂ ಅವರೊಡನಿದ್ದನು. ಅವರಲ್ಲಿ ಶ್ರೀಮದ್ಗಾಂಭೀರ್ಯದ ಹೆಮ್ಮೆಯುಳ್ಳ ಕೆಲವರು ಪಳ್ಳಟನನ್ನು ಕುರಿತು, 'ಏನೋ, ಪಳ್ಳಟ! ನಿನಗೆ ಶ್ರೀನಿವಾಸನ ದರ್ಶನ ಮಾಡಿಸಿದೆವಲ್ಲವೆ?' ಎಂದರು. ಪಳ್ಳಟನು 'ಹೌದೊಡೆಯಾ! ತಮ್ಮಿಂದಾಯಿತು. ಬೆಟ್ಟದೊಡೆಯನು ನನಗೊಲಿದನು?' ಎಂದನು. ಅದಕ್ಕವರು ನಗುತ್ತ, 'ಏನೋ, ನೂರಾರು ರೂಪಾಯಿಗಳನ್ನು ಕೊಟ್ಟು ಶ್ರೀನಿವಾಸನಿಗೆ ತರತರದ ಸೇವೆ ಮಾಡಿಸಿದ ನಮಗಾತನು ಒಲಿದುದೋ ದೇವರ ಮುಂದೆ ಬರಿಗೈ ಬೀಸಿ ಬಂದ ನಿನಗೋ? ಬಲು ಸೊಗಸಾದ ಮಾತು!' ಎಂದು ಪರಿಹಾಸ್ಯ ಮಾಡಿದರು. ಪಳ್ಳಟನು, 'ಒಡೆಯರೇ, ತಮ್ಮಂತಹರಿಗೆ ದೇವರೊಲಿಯದೆ ಇದ್ದಾನೆಯೆ! ಆದರೆ ಬೆಟ್ಟದೊಡೆಯನಿಗೆ ಬಡ ಪಳ್ಳಟನ ಮೇಲೂ ಕೃಪೆಯಿದೆ' ಎಂದನು. ಹಾದಿಯಲ್ಲೆಲ್ಲ ಆ ಯಾತ್ರಿಕರು, 'ಪಳ್ಳಟನಿಗೆ ದೇವರೊಲಿದಿರುವರು! ಇನ್ನು ಪಳ್ಳಟನು ಶ್ರೀಮಂತನಾಗುವನು! ದೊಡ್ಡ ಮನೆ ಕಟ್ಟುವನು! ಏನೋ, ಪಳ್ಳಟ! ಮನೆ ಮೂರು ಅಂತಸ್ಥಿನದೋ ನಾಲ್ಕರದೋ?' ಎಂದು ಗೇಲಿಮಾಡುತ್ತ ಬಂದರು. ಪಳ್ಳಟನು ಶಾಂತಚಿತ್ತದಿಂದ ನಗುತ್ತ, 'ನನ್ನೊಡೆಯಾ! ಬೆಟ್ಟದೊಡೆಯನ ಕೃಪೆಯಿಂದ ಒಂದು ದೊಡ್ಡ ಮನೆ ಕಟ್ಟಲಿಕ್ಕಿರುವೆನು. ಆದರೆ ಅದು ಈ ಲೋಕದಲ್ಲೋ ಮತ್ತೆಲ್ಲೋ ನೋಡಬೇಕು' ಎನ್ನುತಿದ್ದನು. ಎಲ್ಲರೂ ಗೊಳ್ಳೆಂದು ನಗುತಿದ್ದರು. ಪಳ್ಳಟನು ತನ್ನಲ್ಲಿದ್ದ ಕಲ್ಲಿನ ವಿಷಯ ಮಾತ್ರ ಯಾರಿಗೂ ಏನೂ ಹೇಳಲಿಲ್ಲ. ಹಾಗೂ ಹೀಗೂ ಯಾತ್ರಿಕರೆಲ್ಲ ಉಡುಪಿಗೆ ಬಂದು ಸೇರಿದರು.

ಕೆಲವು ದಿವಸಗಳನಂತರ ಪಳ್ಳಟನು ತಿರುಪತಿ ಸಮಾರಾಧನೆ ಮಾಡಿಸಿದನು. ಬಡಬಗ್ಗರಿಗದೊಂದು ಹಬ್ಬ! ಊಟದ ಹಬ್ಬ! ವಸ್ತ್ರದ ಹಬ್ಬ! ರೊಕ್ಕದ ಹಬ್ಬ! ಅಂದಿನಿಂದ ಪಳ್ಳಟನ ದಾನಧರ್ಮಗಳು ಹೆಚ್ಚುತ್ತಾ ಹೋದವು. ಅವನ ಮನೆಯು ಬಡಜನರ ಆಶ್ರಯಸ್ಥಾನವಾಗಹತ್ತಿತು. ಅದಕ್ಕಾಗಿ ಅದನ್ನು ಸ್ವಲ್ಪ ದೊಡ್ಡದು ಮಾಡಿ ಕಟ್ಟಿದನು. ಒಳಗೊಂದು ದೇವರ ಕಂಡಿಯನ್ನು ಮಾಡಿ ಅದರಲ್ಲಿ ಶ್ರೀನಿವಾಸನ ಚಿತ್ರವನ್ನೂ ಅದರ ಹಿಂದೆ ಒಂದು ಬುಟ್ಟಿಯನ್ನೂ ಇಟ್ಟು ಸದಾ ಪೂಜಿಸುತಿದ್ದನು. 'ಆ ಬುಟ್ಟಿಯೊಳಗ ಬೆಟ್ಟದೊಡೆಯನ ಪ್ರಸಾದವಿದೆ' ಎಂದನ್ನುವ ಅವನ ಮಾತಿಗೆ ಯಾರೂ ವಿಶೇಷ ಅರ್ಥ ಕಲ್ಪಿಸಲಿಲ್ಲ. ಪಳ್ಳಟನು ತನ್ನ ಮನೆಯೆದುರಿದ್ದ ಭೂಮಿಯನ್ನೆಲ್ಲ ಕ್ರಯಕ್ಕೆ ಕೊಂಡುಕೊಂಡು ಬಡವರಿಗೆ ಹಂಚಿಕೊಟ್ಟನು. ತನಗೆ ಬೆಟ್ಟದೊಡೆಯನು ತಿಮ್ಮನ ರೂಪದಿಂದ ಮೈದೋರಿ ಅನುಗ್ರಹಿಸಿದನೆಂಬುದರ ಸ್ಮಾರಕವಾಗಿ ಶಿಲೆಯಲ್ಲಿ ತಿಮ್ಮನ ರೂಪವನ್ನು ಕೆತ್ತಿಸಿ ತಾನು ಧರ್ಮಮಾಡಿದ ಭೂಮಿಯ ತುದಿಯಲ್ಲಿ ನೆಡಿಸಿದನು. ಅದನ್ನು ಈಗಲೂ ಬನ್ನಿಂಜೆಯಲ್ಲಿ ನೋಡಬಹುದು.

ಪಳ್ಳಟನ ದಾನಧರ್ಮವನ್ನು ನೋಡಿ ಉಡುಪಿಯ ಕೆಲವು ಪುಂಡುಗಾರರು ಅವನಿಗೆಲ್ಲೋ ಬರಮುಗುಡ್ಡೆಯ ಬಳಿ ಕೊಪ್ಪರಿಗೆ ಸಿಕ್ಕಿರಬೇಕೆಂದು ಊಹಿಸಿ ಒಂದು ದಿನ ರಾತ್ರೆ ಅವನ ಮನೆಯನ್ನು ನುಗ್ಗಿ ಹುಡುಕಿ ನೋಡಿದರು. ಆತನ ಮುರುಕು ಪೆಟ್ಟಿಗೆಯೊಳಗೆ ಒಂದೆರಡು ಕಬ್ಬಿಣದ ತುಂಡುಗಳೂ ಒಂದಿಷ್ಟು ರೊಕ್ಕವೂ ಅಲ್ಲದೆ ಮತ್ತೇನೂ ಇದ್ದಿಲ್ಲ. ಬೆಟ್ಟದೊಡೆಯನ ಪ್ರಸಾದದ ಬುಟ್ಟಿಗೆ ಕೈಹಾಕಲಿಕ್ಕೆ ಆ ಪುಂಡರಿಗೂ ಎದೆಗಟ್ಟಿಯಿರಲಿಲ್ಲ. ಕೈಹಾಕಿದ್ದರೂ ಅದರಲ್ಲಿ ದುಡ್ಡು ಕಾಸೇನೂ ಇದ್ದಿಲ್ಲ.

ಪಳ್ಳಟನಿಗೆ ಪುನಃ ಬೆಟ್ಟದೊಡೆಯನ ದರ್ಶನ ಮಾಡಬೇಕೆಂದು ತೋರಿತು. ಅಲ್ಲಿಗೆ ಹೋಗಿ ಅಲ್ಲಿಯೂ ಹೊಲಗದ್ದೆಗಳನ್ನು ತಕ್ಕೊಂಡು ಬಡವರಿಗೆ ಹಂಚಿಕೊಟ್ಟನು. ಅಲ್ಲಿಂದ ಒಂದೊಂದಾಗಿ ಎಲ್ಲಾ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತ ಹೋದನು. ಹೋದ ಪುಣ್ಯಕ್ಷೇತ್ರಗಳ ಬಳಿಯ ಗ್ರಾಮಗಳಲ್ಲಿ ಗದ್ದೆ ತೋಟಗಳನ್ನು ತಕ್ಕೊಂಡು ಬಡಬಗ್ಗರಿಗೆ ದಾನ ಮಾಡುವುದೂ ಆ ಗದ್ದೆಗಳ ತುದಿಯಲ್ಲಿ ಹನುಮಂತನ ಮೂರ್ತಿಯನ್ನು ಕೆತ್ತಿದ ಕಲ್ಲುಗಳನ್ನು ನೆಡುವುದೂ ಅವನ ಕಟ್ಟಳೆ. ಪಳ್ಳಟನಾಯಕನ ಕಾಲವು ಮುಗಿದು ಸುಮಾರು ಒಂದು ಸಾವಿರ ವರುಷಗಳಾಗಿರಬಹುದು. ಆದರೂ ಅವನು ನೆಡಿಸಿದ ಕಲ್ಲುಗಳಲ್ಲಿ ಕೆಲವು ಇನ್ನೂ ಗದ್ದೆಗಳ ಬಳಿಯಲ್ಲಿ ನಿಂತಿವೆ! ಅಲ್ಲಿಯ ಮುದಿ ಅಜ್ಜಂದಿರನ್ನು ಕುರಿತು, 'ಇದೇನು ಕಲ್ಲು?' ಎಂದು ಕೇಳಿದರೆ. 'ಅದು ಪಳ್ಳಟ್‌ನಾಯ್ಕನ ಧರ್ಮ' ಅನ್ನುವರು.



## ಸರಸತಿಗೆ!

(ಮಿತ್ರಮಂಡಳಿಯಿಂದ)

(ಲೇಖಕ:- ರಾಘವೇಂದ್ರರಾವ್, ಬಾಳ, ಮಂಗಳೂರು.)

ಲಲಿತಸುನೇತ್ರ ದ್ವಯದಿಂ ।<br>
ವಿಲಸಿತ ಜ್ಯೋತ್ಸ್ನಾಸಮಾನ ರುಚಿರನಿಭಾಂಗೇ! ॥<br>
ಸುಲಲಿತ ವದನೇ ಕ್ಷಣೆಯಾ ।<br>
ವಿಲಸತ್ಫಲನಳಿನ ನಾಳಿಭಾಷಿತ ತನುವುಂ ॥ ೧ ॥<br>
ಕಮನೀಯ ಗಾತ್ರೆ ಕೋಮಲ ।<br>
ಸುಮಸೌರಭ ಸಾರಸಾಲ ಮಂಜುಲವೀಣಾ ॥<br>
ಸುಮನೋಹರ ಗಾನಕಲಾ- ।<br>
ವಿಮಲವಿಸು ಸ್ಫಾರಿತಕರ ಸಾರಸನೇತ್ರೇ ॥ ೨ ॥

॥ ಮತ್ತೇಭವಿಕ್ರೀಡಿತ ವೃತ್ತಂ ॥

ಕಲೆಯೊಳ್ ಭಾರತಿ ವಾಣಿವೇಣಿ ಫಣೆಯೊಳ್<br>
ಲಾಲಿತ್ಯ ಪೆರ್ಚುತ್ತಿರಲ್ ।<br>
ಸಲೆ ವಿಶ್ವಂಭರೆ ರಾಗರತ್ನಧವಳೇ! ಫಾಲಾ<br>
ವಿಲೋಲೇ ಕಲಾ ॥<br>
ವಿಲಸತ್ಪಲ್ಲವಕಾರೆ! ಶೂರೆ! ವಿಮಲೇ!<br>
ನೀಲಾಳಕೀ ಶಾರದೇ! ।<br>
ಲಲಿತ ಸ್ವಾಂತೆ ನಿತಾಂತ ತತ್ವೆ ವಿನುತೇ<br>
ವಿದ್ಯಾವಿನೋದೀ ನಮೋ ॥ ೧ ॥



## ವಿದ್ಯಾರ್ಥಿಗಳೂ—ಸಾಹಿತ್ಯವೂ.

(ಮಿತ್ರಮಂಡಲಿಯಿಂದ)

(ಲೇಖಕ:- ರಾಘವೇಂದ್ರರಾವ್, ಬಾಳ, ಮಂಗಳೂರು.)

ಇಂದಿನ ಯುವಕರೇ ಮುಂದಿನ ಸಮಾಜಿಕರೆಂಬುದು ನಿರ್ವಿವಾದದ ವಚನವಾಗಿರುವುದು. ಕಾರಣ ಜನಾಂಗ ಇಮಾರತದ ರಕ್ಷಣವು ಆಧುನಿಕ ಬಾಲಕರಿಂದ ಅರ್ಥಾತ್ ಭಾವೀ ಪುರುಷರ ಬೆಂಬಲದಿಂದ ಹೊಂದಿಕೊಂಡಿರುವುದು. ಆದುದರಿಂದ ಆವುದಾದರೊಂದು ಜನಾಂಗವು ಸುಧಾರಿಸಬೇಕೆಂದಿದ್ದರೆ ಅದರ ಭವಿಷ್ಯ ಜನಾಂಗವು ಸರ್ವ ವಿಷಯಗಳಲ್ಲಿ ಬಲಿಷ್ಠವಾಗಿರಲಿಕ್ಕೇ ಬೇಕು. ಆಂದ ಮೇಲೆ ಜನಾಂಗ ಸುಧಾರಣೆಯು ತೀವ್ರವಾಗಿ ಹಾಗು ನಿರಾಯಾಸವಾಗಿ ಆಗುವುದು. ಪಾಶ್ಚಿಮಾತ್ಯರು ಅದರ ಮರ್ಮವನ್ನು ಅರಿತಿರುವರು. ಅದು ಕಾರಣ ಅವರ ಸುಧಾರಣೆಯ ನಿಶಾನಿಯು ಇಂದು ಅಂಬರಪಟದಲ್ಲಿ ಫಡಫಡಿಸುತಲಿರುವುದು.

ವಾಚಕ ಮಹಾಶಯ! ಪಾಶ್ಚಿಮಾತ್ಯರ ಅನೇಕ ವಿಷಯಗಳು ಸರ್ವರಿಗೂ ಅನುಕರಣೀಯವಾಗಿರುವುದು. ಅವರ ಅಮಿತದೇಶಾನುರಾಗವು ಅವರ್ಣನೀಯವಿರುವುದು. ಅವರು ಮಾತೃಭೂಮಿಯ ಸಲುವಾಗಿ ಆವ ಕಾರ್ಯವನ್ನಾದರೂ ಮಾಡಲು ಟೊಂಕಕಟ್ಟಿ ಸಿದ್ಧರಿರುವರು. 'Home– home sweet home– ther's no place like Home.' ಎಂಬ ಕವಿವಚನದ ಚಿತ್ರವು ಪಾಶ್ಚಿಮಾತ್ಯರ ಹೃದಯ ಮಂದಿರದಲ್ಲಿ ಅಜರಾಮರವಾಗಿರುವುದು. ಅವರ ರುಧಿರದ ಪ್ರತಿ ಬಿಂದುವಿನಲ್ಲಿ ದೇಶಾನುರಾಗವು ಮಿಲನವಾಗಿರುವುದು. ಕವಿ ಸ್ಕೊಟನು ಅವರ ದೇಶವಾತ್ಸಲ್ಯದ ಕುರಿತು—

> 'Breathes there the man with soul so dead,<br>
> Who never to himself hath said;<br>
> This is my own, my native land.'

ಎಂದು ಸುರಸವಾಗಿ ಹಾಗೂ ಸ್ಫೂರ್ತಿದಾಯಕವಾಗಿ ವರ್ಣಿಸಿರುವನು.

ಪಾಶ್ಚಿಮಾತ್ಯರು ಕೊಡುವ ಶಿಕ್ಷಣವು ರಾಷ್ಟ್ರೀಯ ಧ್ಯೇಯವನ್ನು ಅವಲಂಬಿಸಿರುವುದು. ಅದು ಕಾರಣ ಅವರಿಗೆ ದೇಶ ಸೇವಾಕಾರ್ಯವು ಒಂದು ತೆರನ ಜನ್ಮಸಿದ್ಧ ಹಕ್ಕಾಗಿರುವದು. ಅವರು ಅನೇಕ ವಿಷಯಗಳಲ್ಲಿ ಬಹಳ ಸುಧಾರಿಸಿರುವರು. ಪರಂತು ಅವರು ಮಾತೃ ಭಾಷೆಯನ್ನು ತೊರೆದು ಪರಭಾಷೆಯನ್ನು ಕಲಿಯಲು ಬಯಸುವುದಿಲ್ಲವು. ಅವರಿಗೆ ಮಾತೃ ಭಾಷೆಯಲ್ಲಿ ಬಹಳ ಮಮತೆ. ಅವರು ಸ್ವಭಾಷೆಯ ಏಳಿಗೆಯ ಕುರಿತು ಯಾವ ಕಾರ್ಯವನ್ನಾದರೂ ಮಾಡಲು ಸಿದ್ಧರಿರುವರು. **'ಭರತ ವರ್ಷವು ಬೇಕೋ- ಶೇಕ್ಸಪಿಯರನ ಕೃತಿಗಳು ಬೇಕೋ!'** ಎಂಬ ವಚನಕ್ಕೆ **'ಭರತ ವರ್ಷವು ಇದ್ದರೇನು ಇಲ್ಲದಿದ್ದರೇನು! ಪರಂತು ಶೇಕ್ಸಪಿಯರನ ಕೃತಿಗಳನ್ನು ನಾವು ಸುತರಾಂ ಬಿಡಲಾರೆವು.'** ಎಂದು ಕವಿ ಕಾರ್ಲಾಯಿಲನು

ಮಾತೃಭಾಷೆಗೆ ಅಪ್ರತಿಮ ಸ್ಥಾನವನ್ನು ಕಲ್ಪಿಸಿರುವನು. ಅದೀಗ! ಮಾತೃ ಭಾಷಾ ಪ್ರೇಮದ ನಿರರ್ಗಳವಾದ ನಿರ್ಮಲ ಝರಿಯು!!

ವಾಚಕ ಮಹಾಶಯ! ನಾವು ಕರ್ಣಾಟಕ ದೇಶದವರು. ಕರ್ಣಾಟಕ ದೇಶದ ಮಹಿಮೆಯು ಅಗಾಧವಾಗಿರುವುದು.

**'ಗಾಡಿಯ ಸೀಮೆ ಚೆಲ್ವೊಗೆವ ತಾಣಮುಲಂಪಿನ ಸಂತೆ ಪೆಂಪು ಸಾ| ರ್ದಾಡುವ ಭೂಮಿ ಸೌಖ್ಯದೆಡೆ ಪುಣ್ಯದ ಗೊತ್ತು ವಿನೋದದಾಗರಂ || ಮೋಡಿಯ ಮಂಟಪಂ ಸಿರಿಯ ಪೆರ್ಚುಗೆ ಗೊಳ್ಮನೆ ಮುಕ್ತಿ ಕಾಂತೆ ಕೈ | ಗೂಡುವ ಬೀಡು ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪೆಂ ||'**

ಎಂದು ಮನೋಹರವಾಗಿ ನಮ್ಮ ಕರ್ಣಾಟಕ ದೇಶವನ್ನು ಕವಿಯು ವರ್ಣಿಸಿರುವನು. ಇದೇ ಕರ್ಣಾಟಕ ದೇಶದಲ್ಲಿ ಮಹಾ ಕವಿಗಳು ಅನಿರ್ವಚನೀಯವಾದ ಹಾಗು ಮನಮೋಹಕವಾದ ಕವನಹಾರಗಳನ್ನು ನಿರ್ಮಿಸಿ ಕರ್ಣಾಟಕ ವಾಗ್ದೇವಿಯ ಚರಣ ಸರೋಜ ತಲದಲ್ಲಿ ನಿವೇದಿಸಿ ಅಪೂರ್ವ ಶೋಭೆಯನ್ನು ಸೃಷ್ಟಿಸಿದರು. ಇದೇ ಕರ್ಣಾಟಕ ದೇಶದಲ್ಲಿ ಮಹಾಮಹಿಮರು ನೆಲೆಸಿ ಕರ್ಣಾಟಕದ ಪ್ರಾಚೀನೇತಿಹಾಸದಲ್ಲಿ ತಮ್ಮ ನಾಮಾಂಕಿತವನ್ನು ಸುವರ್ಣಾಕ್ಷರಗಳಿಂದ ಚಿರಸ್ಥಾಯಿಯಾಗಿ ಮಿರುಗುವಂತೆ ಮಾಡಿದರು.

ಅದೊಂದು ಕಾಲದಲ್ಲಿ ಕರ್ಣಾಟಕ ದೇಶವು ಸರ್ವ ವಿಷಯದಲ್ಲಿ ಸುಧಾರಿಸಿದ್ದಿತು. ಆಗ ನಮ್ಮ ಮಾತೃ ಭಾಷೆಯು ಉತ್ತಮ ಪ್ರಗತಿಯಲ್ಲಿದ್ದಿತು. ಕಾರಣ ಪ್ರಾಚೀನ ಕನ್ನಡಿಗರಿಗೆ ತಾಯಿ ನುಡಿಯಲ್ಲಿ ವಿಶೇಷ ಅಭಿಮಾನವಿದ್ದಿತು. ಮೇಲಾಗಿ ಪ್ರಾಚೀನ ಕಾಲದಲ್ಲಿನ ಗಂಗರು, ರಾಷ್ಟ್ರಕೂಟರು, ಮೈಸೂರರಸರು, ವಿಜಯ ನಗರದ ದೊರೆಗಳು, ಕೊಡಗುರಾಜರು, ತುಳುದೇಶದ ಸಾಮ್ರಾಜರು, ಕರಹಾಟದ ಶಿಲಾಹಾರರು, ಮುದಿಗೆರೆ, ಕಳಲೆ, ಬೇಲೂರು, ಇಕ್ಕೇರಿ, ಸುಗಟೂರ ಚಿತ್ರದುರ್ಗ, ಹದಿನಾಡು ಮೊದಲಾದ ಊರುಗಳ ತುಂಡರಸರು (ಪಾಳೆಯಗಾರರು) ಸ್ವಯಂ ಕವಿಗಳಾಗಿದ್ದರು. ಹಾಗು ಕವಿಕುಲಕ್ಕೆ ಆಶ್ರಯದಾತರಾಗಿದ್ದರು. ತತ್ರಾಪಿ ಕರ್ಣಾಟಕ ವಾಙ್ಮಯಕ್ಕೆ ನವ ಜೀವನವು ಉಂಟಾಯಿತು. ಉದ್ದಾಮ ಕವಿಗಳು ಹಾಗು ಲೇಖಕರು ಮಾತೃ ಭಾಷಾ ಸೇವೆಯನ್ನು ಪವಿತ್ರ ಪ್ರೇಮದಿಂದ ಮಾಡಿದರು. ಪರಂತು ಅಂತಹ ಸನಾತನವಾದ ಹಾಗು ಅಪ್ರತಿಮವಾದ ಕರ್ಣಾಟಕ ವಾಙ್ಮಯ ವು ಕ್ರಮಶಃ ಅಧೋಗತಿಗೆ ಇಳಿಯಲುಪಕ್ರಮಿಸಿರುವುದು.

ಆಧುನಿಕ ಕನ್ನಡಿಗರಿಗೆ ಭಾಷಾಭಿಮಾನವಿಲ್ಲ. ಸುಶಿಕ್ಷಿತ ಜನತೆಗೆ ಈಗಾಗಲೇ ಪರಭಾಷೆಯು ದೇವಭಾಷೆಯಾಗಿ ಪರಿಣಮಿಸಿರುವುದು. ಅದೀಗ ಆಧುನಿಕ ಶಿಕ್ಷಣದ ಫಲ! ಅಂತು ನೀವೇ ಯೋಚಿಸಿರಿ.— "ಅದೇನು ರಸಿಕರ ತಿರಸ್ಕಾರವೋ- ಪುರಸ್ಕಾರವೋ" ಎಂದು ಸ್ವಭಾಷೆಗೆ ತಿಲಾಂಜಲಿಯನ್ನು ಎಸೆದು ಪರಭಾಷಾ ದೀಕ್ಷೆಯನ್ನು ಶಿರಸಾವಹಿಸುವ ಮಾನವನು ಎಂತಹವನು!

ವಾಚಕ ಮಹಾಶಯ!

'We think our fathers fools, so wise we grow
And wiser sons will surely think us so'.

ಎಂಬ ಓರ್ವ ಮಹಾಕವಿಯ ಪಿಯೂಷ ವಚನವು ಅಕ್ಷರಶಃ ನಿಜವಿರುವುದೆಂದು ನಿರ್ವಿವಾದವಾಗಿ ಈ ಪ್ರಸಂಗದಲ್ಲಿ ಹೇಳಬಹುದು. ಅದಂತಿರಲಿ. ಅಖಿಲ ಕರ್ಣಾಟಕದಲ್ಲಿ ಕರ್ಣಾಟಕ ಭಾಷೆ ಮಾತನಾಡುವವರು ಅನೇಕರಿರುವರು. ಅವರ ಸಂಖ್ಯೆಯನ್ನು ನಾವು ವಾಚಕರ ಸಲಹೆಗಾಗಿ ಕೆಳಗಡೆ ತೋರಿಸುವೆವು—

| | ವರ್ಷ. | ೧೯೦೧ | ೧೯೧೧ | ೧೯೨೧ |
|---|---|---|---|---|
| ೧ | ಮುಂಬೈ ಆಧಿಪತ್ಯದಲ್ಲಿ | ೨೫೦೭೮೮೯ | ೨೪೬೨೧೯೫ | ೨೪೦೩೪೪೮ |
| ೨ | ಮುಂಬಾಯಿಯಲ್ಲಿ | ೫೮೯೪೩೬ | ೫೪೯೬೪೧ | ೫೩೯೧೧೧ |
| ೩ | ಮದ್ರಾಸು ಆಧಿಪತ್ಯದಲ್ಲಿ | ೧೫೫೭೬೪೪ | ೧೫೮೯೪೮೭ | ೧೫೩೩೮೪೪ |
| ೪ | ಮದರಾಸಿನಲ್ಲಿ | ೧೬೯೫೧ | ೧೯೮೪೭ | ೧೮೨೨೮ |
| ೫ | ಹೈದರಾಬಾದಿನಲ್ಲಿ | — | ೧೬೮೦೨೦೫ | ೧೫೩೩೪೪ |

ನಮ್ಮ ನಾಡಿನಲ್ಲಿ ನಾಲ್ಕಾರು ದೈನಿಕ ಪತ್ರಿಕೆಗಳು, ಮೂವತ್ತರವರೆಗೆ ವಾರಪತ್ರಿಕೆಗಳು, ನಲ್ವತ್ತರ ವರೆಗೆ ಮಾಸಿಕ ಪಹಿಗಳು, ಎಂಟ್ಹತ್ತು ತ್ರೈಮಾಸಿಕಗಳಿವೆ. ತುಲನಾತ್ಮಕ ದೃಷ್ಟಿಯಿಂದ ಪರಿಶೀಲಿಸಿದರೆ ಕನ್ನಡಿಗರ ಸಂಖ್ಯೆಗೆ ಕನ್ನಡ ಪತ್ರಿಕೆಗಳು ಬಹಳ ಕಡಿಮೆಯೆಂದು ಭಾವಿಸಬೇಕಾಗುವುದು. ಅಂತು ಈಗಿರುವ ಪತ್ರಿಕೆಗಳು ಕೇವಲ ದೀನಪ್ರಗತಿಯಲ್ಲಿ ನರಳಬೇಕಾದ ಪ್ರಸಂಗವು ತಲೆದೋರಿರುವುದು. ಅದಕ್ಕೆ ಕನ್ನಡಿಗರೇ ಹೊಣೆಗಾರರೆಂದು ಹೇಳಿದರೆ ತೀರಿತು.

ಇಂದು ಬಂಗಾಲಿ, ಹಿಂದಿ, ಮರಾಠಿ ಮೊದಲಾದ ಸಾಹಿತ್ಯಗಳು ಕ್ರಮಶಃ ಸುಧಾರಿಸುತಲಿರುವುವು. ಬಂಗಾಲಿಸಾಹಿತ್ಯವು ಸರ್ವತೋಮುಖವಾಗಿ ಉಜ್ಜೀವನವಾಗಿರುವುದು. ಭರತವರ್ಷದಲ್ಲಿ ಪ್ರಥಮತಃ ದೇಶೀಯ ಭಾಷೆಯಲ್ಲಿ ಪ್ರಕಟವಾದ ಮಾಸಿಕವಹಿ ಎಂದರೆ ಬಂಗಾಲಿಯಲ್ಲಿಯೇ. ಕ್ರಿ. ಶ. ೧೮೧೬ರಲ್ಲಿ ಗಂಗಾಧರ ಭಟ್ಟಾಚಾರ್ಯನು ದೇಶೀಯ ಭಾಷೆಯ ಎಂದರೆ ಬಂಗಾಲಿ ಭಾಷೆಯ ಮಾಸಿಕವಹಿಯ ಸಂಪಾದಕೀಯ ಲೇಖನಿಯನ್ನು ಹಿಡಿದನು. ಪರಂತು ಅದು ಕೆಲವು ಕಾಲ ಬಾಳಿ ಅಳಿದುಹೋಯಿತು. ಆ ಮೇಲೆ ಬಂಗಾಲಿಯ 'ದಿಗ್ದರ್ಶನ' 'ಸಮಾಚಾರದರ್ಪಣ' 'ಸಂವಾದಕೌಮುದಿ' ಎಂಬೀ ಮಾಸಿಕವಹಿಗಳು ಹೊರಟುವು. ಅಂತು ಬಂಗಾಲವು ಭರತವರ್ಷದಲ್ಲಿ ಪತ್ರಿಕಾ ಪ್ರಪಂಚದಲ್ಲಿ ಮೊದಲಸ್ಥಾನವನ್ನು ಗಳಿಸಿರುವುದು. ಬಂಗಾಲಿಗಳು ಸುಶಿಕ್ಷಿತರು, ಪದವೀಧರರು, ಶಿಕ್ಷಣವಿಷಯದಲ್ಲಿ ಅವರು ಇಡೀ ಭರತ ವರ್ಷದಲ್ಲಿ ಅದ್ವಿತೀಯರು. ಅವರಿಗೆ ಮಾತೃಭಾಷೆಯಲ್ಲಿ ವಾತ್ಸಲ್ಯವಿದೆ. ಬಂಕಿಮ, ಹೇಮ, ನವೀನ ಎಂಬ ಸುಶಿಕ್ಷಿತ ಬಂಗಾಲಿಗಳು ವಂಗ ಕವನಲೋಕದ ತ್ರಿಮೂರ್ತಿಗಳಂತೆ ಮೆರೆದಿರುವರು. ಅವರ ಬಳಿಕ ಕವೀಂದ್ರ, ರವೀಂದ್ರ, ಮಧುಸೂದನ, ಹೇಮಚಂದ್ರ ಮೊದಲಾದ ಧುರೀಣ ವಾಙ್ಮಯ ಸೇವಕರು ಜೀರ್ಣವಾದ ವಂಗಕವಿತೆಗೆ ದ್ರಾಕ್ಷಾ ಪಾಕದಿಂದ ರಸ ಪುಷ್ಟಿಮಾಡಲು ಅವಿಶ್ರಾಂತ ಪರಿಶ್ರಮ ಪಡುತಲಿರುವರು. ವಂಗ ಮಹಾಕವಿ ಹೇಮಚಂದ್ರನು ಕ್ರಿ. ಶ. ೧೮೬೧ರಲ್ಲಿ ವಕೀಲನಾಗಿದ್ದು 'ಚಿಂತಾತರಂಗಿಣಿ' ಎಂಬ ಅಪ್ರತಿಮ ಕಾವ್ಯವನ್ನು ರಚಿಸಿದನು. ಕವಿ ನವೀನನು 'ಬಿ. ಎ.' ಪದವೀಧರನಾದ ಬಳಿಕ ಪಲಾಸಿಯುದ್ಧ (The Battle of Plassey) ದ ಕುರಿತು ಅಮೋಘ ಕಾವ್ಯವನ್ನು ಬರೆದನು. ಆಧುನಿಕ ಕವೀಂದ್ರ ರವೀಂದ್ರರ 'ಗೀತಾಂಜಲಿ'ಯು ಅಪೂರ್ವವಾದ ಹಾಗು ಉಚ್ಚತರದ 'The Nobel Prize' ಎಂಬ ಎಂಟು ಸಾವಿರ ಪವನಿನ ಪಾರಿತೋಷವನ್ನು ಗಳಿಸಿದುದು ಅರ್ವಾಚೀನ ವಂಗ ಸಾಹಿತ್ಯ ಶಿಖರದ ಮೇರೆಯನ್ನು ಪ್ರದರ್ಶಿಸುವುದು.

ಸರ್ ಜಾನ್ ಉಡ್ರಾಫ್ ಸಾಹೇಬರು "ಆವ ಜನಾಂಗವು ಭಾಷಾವಾತ್ಸಲ್ಯವನ್ನು ಮರೆತು ಪರಭಾಷಾಪಠನ ಮಾಡುವುದೋ ಅದು ಕೊನೆಗೆ ಪರನುಡಿ ಓದೋಣದಿಂದ ಸ್ವಯಂ ಆತ್ಮವನ್ನೇ ಕಳೆದುಕೊಳ್ಳುವುದು." ಎಂದು ಅಂದಿರುವರು. ಶಿಕ್ಷಣಪ್ರಪಂಚದಲ್ಲಿ ಅದ್ವಿತೀಯರಾದ ಸರ್ ಮೈಕೆಲ್ ಸ್ಯಾಡ್ಲರ್ ಸಾಹೇಬರು "ಮಾತೃಭಾಷೆಯಲ್ಲಿ ನಿರಾಯಾಸವಾಗಿ ಹಾಗು ನಿರ್ದೋಷವಾಗಿ ಮಾತನಾಡಲು ನಾವು ಶಿಕ್ಷಣ

ದಿಂದ ಬಯಸಬೇಕು. ಬಾಹ್ಯವಸ್ತುಗಳು ಇಂದ್ರಿಯಗಳ ಮೂಲಕ ತಮ್ಮ ವಿಷಯವನ್ನು ಮನದೊಳಗೆ ಉಂಟುಮಾಡಿದಾಗ ಮನಸ್ಸಿನಲ್ಲಿ ಕೆಲವು ಭಾವನೆಗಳು ವಚನದಲ್ಲಿ ವಿದಿತವಾಗುವುದರಲ್ಲಿ ತಾಯಿನುಡಿಯ ಸಹಾಯವಿಲ್ಲದೆ ಆಗಲಾರದು. ಹೀಗೆ ಬುದ್ಧಿಯ ಸಹಜವಾದ ವ್ಯಾಪಾರಕ್ಕೆ ಮಾತೃಭಾಷೆಯೊಂದೇ ಸಾಧಕವಾಗಿರುವುದು. ಆದುಕಾರಣ ಶಿಕ್ಷಣದಲ್ಲಿ ಮಾತೃಭಾಷೆಯು ತಳಹದಿಯಾಗಿರಲಿಕ್ಕೇ ಬೇಕು.'' ಎಂದು ಮಾತೃಭಾಷೆಯ ಆದ್ಯ ಉಪಯೋಗವನ್ನು ಹೃದಯಂಗಮವಾಗಿ ವರ್ಣಿಸಿರುವರು.

ವಾಚಕಮಹಾಶಯ! ನಾವೀಗ ಸುಧಾರಿಸಿದೆವೆಂದು ತಿಳಿದಿರುವೆವು. ಪರಂತ. ಅದೆಂತಹ ನವೀನ ಸುಧಾರಣೆಯೆಂದು ತಿಳಿಯಲು ಪ್ರಯಾಸಕರವಿರುವುದು. ಏನು! ಪಿಯೂಶದಂತಿರುವ ಕರ್ಣಾಟಕ ಭಾಷೆಯು ಆಧುನಿಕ ಕನ್ನಡಿಗರಿಗೆ 'ಅನಾಗರೀಕ ಭಾಷೆ'ಯಾಗಿ ಭಾಸವಾಗುವುದೆಂಬುದು ಅದೆಂತಹ ಮೂಢತನವು! ತತ್ರಾಪಿ ಅಂತಹ ಮಾತೃಭಾಷಾದ್ರೋಹಿಗಳು ಒಂದು ತಡವೆ ಸುಧಾರಿಸಿದ ಜನಾಂಗದ ಹಾಗು ಸಮಾಜದ ಕಡೆಗೆ ಅವಲೋಕಿಸಲಿ! ಭಟ್ಟಾಕಳಂಕನು ಕರ್ಣಾಟಕ ಭಾಷೆಯ ಕುರಿತು—

'ನ ಚೈಷಾಭಾಷಾಶಾಸ್ತ್ರಾನುಪಯೋಗಿನೀಃ ತತ್ವಾರ್ಥಮಹಾಶಾಸ್ತ್ರ ವ್ಯಾಖ್ಯಾನಸ್ಯ ಷಣ್ಣವತಿ ಸಹಸ್ರಪ್ರಮಿತ ಗ್ರಂಥಸಂದರ್ಭರೂಪಸ್ಯ ಚೂಡಾಮಣ್ಯಭಿದಾನಸ್ಯ ಮಹಾಶಾಸ್ತ್ರಸ್ಯಾನ್ಯೇಷಾಂಚ ಶಬ್ದಾಗಮ ಯುಕ್ತ್ಯಾಗಮ ಪರಮಾಗಮ ವಿಷಯಾಣಾಂ ತಥಾ ಕಾವ್ಯನಾಟಕಾಲಂಕಾರಕಲಾಶಾಸ್ತ್ರ ವಿಷಯಾಣಾಂ ಚ ಬಹುನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್'' ಎಂದು ಆಧಾರಪೂರ್ವೇಣ ಪ್ರಶಂಸಿಸಿರುವನು.

ಅಂದ ಮೇಲೆ ಅಂತಹ ಭಾಷೆಯು ಪತನವಾಗಬಿಡುವುದು ನಿಜ ಕನ್ನಡಿಗನ ಅಭಿಮಾನಕ್ಕೊಂದು ಕಳಂಕವು. ಅದುಕಾರಣ ಭಾವೀ ಸಮಾಜಿಕರಾದ ಇಂದಿನ ಯುವಕರು ಹಾಗು ವಿದ್ಯಾರ್ಥಿಗಳು ಕರ್ಣಾಟಕ ವಾಙ್ಮಯಸೇವೆಗಾಗಿ ಟೊಂಕ ಕಟ್ಟಿ ಕಾರ್ಯಪೂರ್ವಕ ಸಾಧಿಸಬೇಕು. ಅಂದ ಮೇಲೆ ನಮ್ಮ ಮಾತೃಭಾಷೆಯು ಕಾಲಕ್ರಮೇಣ ಸುಧಾರಿಸುವುದು. ಆದುದರಿಂದ ಯುವಕರು ಮುಖ್ಯತಃ ವಿದ್ಯಾರ್ಥಿಗಳು—

ಬಿಡುವಿದ್ದಾಗ ಕರ್ಣಾಟಕ ಪತ್ರಿಕೆಗಳನ್ನು ಓದಬೇಕು. ಪಠನಕಾಲದಲ್ಲಿ ಧಾರವಾಡ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ, ಎಂಬೀ ವಿಷಯ ಗಮನಕೊಡಬಾರದು, ಕಾರಣ ಹಾಗ ಭೇದವೆಣಿಸಿದರೆ ಭಾವೀ ಕರ್ಣಾಟಕದ ಏಕೀಕರಣದ ಸುಯೋಗದಲ್ಲಿ ಅದು ಘಾತಿಸದೆ ಇರದು. ಕನ್ನಡ ಭಾಷೆಯಲ್ಲಿರುವ ವಿಧವಿಧದ ಗ್ರಂಥಗಳನ್ನು ಕ್ರಮಶಃ ಪಠಿಸಬೇಕು. ಆಗ ನಮ್ಮ ಸಾಹಿತ್ಯಕ್ಕೆ ಒಂದು ತೆರನ ಜೀವಕಳೆ ಬಂದಂತಾಗುವುದು. ಹಾಗು ಲೇಖಕರ ಸಮುದಾಯವು ಹೆಚ್ಚಾಗುವುದು. ಕನ್ನಡ ಪಂಡಿತರಿಗೆ ಗೌರವಿಸಬೇಕು. ಅಲ್ಲಲ್ಲಿ ಉತ್ತಮತರದ ಗ್ರಂಥಗಳನ್ನು ಸಂಗ್ರಹಿಸಿ ಪುಸ್ತಕಭಂಡಾರಗಳನ್ನು ಸ್ಥಾಪಿಸಿ ಅದರಿಂದ ಸರ್ವರಿಗೂ ಲಾಭವಾಗುವಂತೆ ಯತ್ನಿಸಬೇಕು. ಯುವಕರು ಕರ್ಣಾಟಕ ಭಾಷೆಯಲ್ಲಿ ನಿರಾಯಾಸವಾಗಿ ಹಾಗು ನಿರ್ದೋಷವಾಗಿ ಬರೆಯುವ ಚೇತನವು ಬಂದಾಗ ಆದಷ್ಟು ನವೀನ ತರದ ಕವನ- ಲೇಖನಗಳನ್ನು ಬರೆಯಲು ತೊಡಗಬೇಕು. ಹಾಗು ಮಾಸಪತ್ರಿಕೆ (*ಮುದ್ರಿಸಿದ ಅಥವಾ ಕೈಬರಹದ) ಗಳನ್ನು ಹೊರಡಿಸಿ ಅವುಗಳಲ್ಲಿ ತಮ್ಮ ಲೇಖನ- ಕವನಗಳನ್ನು ಬರೆದು ಅವುಗಳಲ್ಲಿನ ಉಚಿತವಾದುವುಗಳನ್ನು ಇತರ ಕರ್ಣಾಟಕದಲ್ಲಿನ ಶ್ರೇಷ್ಠ ಪತ್ರಿಕೆಗಳಲ್ಲಿ ಪ್ರಕಟಿಸಬೇಕು.

ಕನ್ನಡದಲ್ಲಿ ಶಾಸ್ತ್ರೀಯ ಗ್ರಂಥಗಳನ್ನು ರಚಿಸಬೇಕು. ಸಾಂಕೇತಿಕ ಶಬ್ದಗಳ ಪಟ್ಟಿಯನ್ನೂ ಶಬ್ದಕೋಶವನ್ನೂ ಮಾಡಬೇಕು. ಇತಿಹಾಸ ವಿಷಯವಾಗಿ ನವೀನ ಪರಿಶೋಧನ ಮಾಡಲು ಪ್ರಯತ್ನಿಸಬೇಕು. ಹಾಗು ಪ್ರಾಚೀನ ಇಮಾರತ ಮೂರ್ತಿ, ತಟಾಕ ಮೊದಲಾದುವುಗಳ ತಸಬೀರು (Photo) ಮಾಡಿ ಪತ್ರಿಕದ್ವಾರ ಜನತೆಗೆ ಪ್ರದರ್ಶಿಸಬೇಕು. ಗೆಳೆಯರೊಡನೆ ಸಂಭಾಷಣ ಮಾಡುವಾಗ ಕರ್ಣಾಟಕಭಾಷೆಯೊಡನೆ ಪರಭಾಷೆಯ ಶಬ್ದಗಳನ್ನು ಪ್ರಯೋಗಿಸುವ ಚಟವನ್ನು ತೊರೆಯಬೇಕು. ಅಖಿಲ ಕರ್ಣಾಟಕದ ವಿದ್ಯಾರ್ಥಿಗಳು ಕರ್ಣಾಟಕದೊಳಗಣ ಪತ್ರಿಕೆಗಳ ಅಭಿವೃದ್ಧಿಗಾಗಿ ಸಾಧ್ಯವಿದ್ದಷ್ಟು ವರ್ಗಣೀದಾರರನ್ನು ಹಾಗು ನುರಿತ ಲೇಖಕರ ಸಂಖ್ಯೆಯನ್ನು ಒದಗಿಸುವುದರಲ್ಲಿ ಸಹಭಾಗಿಗಳಾಗಿರಬೇಕು. ವರುಷಕ್ಕೊಂದು ಸಲ ಅಖಿಲ ಕರ್ಣಾಟಕದ ವಿದ್ಯಾರ್ಥಿಗಳ ಸಮ್ಮೇಲನವನ್ನು ಮಾಡಿ ಕರ್ಣಾಟಕಭಾಷೆಯ ಅಭಿವೃದ್ಧಿಗಾಗಿ ಹೊಸತರದ ನಿಬಂಧನಗಳನ್ನು ಮಾಡಬೇಕು.

ಅಂತು ವಿದ್ಯಾರ್ಥಿಗಳು ಅನೇಕ ರೀತಿಯಿಂದ ಮಾತೃಭಾಷಾಸೇವೆಮಾಡಲು ಇಂಬು ಇರುವುದು. ಅಂತಹ ಪವಿತ್ರಕಾರ್ಯದಲ್ಲಿ ವಿದ್ಯಾರ್ಥಿಗಳು ಸಾಧಿಸಿದರೆ ಕೊನೆಗೆ ಎಲ್ಲರಲ್ಲಿಯೂ ಮಾತೃಭಾಷಾಪ್ರೇಮವು ಅಂಕುರಿಸುವುದು. ಬಳಿಕ ನಿಜವಾಗಿ ಕರ್ಣಾಟಕ ಸಾಹಿತ್ಯವು ಸುಧಾರಿಸುವುದು. ಜನರಿಗೆ ತಾಯಿನುಡಿಯಲ್ಲಿ ಅನುರಾಗವು ಮಿಗಿಲಾಗುವುದು. ತತ್ರಾಪಿ ಇಂದಿನ ಯುವಕರು ಅರ್ಥಾತ್ ಮುಂದಿನ ಸಮಾಜಿಕರು ಕರ್ಣಾಟಕ ವಾಙ್ಮಯ ಕ್ಷೇತ್ರಕ್ಕೆ ಪದಾರ್ಪಣ ಮಾಡಿದರೆ ಪುನಃಪಿ ಕರ್ಣಾಟಕ ವಾಙ್ಮಯಪ್ರಭಾಕರನು ಕರ್ಣಾಟಕ ದೇಶದಲ್ಲಿ ಶೋಭಿಸುವನು. ತತ್ಸಮಯ ಪರಭಾಷಾ ನಿಶೆಯು ಮಾಯವಾಗಿ ಮಾಧುರ್ಯಮಯವಾದ ಮಾತೃಭಾಷಾಪ್ರಭಾತವು ಮೂರ್ತಿಮಂತವಾಗುವುದು. ಒಡನೆ ಕರ್ಣಾಟಕ ವಾಗ್ದೇವಿಯು ವಾಙ್ಮಯ ದಿವಾಕರನಿಗೆ ಸುಖಾಗಮನವನ್ನೀಯುವ ಸಲುವಾಗಿ ಸ್ವಾತಂತ್ರ್ಯದ ಮಂಗಳಕರವಾದ ರುಧಿರಧ್ವಜವನ್ನು ಫಡಫಡಿಸುವಳು.

ವಾಚಕಮಹಾಶಯ! ಅಂತಹ ಸ್ಪರ್ಶೀಯ ಆನಂದ ಸನ್ನಿವೇಶವನ್ನು ನಾವು ಕಳೆದು ಬಿಡುವುದೆಂತು! ಅದು ಕಾರಣ ನಾವು ಕರ್ಣಾಟಕ ವಾಙ್ಮಯದಿವಾಕರನ ಆಗಮನವನ್ನು ನಿರೀಕ್ಷಿಸಬೇಡವೇನು? ಅದೋ! ಸರ್ವತ್ರ ಕವಿಕೋಕಿಲೆಗಳು ಪಂಚಮನಿಸ್ವನದಿಂದ ಹೃದಯಂಗಮವಾಗಿ ಕರ್ಣಾಟಕ ಏಕೀಕರಣ ಗಾನವನ್ನು ಮಾಡುತಲಿರುವುವು. ರಸಿಕ ಶುಕಗಳು ಕರ್ಣಾಟಕದ ಪ್ರಾಚೀನ ವೈಭವ ಗೀತೆಯನ್ನು ನುಡಿಯುತಲಿರುವುವು. ಧುರೀಣ ಸಾಹಿತ್ಯಕಿಂಕರ ಶಾರಕಗಳು ಕರ್ಣಾಟಕದಲ್ಲಿ ನವೀನ ತೆರನ ಸ್ಫೂರ್ತಿಯು ಜನಿಸುವಂತೆ ಅಪೂರ್ವ ರವ ಮಾಡಿ ಅಲ್ಲಲ್ಲಿ ಸುಳಿಯುವುವು. ಈಗಾಗಲೇ ಮಾತೃಭಾಷಾನುರಾಗದ ಮಂದಮಾರುತನು ನಿದ್ರಿಸಿರುವ ಕನ್ನಡಿಗರನ್ನು ಎಬ್ಬಿಸುವ ಕಾರ್ಯದಲ್ಲಿ ಅನುವಾಗಿರುವನು. ಕರ್ಣಾಟಕ ವಿದ್ಯಾರ್ಥಿವೃಂದ! ಆದುದರಿಂದ ನಾವೂ ದೇಶಾಭ್ಯುದಯ ಕಾರ್ಯದಲ್ಲಿ ಲೀನರಾಗುವುದು ಸಮಯೋಚಿತವಿರುವುದು!

**'ಸಂಘೇಶಕ್ತಿ ಕಲೌಯುಗೇ'**

**ಉತ್ತಿಷ್ಠತ! ಜಾಗ್ರತ!! ಪ್ರಾಪ್ಯವರಾನ್ನಿಬೋಧತ!!!**

ವಂದೇ ಕರ್ಣಾಟಕಮಾತರಂ!

---

* ಇಂತಹ ತರದ ಹಸ್ತಾಕ್ಷರದ ಪತ್ರಿಕೆಗಳು ಧಾರವಾಡಿನಲ್ಲಿಯೂ, ಮಂಗಳೂರಿನಲ್ಲಿಯೂ ಇವೆ. ನಮ್ಮೊ ಮಂಗಳೂರಿನಲ್ಲಿ ಮಿತ್ರ, ಉದಯಭಾರತ ಹಾಗು ಲೀಲೆ ಯಾ ಕರ್ಣಾಟಕ ವಾಗ್ದೇವಿ ಅಳಿಲಸೇವೆ ಮಾಡಲು ತೊಡಗಿರುವುದು.



# ಕಾವ್ಯಾಮೃತಾಸ್ವಾದನ

ಲೇಖಕ: —ಶ್ರೀಯುತ ರಾವಸಾಹೇಬ ಯುವ್. ಅನಂತರಾವ್, ಬಿ. ಎ. ಬಿ. ಎಲ್., ಪುತ್ತೂರು.

ಒಂದಿನ ರಾತ್ರೆ ಯಕ್ಷಗಾನ ಜೀರ್ಣೋದ್ಧಾರ ಸಮಾಜದ ಬೈಠಕಿಗೆ ಹೋದ ನಾನು ಮಧ್ಯಾಹ್ನ ಊಟ ತೀರಿಸಿ, ತುಸ ಹೊತ್ತು ನಿದ್ದೆ ಹೋಗಬೇಕೆಂಬಾಸೆಯಿಂದ "ಈಜೀಚೇರಿ"ನಲ್ಲಿ ಅಡ್ಡಲಾಚಿಕೊಂಡು ಕಣ್ಮುಚ್ಚಿಕೊಳ್ಳುತ್ತೇನೆನ್ನುವಷ್ಟರಲ್ಲಿ, ನಮ್ಮೂರಿನ ಕವಿವರ್ಯರು—ನನ್ನಾಪ್ತಸ್ನೇಹಿತರು ನೋಡಿ—ಏನನ್ನೋ ಹಾಡುತ್ತ ಹಾಡುತ್ತ ಬಂದೇಬಿಟ್ಟರು. ಅವರ ಅಭ್ಯಾಸವೇ ಹಾಗೆ; ನಡೆದಾಡುತ್ತಿರುವಾಗಲೆಲ್ಲಾ ತಮ್ಮ ಸ್ವಕಪೋಲಕಲ್ಪಿತವಾದ ಕವಿತೆಗಳನ್ನು ಹಾಡುತ್ತಲೇ ಇರುವುದು. ಈ ಕಾರಣದಿಂದಲೇ ಅವರನ್ನು ಮಿತ್ರರೆಲ್ಲರೂ ನಾರದರೆಂದು ಕರೆಯುತ್ತಿದ್ದರು, ಹೊರತು, ಅವರು ಕಲಹಪ್ರಿಯರೆಂದಲ್ಲ. ಅದು ಹೇಗೂ ಇರಲಿ. ಅವರ ಸ್ವರವನ್ನು ಕೇಳಿದ್ದೇ ಕೇಳಿದ್ದು, ನಾನು ನಿದ್ದೆಮಾಡುವ ಆಸೆಗೆ ತಿಲಾಂಜಲಿಯನ್ನಿತ್ತು—

**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।**
**ತಸ್ಮಾತ್ ಕಾರುಣ್ಯಭಾವೇನ ರಕ್ಷರಕ್ಷೋ ಜಗತ್ಪತೇ ॥**

ಎಂದುಬಿಟ್ಟೆ. ಅಷ್ಟಕ್ಕೆ ನಾರದರ ಪ್ರವೇಶ. ದೇವರನ್ನು ಸ್ತುತಿಸಿದ್ದಲ್ಲಿ ನಾರದರಿಲ್ಲದಿದ್ದರೆ, ಮತ್ತೆಲ್ಲಿರಬೇಕು?

**"ದೇವಲೋಕದ ಕನ್ಯೆ ನಿಖಿಲಗುಣಸಂಪನ್ನೆ"**

ಎಂದು ಪುನಃ ಕೇಳಿಸಿದ್ದೂ ಸ್ವತಃ ಪ್ರಸನ್ನರಾದದ್ದೂ ಏಕಕಾಲದಲ್ಲಾಯಿತು. ಮತ್ತೆ ಪುನಃ—

**"ದೇವಲೋಕದ ಕನ್ಯೆ ನಿಖಿಲಗುಣಸಂಪನ್ನೆ"**

ಎಂದು ಹಾಡಿ, ಒಡನೆಯೇ —

"ಅರ್ಥವೇನೂ ಬೇಕಾಗಿಲ್ಲವಷ್ಟೇ. ಕವಿತೆಯ ಅರ್ಥವು ಹಾಡುವಾಗಲೇ ಸ್ಪಷ್ಟವಾಗಬೇಕು. ಕೇಳು" ಎಂದು ಮುಂದರಿಸಿದನು;—

"ಶ್ರೀಮತ್ಪದ್ಮಾಕ್ಷಮುಖ್ಯಾಮರಮುಕುಟಮರುತ್ವನ್ಮಣಿಶ್ರೇಣಿಭೃಂಗಸ್ತೋಮಾಂಚತ್ಪಾದಪದ್ಮಂ ಗಿರಿವರತನಯಾನೇತ್ರಲೀಲಾಬ್ಜಚಂಚತ್ಸೋಮಂ ಭಕ್ತ್ಯಾಘ—"

ಎಲ್ಲೆಡೆ ಸಿಕ್ಕುತ್ತೋ ಎಂದು ನಿರೀಕ್ಷಿಸುತ್ತಲೇ ಇದ್ದ ನಾನು ಆ ಮಹಾಪ್ರಾಣವ್ಯಂಜನಕ್ಕೆ ಬಂದೊಡನೆ —

"ತಡೆ! ತಡೆ! ಸ್ವಲ್ಪ ತಡೆ, ಮಹಾರಾಯಾ! ಹೇಳಿದ್ದನ್ನೊಮ್ಮೆ ಗ್ರಹಿಸಿಕೊಳ್ಳುತ್ತೇನೆ. ಮತ್ತೆ ಮುಂದರಿಸಬಹುದಲ್ಲಾ!" ಎಂದೆ.

ಅವನಿಗೂ ಏಕದಂ ಹಾಡಿ ಉಸುರುಕಟ್ಟಿ ಹೋಗಿತ್ತು. ಹೇಗೂ ನಿಲ್ಲಿಸುತ್ತಿದ್ದನೋ ಏನೋ! ರೋಗಿ ಬಯಸಿದ್ದೂ ವೈದ್ಯ ಹೇಳಿದ್ದೂ ಒಂದೇ ಆಗಿ, ಒಮ್ಮೆಗೆ ನಿಲ್ಲಿಸಿ, ಮತ್ತೆ ಅಂದನು: —

"ಅಗೊ! ನೋಡಿದೆಯಾ — ನಾನಂದದ್ದರ ಸಾರ್ಥಕ್ಯ? ಯಾವ ಗುಣವೆಷ್ಟಿದ್ದರೂ, ಹಾಡುತ್ತಿರುವಾಗಲೇ ಅರ್ಥವಾಗದಿದ್ದರೆ, ಎಲ್ಲಾ ಬಣ್ಣ ಮಸಿ ನುಂಗಿದಂತೆಯೇ ಸರಿ. ನನ್ನದರ ಅರ್ಥವನ್ನಾದರೋ ಹೇಳಬೇಕೆಂದೇ ಇಲ್ಲ. ಇಗೋ! ಕೇಳು: —

**"ದೇವಲೋಕದ ಕನ್ಯೆ ನಿಖಿಲಗುಣಸಂಪನ್ನೆ**
**ಪಾವನೆ ಪುನೀತೆ ಸಾಕ್ಷಾತ್ ಸರಸ್ವತಿಯಾ**

"ಸಾಕ್ಷಾತ್ ಸರಸ್ವತಿ, ಕಾಣಯ್ಯಾ. ಬೇರೆ ಯಾರ್ಯಾರು ಏನೇನನ್ನುತ್ತಿದ್ದರೋ ನಾನರಿಯೆ. ಸರಸ್ವತಿಯೆಂದಷ್ಟರಲ್ಲೇ ನಿಲ್ಲಿಸಿ ಕೆಳಗೆ ಮೇಲೆ ನೋಡುತ್ತಾ ಪಾದಪೂರ್ಣತೆಗೆ ತಲೆ ತುರಿಸಿಕೊಳ್ಳುತ್ತಿದ್ದರೋ, ಇನ್ನ್ಯಾವ ಗುಣವಾಚಕಗಳನ್ನಿಡುತ್ತಿದ್ದರೋ. ನಾನು ಸಾಕ್ಷಾತ್ ಸರಸ್ವತಿಯೆಂದೆ. ಶಾರದಾಮ್ಮನವರನ್ನು ನೋಡಿದವರು ನಮ್ಮ ಜಗತ್ತಿನಲ್ಲಂತೂ ಇರಲಿಕ್ಕೇ ಇಲ್ಲ. ಇನ್ನು ಶಾರದಾಮ್ಮ

ನವರು ನಿಜವಾಗಿಯೂ ಅಸ್ತಿತ್ವವನ್ನು ಸಂಪಾದಿಸಿರುವ ದೇವತಾಸ್ವರೂಪಿಣಿಯೇ, ಕೇವಲ ಮುನಿಕವಿಗಳಿಂದ ಕಲ್ಪಿಸಲ್ಪಟ್ಟಿರುವ ಕೃತ್ರಿಮ ವ್ಯಕ್ತಿವಿಶೇಷವೇ ಎಂಬಾಲೋಚನೆ ನಾವೇಕಯ್ಯಾ ಹಚ್ಚಿಕೊಳ್ಳಬೇಕು? —''

ಅವನು ಹಾಗೆಂದಾಗ ನಿದ್ದೆಯ ಆಸೆಯು ಪುನಃ ಅಂಕುರಿಸಿದ ಹಾಗಾಯಿತು. ಆದರೆ ಅವನ ಮಾತು ಅಷ್ಟಕ್ಕೆ ಮುಗಿಯಲಿಲ್ಲ.

''—ನನ್ನ ಕವಿತಾಶಕ್ತಿಯನ್ನು ನಾನು ಸಾಕ್ಷಾತ್ ಸರಸ್ವತಿಯೆಂದಿದ್ದೇನೆ. ಪ್ರತ್ಯಕ್ಷ ಕಾಣಿಸಿಕ್ಕುವ ಸರಸ್ವತಿಯೆಂದರೆ ಎಲ್ಲವೂ ಅಷ್ಟರಲ್ಲೇ ಅಡಗಿತಲ್ಲವೇ?''

ನಿದ್ದೆಯ ಆಸೆ ಪುನಃ ತೊಲಗಿಹೋಯಿತು. ಸಂದರ್ಭಕ್ಕೆ ತಕ್ಕಂತೆ ನಟಿಸುವುದೇ ಯೋಗ್ಯವೆಂದಂದುಕೊಂಡು —

''ಶಹಭಾಸ್! ಇದಕ್ಕೀಗ ಕವಿತಾಶಕ್ತಿವಿಕಾಸದ ಪರಮಾವಧಿಯೆನ್ನಬೇಕು'' ಎಂದೆನು. ಅದಕ್ಕೆ ಅವನು:—

''ಅಗೋ! ನೀನು ಹಾಗೇನೇ ಹೇಳುವಿಯೆಂದು ನನಗೆ ಮೊದಲೇ ಗೊತ್ತು. ಆದರೆ ಅದು ಅತಿಶಯೋಕ್ತಿಯೆಂದು ಫಕ್ಕನೆ ನನಗೆ ಹೇಳಬರಲಿಕ್ಕಿಲ್ಲ. ಇರಲಿ; ಮುಂದೆ—

'' ಸಾಕ್ಷಾತ್ ಸರಸ್ವತಿಯಾ
ಭೂವಲಯದಲಿ ಸರ್ವಮಾನ್ಯೆ ಸರ್ವಜ್ಞೆ ವಿ
ದ್ಯಾವತಿ ಯುವತಿಯೆನ್ನ ವರಿಸಿದ ಸುಮತಿಯಾ-''

''ತಾಳು, ತಾಳು! ನಿನ್ನನ್ನು ವರಿಸಿದವಳವಳೋ-- ಅವಳನ್ನು ವರಿಸಿದವನು ನೀನೋ?''

''ಪುರುಷನಿಗಿಂತ ಪ್ರಕೃತಿ ದೊಡ್ಡವಳಲ್ಲವೇನೋ? ಪರಮಾತ್ಮನು ಸೃಷ್ಟಿಕರ್ತನೇನೋ ಹೌದು. ಆದರೆ ಆದಿಮಾಯೆಯ ಹೊರತು ಆತನು ಕಾಣಿಸಿಕೊಳ್ಳಲಾಪನೇ? ಇದನ್ನೆಲ್ಲಾ ನಾನಾಲೋಚಿಸದೆ ಕಾವ್ಯ ಕಟ್ಟಿದೆನೆಂದು ನೆನೆಸಬೇಡ. ಈಗಂತೂ ಸ್ತ್ರೀಯುಗವೇ ಅಲ್ಲದೆ ಪುರುಷಯುಗವು ಎಂದೋ ಎಲ್ಲೋ ಹೋಗಿಯೇ ಬಿಟ್ಟಿತು. ಕಾಲದ ರಹಸ್ಯವನ್ನು ಪ್ರತಿಬಿಂಬಿಸುವುದೆಂದರೆ ಹೀಗೆ, ನೋಡು! 'ನಾನು ವರಿಸಿದ ಸುಮತಿಯಾ' ಎಂದಿದ್ದರೆ ಛಂದಸ್ಸೇನೂ ಕೆಡುತ್ತಿದ್ದಿಲ್ಲ. ಆದರೂ ಬೇಕೆಂದೇ 'ಎನ್ನ ವರಿಸಿದ ಸುಮತಿಯಾ' ಎಂದು ಮಾಡಿದ್ದೇನೆ. ಇದರ ಗುಟ್ಟು ನಿನಗೆ ತಿಳಿಯದೆ ಹೋದುದರಲ್ಲಿ ನನಗೇನೂ ಆಶ್ಚರ್ಯವಾಗುವುದಿಲ್ಲ. ಇದಕ್ಕೋಸ್ಕರವಲ್ಲವೇ, ಕವಿ ಕಂಡದ್ದು ರವಿ ಕಾಣಲಿಲ್ಲವೆನ್ನುವರು? ಮುಂದೆ—

''ಭಾವಿಸಲ್ಕದರಿಂದ ಮೇಲು ಮಿಗಿಲೆನಿಪುದಿ
ನ್ನಾವುದಿದೆ ನೋಡೆನ್ನ ಸಲೆ ಕಲಿತ ಸತಿಯಾ!

''ಸಲೆ ಕಲಿತ ಸತಿ'—ಕೇಳಿದೆಯಾ? 'ಸಲೆ ಕಲಿತ' ಎಂಬ ಪದಗಳ ಜೋಡಣೆಗೆ ನನಗೆ ನಾಲ್ಕು ದಿವಸಗಳು ಹಿಡಿದಿವೆಯೆಂದರೆ, ನನ್ನ ಕವಿತಾಶಕ್ತಿಯಲ್ಲಿ ಸಂಪೂರ್ಣ ವಿಶ್ವಾಸವನ್ನಿಟ್ಟಿರುವ ನಿನ್ನಂಥವರಿಗೆ ನಂಬಲಿಕ್ಕೆ ಕಷ್ಟಸಾಧ್ಯವೆಂಬುದನ್ನು ನಾನು ಬಲ್ಲೆ. ಕವಿತೆಯು ನಿಜವಾದ ಕವಿತೆಯಾಗಬೇಕಾದರೆ ಸೊಗಸಾದ ಭಾವನೆಗಳಿದ್ದರೆ ಮಾತ್ರ ಸಾಲದು—ಆ ಭಾವನೆಗಳನ್ನು ಸುಲಲಿತವಾದ ಶೈಲಿಯಲ್ಲಿ ತೊಡಿಸಬೇಕು; ಮತ್ತು ಅರ್ಥವು ಸುಗಮವಾಗಿರಬೇಕು. 'ಸಲೆ ಕಲಿತ' ಎಂಬುದರ ಬದಲಿಗೆ ಇನ್ನೇನನ್ನೂ ಹೇಳಬಹುದಿತ್ತು. ಆದರೆ — ''

ಎರಡೆರಡು ಚರಣಗಳಿಗೊಮ್ಮೆ ಇಷ್ಟಿಷ್ಟುದ್ದ ವ್ಯಾಖ್ಯಾನವಾದರೆ, ನಾನು ಎಷ್ಟು ಹೊತ್ತಿನ ತನಕ ಹೀಗೆ ಅವಸ್ಥೆಪಟ್ಟುಕೊಂಡಿರಬೇಕೆಂದು ಲೆಕ್ಕಹಾಕುವ ಬಗ್ಗೆ ಗಡಿಯಾರದ ಕಡೆ ನೋಡಲಾರಂಭಿಸಿದೆನು. ಆದರೆ ಸುಂಕದವನ ಹತ್ತಿರ ಸುಖದುಃಖವೇ?

''—ಆದರೆ ಅದನ್ನೇ ನನ್ನ ಪಲ್ಲವಿಯ ಸೊಲ್ಲನ್ನಾಗಿ ನಾನು ಈ ಪದ್ಯಗಳಲ್ಲಿಟ್ಟುಕೊಂಡಿದ್ದೇನೆಂಬದು ಮುಂದಕ್ಕೆ ಹಾಡುತ್ತಿರುವಾಗ ನಿನಗೆ ತಿಳಿಯುವುದು. ಪಲ್ಲವಿಯ ಸೊಲ್ಲೆಂದರೆ ಪದ್ಯದ ಜೀವಾಳವೇ ತಾನೇ. ಶಬ್ದಮಯವಾದ ಪ್ರಪಂಚಕ್ಕೆ ಜೀವಕಳೆಯಿರಬೇಕಾದರೆ ಪರಮಾತ್ಮನ ಬಿಂದುವಾದರೂ ಒಂದು ಇರಲೇಬೇಕಾಗಿರುವಂತೆ, ಪದ್ಯಸರಣಿಯ ಟೊಳ್ಳುಕಟ್ಟಿನಲ್ಲಿ—''

ಅಬ್ಬಬ್ಬಾ! ಹೆಣ್ಣನ್ನು ಕುರಿತು ಒಂದು ಹರಟೇಪದಕ್ಕೆ ಎಷ್ಟು ತತ್ತ್ವಜ್ಞಾನವಪ್ಪಾ!

''—ಕವಿತೆಯ ಪ್ರಾಣವಾಯುವು ಹರಿದಾಡಬೇಕಾದರೆ ಪಲ್ಲವಿಯ ಸೊಲ್ಲಿನ ಮಹಿಮೆಯಿಂದಲೇ ಆದಾಗಬೇಕು ವಿನಾ ಮತ್ತೆ ಬೇರಿಲ್ಲ. ಕವಿಯೆನ್ನಿಸಬೇಕಾದವನು ಏಳುವುದೂ ಬೀಳುವುದೂ ಈ ಪಲ್ಲವಿಯ ಸೊಲ್ಲಿನಿಂದಲೇ ಸರಿ. ಕೆಲವರು 'ನೆರೆ ಅರಿತ' ಎನ್ನುತ್ತಿದ್ದರೋ ಏನೋ. ಬೇರೆ ಕೆಲವರು 'ನೆರೆ

ಕಲಿತ' ಎನ್ನುತ್ತಿದ್ದರು. ಇನ್ನೂ ಕೆಲವರು 'ಸಲೆ ಅರಿತ' ಎಂದೇ ಇಡುತ್ತಿದ್ದರು. ಮತ್ತೆ 'ಬಲು ಕಲಿತ,' 'ಬಲು ಅರಿತ' ಎಂಬ ಪರ್ಯಾಯಗಳಿವೆಯಷ್ಟೇ. 'ಸಲೆ ಕಲಿತ' —"

ನಾನು: "ಎನ್ನುವಷ್ಟು ಪುಣ್ಯವಿಶೇಷವೂ ಪ್ರತಿಭಾ ಪೂರ್ಣತೆಯೂ ಎಲ್ಲರಿಗೂ ಬಂದಾವೇ?" ಎಂದೆ.

ಅವನು: "ಹಾಗನ್ನು, ಹಾಗನ್ನು. ಈಗಲಾದರೆ ಸಂಗತಿ ಪೂರ್ಣವಾಗಿ ನಿನಗೆ ಮಂದಟ್ಟಾಯಿತೆಂದು ಹೇಳಬಹುದು."

ಗಡಿಯಾರವನ್ನು ನೋಡಿ ಪ್ರಯೋಜನವಿಲ್ಲ ವೆಂದಾದ ಮೇಲೆ ಸಂದರ್ಭಕ್ಕೆ ತಕ್ಕಂತೆ ನುಡಿಯು ವಷ್ಟು ಸಂಗತಿಯನ್ನಾದರೂ ತಿಳಿಯದಿದ್ದರೆ ಮತ್ತೇಕೆ?

"ಏನಾಯ್ತು ಶಾಕಪಾಕವ ಮಾಡಲರಿಯದಿರೆ?
ಜ್ಞಾನಾರ್ಜನೆಯೆ ತಿಳಿಯು ಜನ್ಮದಾ ಧ್ಯೇಯಂ!—"

ನಾನು:—"ಶಹಭಾಸ್! ಶಹಭಾಸ್!! ಆಜನ್ಮ ಇತಿಕರ್ತವ್ಯದ ಸಿದ್ಧಾಂತವೆಂದರೆ ಇದೇ ಸೈ! ಶಹ ಭಾಸ್!" ಎಂದೆ.

ಸರ್ವೋಪನಿಷದೋ ಗಾವೋ ದೋಗ್ಧಾ
ಗೋಪಾಲನಂದನಃ ।
ಪಾರ್ಥೋವತ್ಸಃ ಸುಧೀರ್ಭೋಕ್ತಾದುಗ್ಧಂ
ಗೀತಾಮೃತಂಮಹತ್ ॥

ಎಂಬುದು ನೆನಪಿಗೆ ಬಂತು. ದ್ವಾಪರಯುಗದ ಭಗವದ್ಗೀತೆಯ ಹಾಲು ಅದಾದರೆ, ಕಲಿಯುಗದ ನಾರದಗೀತೆಯ ಹಾಲು ಇದೇ ಸೈ.

"ಧ್ಯೇಯದಲ್ಲೇ ಮುಗಿಯಲಿಲ್ಲ, ಕಣೋ— ಇನ್ನು ನ್ಯಾಯಬರುತ್ತೆ ಕೇಳು:—

"ತಾನು ವಿದ್ಯೆಯ ಪಡೆದು—"

ಎನ್ನುವಷ್ಟರಲ್ಲಿ ನಾನು ಸ್ಮೃತಿ ತಪ್ಪಿದ ಹಾಗಾಗಿ—

"ದೀನಪತಿ ಕೈಹಿಡಿದು"

ಎಂದೆ.

"ಛೀ! ಛೀ!! ಮುಚ್ಚು. ನಿನ್ನ ಪ್ರಾಸದ ಹರಟೆ ಯಿಂದ ಗಾಂಭೀರ್ಯವನ್ನು ಕೆಡಿಸಬೇಡ!"

ಪ್ರಾಸವೆಂದರೆ ನನಗೆ ಚಿಕ್ಕಂದಿನಿಂದ ಬಹು ಪ್ರೀತಿ. ಸಣ್ಣ ಹುಡುಗನಾಗಿ ದೊಡ್ಡದೇವರ ಹಳ್ಳೀ ಪಾಠಶಾಲೆಯಲ್ಲಿ ಕಲಿಯುತ್ತಿದ್ದಾಗ್ಗೆ, ಶಾಲೆ ಗಳ ಸುಬ್ರಾಯಾಚಾರ್ರು * ಸಂದರ್ಶನೆಗೆ ಬಂದಿದ್ದ ವೇಳ್ಯ ಸಂವಾದವನ್ನೋ ಪಾಠಪ್ರವಚನವನ್ನೋ ನಾಟಕವನ್ನೋ ಬಗೆಬಗೆಯ ವಿನೋದಗಳನ್ನು ಏರ್ಪಡಿ ಸಿದ್ದುದರ ಪೈಕಿ ಪ್ರವಚನಕ್ಕಾಗಿ ನೇಮಿಸಲ್ಪಟ್ಟಿದ್ದ ಹುಡುಗನು ದೇಶಾಭಿಮಾನದ ಸೊಗಸಾದ ಹಾ ಡೊಂದನ್ನು ಹೇಳತೊಡಗಿ ಅರ್ಧ ಮುಗಿಸುವಷ್ಟರಲ್ಲಿ ಅಂಗಿಯೊಳಗೆ ತಗಣೆಯೋ ಇರುವೆಯೋ ಕಚ್ಚಿದುದ ರಿಂದ ಗಾಬರಿಗೊಂಡು, ಬಾಯಿಪಾಠ ಮಾಡಿದ್ದನ್ನು ಫಕ್ಕನೆ ಮರೆತುಬಿಟ್ಟು

"ಎದ್ದೇಳು ಎದ್ದೇಳು"

ಎಂದಷ್ಟರಲ್ಲೇ ನಿಲ್ಲಿಸಿ ಆಚೆ ಈಚೆ ನೋಡುತ್ತಿರಲು, ನಾನು ಹಠಾತ್ತಾಗಿ

"ಮುದ್ದಳಿಯ ಶಿದ್ದನೇ"

ಎಂದುಬಿಟ್ಟು ಪಾದಪೂರ್ತಿ ಮಾಡಿದ್ದೇ ತಡ, ನಗು ವಿನ ನೆರೆಯೇ ಬಂದಂತಾಗಿ, ಪ್ರೇಕ್ಷಕ ವರ್ಗವೆಲ್ಲವೂ ಅದರಲ್ಲ ಮುಳುಗಿಹೋಗಿ, ಸಮಸ್ತವೂ ಅಲ್ಲಿಗೇ ನಿಂತು ಬಿಟ್ಟು, ಸಭೆ ತನ್ನಿಂದ ತಾನೇ ವಿಸರ್ಜನೆಯಾಗಿ, ಸುಬ್ರಾಯಾಚಾರ್ರೂ ಇತರರೊಂದಿಗೆ ಹಿಂತಿರುಗಿ ಹೋದೊಡನೆ ನನ್ನಂಗಿ ಕಳಚಿಬಿಟ್ಟು ಮೇಷ್ಟ್ರು ಬೆನ್ನಿನ ಮೇಲೆ ಕಾಯಿಸಿಟ್ಟ ಬಾಸುಂಡೆಗಳ ನೆನಪು ಈಗಲೂ ಜುಂ ಎನಿಸುತ್ತದೆ. ಅದರ ನಂತರ ದೊಡ್ಡವ ನಾದ ಮೇಲೆ, ನಮ್ಮ ಪೇಟೇ ಕ್ಲಬ್ಬಿನಲ್ಲಿ ಸಾಯಂ ಕಾಲದ ಹೊತ್ತಿಗೆ ಮಾತನಾಡಿ ಮಾತನಾಡಿ, ಪೇಪರು ಗಳಲ್ಲಿ ಬಂದ ವರ್ತಮಾನಗಳನ್ನೆಲ್ಲಾ ಚರ್ಚಿಸಿ ಚರ್ಚಿಸಿ ಚೂರುಚೂರುಮಾಡಿ, ಎಷ್ಟೋ ಮಂದಿ ರಾಜರು ಗಳನ್ನು ಸ್ಥಾನಭ್ರಷ್ಟರನ್ನಾಗಿ ಮಾಡಿ, ಯಾರ್ಯಾರ ರಾಜ್ಯಗಳನ್ನು ಯಾವ್ಯಾವ ಕಾಕಪೋಕರಿಗೆ ಕೊಟ್ಟು ಬಿಟ್ಟು, ಸ್ವರಾಜ್ಯ ಸಂಪಾದನೆಗೆ ಉದ್ಯುಕ್ತರಾಗಿ ಬೇಕಷ್ಟು ವಾಗ್ಸಾಧನೆ ನಡಿಸಿ ಬೇಸತ್ತು, ಒಬ್ಬರು ದೊಡ್ಡ ಮೆಂಬರರು ದಣುವಾರಿಸಲೋ ಏನೋ "ಹರಿ ಹರೀ ವಾಸುದೇವಾ!" ಎನ್ನಲು,

"ಸರಿ ಸರೀ ಕಾಸು ಜೇವಾ!"

* ಸುಪರ್‌ವೈಜರರೋ ಎಂದು ಸಂದೇಹವಿದೆ.—ಸಂಪಾದಕ.

ಎಂಬ ಶಬ್ದಗಳು ನನ್ನ ಬಾಯನ್ನೊಡೆದೆಂಬಂತೆ ಹೊರಗೆ ಬಂದು ಬಿಟ್ಟ ತಪ್ಪಿಗೆ ಆ ಮಹಾನುಭಾವರು ನನ್ನನ್ನು ಕಂಡರೆ ಇಂದಿಗೂ ಸೊಟ್ಟಮೋರೆ ಮಾಡುತ್ತಾರೆ. ಇನ್ನೂ ಏನೇನು ಅನರ್ಥವಾಗಲಿಕ್ಕಿದೆಯೋ ದೇವರೇ ಬಲ್ಲ! ಇರಲಿ; ನಾನು ಹೇಳಹೊರಟದ್ದೇನೆಂದರೆ—ಪ್ರಾಸವೆಂದರೆ ನನಗೆ ಮೊದಲಿನಿಂದಲೂ ತುಂಬಾ ಪ್ರೀತಿಯಾದುದರಿಂದ

"ತಾನು ವಿದ್ಯೆಯು ಪಡೆದು"

ಎಂಬದನ್ನು ಕೇಳಿದೊಡನೆ, ನಾನು ತಡೆಯಲಾರದೆ

"ದೀನ ಪತಿ ಕೈ ಹಿಡಿದು"

ಎಂದು ಹೇಳಿ ಆದ್ಯಂತಕ್ಕೆರಡಕ್ಕೂ ಪ್ರಾಸಗಳನ್ನಿಟ್ಟು ಮೆರೆಯಲೆತ್ನಿಸಿದೆ. ಪರಂತು "ತಾನೊಂದೆಣಿಸಿದರೆ" ಇತ್ಯಾದಿ ಇದೆಯಲ್ಲಾ!

"ಏನೋ? ಪ್ರಾಸಕ್ಕೋಸ್ಕರ ನೇಣುಹಾಕಿಕೊಳ್ಳಬೇಕೇನು? ಸುಡು ಸುಡು ನಿನ್ನ ಪ್ರಾಸಾ; ಕೇಳ್ಳುಂದೆ.

"ತಾನುವಿದ್ಯೆಯು ಪಡೆದು, ಪತಿ ಮೂಢನಾದೊಡಂ,
ಮಾನವನು ಕಾಯ್ದುಕೊಳ್ವುದೆ ಲೋಕನ್ಯಾಯಂ!"

ನಾನು:—"ವಾಹ್ವಾ, ವಾಹ್ವಾ! ಒಂದುಸುರಿಗೆ ಲೋಕನ್ಯಾಯವೆಂದರೆ ಹೀಗಿರಬೇಕು, ಕಾಣಯ್ಯಾ. ಸರಿ; ಮತ್ತೆ?"

"ದೀನ ಗಂಡಸರೇಕೆ? ಅಡುಗೆಗಲ್ಲವೆ?—"

"ಜೋಕೆ! ಜೋಕೆ! ಗಂಡುಜನ್ಮಕ್ಕೇ ಪರಿಹಾಸ್ಯಮಾಡಬೇಡ! ನೀನೂ ಒಬ್ಬ ಗಂ—"

"ಏನೆಂದೆ? 'ಜೋಕೆ' ಅಂದೆಯೇನು? ಆ ಶಬ್ದಕ್ಕಲ್ಲವೇ ನಾನು ತಲೆಬಡಕೊಳ್ಳುತ್ತಾ ಇದ್ದದ್ದು? ಸರಿ; ಈಗ ಹೇಗಾಗುತ್ತೆ ನೋಡು:

"ದೀನ ಗಂಡಸರೇಕೆ ಅಡುಗೆಗಲ್ಲವೆ ಜೋಕೆ

"ಶಹಬಾಸ್! ಕವಿತಾಶಕ್ತಿಯ ಅಣುಗಳು ನಿನ್ನಲ್ಲಿಯೂ ಇವೆಯಲ್ಲೇನೋ? ನಿನ್ನ ಗಂಡಸುತನ ಮತ್ತೆಲ್ಲ ಒಂದು ಬದಿ ಕಟ್ಟಿಟ್ಟುಬಿಟ್ಟು ಕೇಳ್ಳುಂದೆ:

"ದೀನ ಗಂಡಸರೇಕೆ ಅಡುಗೆಗಲ್ಲವೆ ಜೋಕೆ
ಮಾನಿನಿಯು ತೆಗಳದಿರು ಸಲೆಕಲಿತ........"

"ಯಾರು? 'ಸಲೆಕಲಿತ' ಯಾರು ಹೇಳೋ—ಯಾರು?"

"ಮುದ್ದೂ" ಎಂದುಬಿಟ್ಟೆ. ಕಣ್ಣುತೂಕಡಿಕೆಯಿಂದ ಬೇರೊಂದೂ ಸೂಚಿಸಲೇ ಇಲ್ಲ.

"ಮುದ್ದಲ್ಲಾ. ಮುದ್ದೆ—ನೀನೊಂದು ಬಾಯಿ ಬಾರದ ತಲೆಯಿಲ್ಲದ ಅಜ್ಞಾನದ ಮುದ್ದೆ. ಶಬ್ದಗಳನ್ನು ಒಡೆದು ಬರುವಂತಿರುವ ಸುಲಭವಾದ ಪದವನ್ನು ಬಿಟ್ಟು ಮುದ್ದೆಂದೆ. ಇಷ್ಟೇಯೇನು ನಿನ್ನ ಕವಿತಾ ಶಕ್ತಿ?

"ದೀನ ಗಂಡಸರೇಕೆ ಅಡುಗೆಗಲ್ಲವೆ ಜೋಕೆ
ಮಾನಿನಿಯು ತೆಗಳದಿರು ಸಲೆಕಲಿತ ಸ್ತ್ರೀಯುಂ

"ಕೇಳಿದೆಯಾ?"

"ಸರಿ; ಸರಿ. ಬಲು ಸೊಗಸು; ಮತ್ತೆ? ಮುಗಿಯುತ್ತಾ ಬಂದಿರಬಹುದಲ್ಲವೇ? ಇನ್ನೊಂದು ಕಾಲರ್ಧ ಗಂಟೆಯೊಳಗೆ ಯುವಕ ಯುವತೀ ಮನೋರಂಜನ ಸಂಸ್ಥೆಯ ಇಂದಿನ ಸಭೆಗೆ ಅಧ್ಯಕ್ಷಸ್ಥಾನವನ್ನು ವಹಿಸುವುದಕ್ಕೆ ಹೋಗಬೇಕಾಗಿದೆ. ನಿನ್ನ ಕಾವ್ಯಶ್ರವಣವನ್ನು ಇನ್ನೊಂದು ದಿನಕ್ಕಿಡೋಣವೇ?"

'ಮುಗಿಯುತ್ತಾ ಬಂತು ಕಾಣೋ. ಇನ್ನು ಹೆಚ್ಚಿಲ್ಲಾ. ಅಗೋ—

"ಮನನವಾಚನಪಠನಗಳೊಳೆಲ್ಲ ಕೆಟ್ಟಿತೆಂ
ದೆನಬೇಡ ಸಕಲಗೃಹಧರ್ಮದಾ ಬಣ್ಣಂ
ಮನೆತನದಿ ಸುವಿವೇಕವೇನದರ ಪುರುಷಾರ್ಥ
ವನು ಸುಡ್ಯೆ ಒಣಹರಟೆಗಳ ಮಸಣಮಣ್ಣಂ
ವನಿತೆಯುನು—"

ಒಂಟೆತ್ತಿನ ಗಾಡಿಯಲ್ಲಿ ಕೂತುಕೊಂಡಿದ್ದವನ್ನು ಮೋಟರ್ ಬಂಡಿಯಲ್ಲಿ ಕೂತುಕೊಳಿಸಿದ ಹಾಗೆ ತೋರಿತು. ಪುನಃ ಗಡಿಯಾರದ ಕಡೆ ದೃಷ್ಟಿ!

"ವನಿತೆಯುನು ಜರೆಯದಿರು—

"ಎಂಥಾವಳು ಗೊತ್ತೋ?

"ವನಿತೆಯುನು ಜರೆಯದಿರು ಪುಸ್ತಕಪರಿಶ್ರಮದ
ಘನತೆಯಿಂ ಕಂಗೊಳಿಪ—

"ಏನು ಪದಸೌಂದರ್ಯ, ನಾದಮಾಧುರ್ಯ, ಅರ್ಥಗಾಂಭೀರ್ಯ! ಕೇಳು—"

ಮತ್ತೆ ಪುನಃ ಶುರುವಾಯಿತೋ ನಡುನಡುವಣ ಟೀಕೆ?

"ವನಿತೆಯನು ಜರೆಯದಿರು ಪುಸ್ತಕಪರಿಶ್ರಮದ
ಘನತೆಯಿಂ ಕಂಗೊಳಿಪ ಸಲೆಕಲಿತ ಹೆಣ್ಣಂ"

"ಭಲೇ! ಭಲೇ! ಏನಾರೋಹ? ಏನವರೋಹ! ಘನತೆಯಿಂದ ಕೂಡಿದ ವನಿತೆಯಿಂದಾ ಕಲಿತ ಹೆಣ್ಣಿಗೆ! ಹಿಮಾಚಲದ ಅತ್ಯುನ್ನತವಾದ ಗೌರೀಶಂಕರ ಶಿಖರಕ್ಕೇರಿಸಿ ಒಡನೆ ಶಾಂತಿಸಾಗರದ ಅತ್ಯಗಾಧವಾದ ಪಾತಾಳಕ್ಕೇ ನೂಕಿಬಿಟ್ಟಂತಾಯಿತು. ಏನು ಸೊಗಸು! ಏನುಸುರನ್ನೇ ಕಟ್ಟಿಬಿಡುವ ಬೆಡಗು!"

"ಅತ್ಯುನ್ನತ ಶಿಖರ—ಅತ್ಯಂತ ಅಗಾಧ, ಎಲ್ಲವೂ ಬರುತ್ತೆ ಕೇಳು."

ಬಾಣದ ಗುರಿ ತಪ್ಪಿಹೋಯಿತೆಂದಂದುಕೊಂಡೆ. ಇರಲಿ.

"ಬಾರೆ ಮೋಹದ ರಾಣಿ ಮುದ್ದು ರಸಿಕಳೆ ಜಾಣೆ
ಏರಿ ಪಾಂಡಿತ್ಯ ಶಿಖರಕ್ಕೆ—

"ಅಕೋ!—

"—ಕವಿಗೇಯೇ

ಸಾರ ಸಾಹಿತ್ಯ ಸಾಗರದಾಳವನ್ನಳೆದು
ಬೀರೆ ವಿದ್ಯೆಯು ಗೌರವವನಾದಿಮಾಯೇ
ಬೀರೆ ವಿದ್ಯೆಯು ಗೌರವವ ಮಹಾಮಾಯೇ.

"ಈ ಎರಡರೊಳಗೆ ಯಾವುದನ್ನಿಡಲಿ, ಯಾವುದನ್ನು ಬಿಡಲಿ ಎಂದಿನ್ನೂ ನಿರ್ಧರಮಾಡಿಲ್ಲ ನಾನು. ನಿನ್ನಿಂದಲೂ ಅದು ಫಕ್ಕನೆ ಆಗದು. ಆಲೋಚನೆಮಾಡುತ್ತಿರು. ಕೊನೆಗೆ ಮತ್ತೊಂದು ದಿನ ಹೇಳಿದರಾಯಿತು.

"ಬೀರೆ ವಿದ್ಯೆಯು ಗೌರವವನಾದಿಮಾಯೇ!
ಶಾರದಾಂಬೆಯು ಕಂಠಭೂಷಣೆ! ಸುಭಾಷಿಣಿಯೆ"

ನಾನು ಮಧ್ಯದಲ್ಲಿ—"ಹೇಗೆ ಬರುತ್ತವಣ್ಣಾ ಅಂತಹ ಬೆಡಗಿನ ಶಬ್ದಗಳೆಲ್ಲಾ ನಿನಗೆ? ನನಗೊಂದೂ ಬರದಲ್ಲಾ!"

"ಅದೇ ಶಾರದಾಂಬೆಯ ಅನುಗ್ರಹ ಬೇಕು, ಕಾಣೋ. ಅದನ್ನೆಲ್ಲಾ ಹುಟ್ಟುವಾಗಲೇ ದೇವರು ಬರೆದುಬಿಟ್ಟು ಕಳುಹಿಸುವುದಯ್ಯಾ!"

"ಸರಿ; ಸರಿ. ಅದೂ ಹಣೆಬರಹವೇ ಸರಿ. ಒಪ್ಪಿಕೊಂಡೆ. ಆಗಲಿ; ಮುಂದೆ?"

"ಶಾರದಾಂಬೆಯು ಕಂಠಭೂಷಣೆ! ಸುಭಾಷಿಣಿಯೆ!
ಚಾರು ಸುಖದಾಯೆ! ಸಲೆ—"

ನಾನು ಕಳೆದುಂಬಿ—"ಕಲಿತೆನ್ನ ತಾಯೇ!"

"ಛೀ ಮುಟ್ಠಾಳಾ! ಹೆಂಡತಿಯನ್ನು ತಾಯಿ ಮಾಡುತ್ತೀಯಾ, ತಾಯಿಗಂಡಾ?"

ನಾನು ನಿರುತ್ತರನಾದೆ. ನಾನು ಹೇಳಿದುದರಲ್ಲಿ ಹಾಗಾದುದೇನೋ ನಿಜವೆಂದು ತೋರಿತು. ಪ್ರಾಸಗಳ ಆಂದೋಳನದ ಭ್ರಮೆಯಲ್ಲಿ ಪ್ರಜ್ಞೆತಪ್ಪಿದವನಿಗೆ ಏನೇನೋ ಆಗಿಸಿತು. "ಈ ಪ್ರಾಸಗಳ ಹುಚ್ಚು ಯಾವಾಗ ತೊಲಗಿಹೋಗುವುದೋ!" ಎಂದು ಗಟ್ಟಿಯಾಗಿ ಹೇಳಿದೆ.

"ಛೀ ಮೂಢಾ! ಪ್ರಾಸಗಳನ್ನು ಹಳಿಯಬೇಡಾ. ಕುಣಿಯಲಾರದವನಿಗೆ ಅಂಗಳ ಡೊಂಕು ಎಂದ ಹಾಗೆ!

"ಉಸಿರಳಿದ ತನುವವೋಲ್ ಭಾ
ವಿಸಲುಂ ಪ್ರಾಸಿಲ್ಲದಿರ್ಪ ಪದಪದ್ಯಂಗಳ್.
ಒಸೆದದನು ಹೇಳಿ ಕೇಳಿದ
ರಸಿಕರ್ಗಾಯುಷ್ಯಮಾನಹಾನಿಗಳಕ್ಕುಂ!

"ಎಂದು ಹೇಳಿದ್ದಾನೆ ಕವಿ—ನಾನ್ನೂರು ವರ್ಷಗಳಿಗೂ ಹಿಂದೆಯೇ ಹೇಳಿಹೋಗಿದ್ದಾನೆ. ನಿನಗೆ ಪ್ರಾಸಕ್ಕೆ ಪ್ರಾಣಾಂತಿಕವಾದರೆ ನೀನು ಕಾವ್ಯಕ್ಕೆ ಕೈಹಚ್ಚಬೇಡಾ. ನೀನು ಕಾವ್ಯಾ ಬರೆಯಬೇಕೆಂದು ಯಾರೀಗ ತಲೆಬಡಕೊಂಡದ್ದು?

"ಚಾರು ಸುಖದಾಯೆ! ಸಲೆಕಲಿತ ಮನುಜಾಯೇ!

"ಗೊತ್ತಿರುವವರಿಗೆ ಅಷ್ಟು ಸುಲಭ—ಕಂಡೆಯಾ? ಕೇಳಿನ್ನೂ ಕೇಳು—ಇನ್ನು ಹೆಚ್ಚಿಲ್ಲಾ."

ಆಸೆಯ ಪುನರೋದಯ!

"ಮತ್ತೆ ಮಗುವನು ತೊಟ್ಟಿಲದೊಳಗಿಟ್ಟು ನಾನು
ತೂಗುತ್ತಲಿರೆ—

"ಸುಮ್ಮನೆ ಅಕ್ಷರಕ್ಕಕ್ಷರಾ ಜೋಡಿಸಿ ಶಬ್ದದ ಜೊತೆಗೆ ಶಬ್ದಾಯಿಟ್ಟು ನಡುನಡುವೆ—"

ತಿರಿಗಿ ಪ್ರಾರಂಭಾ ವ್ಯಾಖ್ಯಾನಕ್ಕೆ!

"—ಪ್ರಾಸಾಕ್ಷರಗಳನ್ನಿಷ್ಟು ಚಲ್ಲಿ ಬಿಟ್ಟರೆ, ಅಷ್ಟಕ್ಕೇ ಕಾವ್ಯವಾಗುವುದಿಲ್ಲವೆಂಬುದಕ್ಕೆ ಇದೊಂದು ದೃಷ್ಟಾಂತವಾಗಿದೆ. ಆ 'ನಾನು' ಎಂಬ ಶಬ್ದವನ್ನು

ಎಲ್ಲಿಟ್ಟರೆ ಅತ್ಯುತ್ತಮವೆಂಬ ಚಿಂತೆಯೇ ನನ್ನನ್ನು ಎರಡು ದಿನಗಳ ವರಿವಿಗೂ ಕಾಡಿತು. ಕೇಳು:

"ಮತ್ತೆ ನಾಂ ಮಗುವನ್ನು ತೊಟ್ಟಿಲೊಳಗಿಟ್ಟು ತೂ ಗುತ್ತಲಿರೆ—

"ಅಷ್ಟೇನೇ?

"ಮತ್ತೆ ಮಗುವನು ನಾನು ತೊಟ್ಟಿಲೊಳಗಿಟ್ಟು ತೂ ಗುತ್ತಲಿರೆ—

''ಅದೂ ಸಾಲದೆಂದು ತೋರಿತು.

"ಮತ್ತೆ ಮಗುವನು ತೊಟ್ಟಿಲೊಳಗಿಟ್ಟು ನಾ-ಅ-ಅ-ಆ-ನು ತೂಗುತ್ತಲಿರೆ—

''ಅದೀಗ ಅದರ ಸರಿಯಾದ ಸ್ಥಾನ!"

''ಭಾಪುರೇ, ಮಿತ್ರಾ! ಶಹಬಾಸ್! ಅದೊಂದೇ ಚರಣವನ್ನು ಬರೆದರೂ ಸಾಕಿತ್ತು. ನನ್ನ ಕೀರ್ತಿಗೆ. ಆ ಮೇಲೆ?"

"ನಾ—ಅ—ಅ—ಆ—ನು—ತೂ ಗುತ್ತಲಿರೆ ಹೊತ್ತಗೆಯ ಮೊತ್ತದ ಮಹಿಮೆಯಂ ಬಿತ್ತರಿಸಿ—"

''ಓಹೋ ಹೋ ಹೋ ಹೋ ಹೋ! ಏನ್ಚಂದ! ಏನು ಪ್ರಾಸಗಳು ಒಂದರ ಹಿಂದೊಂದು ನುಗ್ಗಿ ನುಗ್ಗಿ ಬರುವ ಸುಗ್ಗಿ! ನೀನೇ ಧನ್ಯನು!''

"ಬಿತ್ತರಿಸಿ ಮಗುವಿಗಲ್ಲದೆ ಜಗಕೆ ತಾಯೆನಿಸಿ
"ಇಲ್ಲಿ ಬರುತ್ತಾಳೆ ನೋಡು ತಾಯಿ!
"ಉತ್ತರೋತ್ತರ ಕೀರ್ತಿಗಳಿಸಿದುತ್ತಮೆಯುಂ
ಚಿತ್ತದಲಿ ನೆನೆದು ಸರ್ವೋತ್ತಮನ ವಂದಿಸುವೆ

''ಸರ್ವೋತ್ತಮನನ್ನು ವಂದಿಸಬೇಕೋ ಪುರುಷೋತ್ತಮನನ್ನು ವಂದಿಸಬೇಕೋ ಇನ್ನೂ ನಿಶ್ಚಯ ಮಾಡಿಲ್ಲ!

"ಚಿತ್ತದಲಿ ನೆನೆದು ಪುರುಷೋತ್ತಮನ ವಂದಿಸುವೆ
ನಿತ್ತು ಪೊರೆದುದಕೆನಗೆ ಸಲೆ ಕಲಿತ ರಮೆಯುಂ!"

ಎಂದು ಬಿಟ್ಟು ಕೂತಲ್ಲಿಂದ ಫಕ್ಕನೆದ್ದು ಕಣ್ಣುಗಳನ್ನು ಒಮ್ಮೆ ಗರಗರನೆ ತಿರುಗಿಸಿ ಮತ್ತೆ ಮುಚ್ಚಿ ತಟಸ್ಥನಾಗಿ ಸಮಾಧಿಗತನಾದಂತೆ ನಿಂತುಕೊಂಡುಬಿಟ್ಟನು. ಇಂತಹ ವಿಭೂತಿ ಪುರುಷನಿಗೆ ಹೆಂಡತಿ ಗುಲಾಮನಾದ್ದರಿಂದ ಹೆಂಡತಿಯ ಮೇಲೊಂದು ಪದ ಬರೆದನೆಂದು ಯಾರು ಹೇಳ್ಯಾರು!

ಹಾಗೇ ಹೋಗಿಬಿಟ್ಟನು. ಅವನು ನಮ್ಮ ಮನೇ ಬಿಟ್ಟು ನಾಲ್ಕೆಜ್ಜೆ ಹೋಗಿದ್ದಾನೋ ಇಲ್ಲವೋ ಎನ್ನುವಷ್ಟರಲ್ಲಿ ಯುವಕ ಯುವತೀ ಸಂಸ್ಥೆಯ ಜವಾನನು ನನ್ನ ಕೊಠಡಿಗೆ ಬಂದು ನೋಟೀಸೊಂದನ್ನು ಕೊಟ್ಟನು. ಅವನ ಮುಖ ನೋಡಿದ ಕೂಡಲೇ ನನಗೆ ತಲೆಯ ಮೇಲೆ ತಣ್ಣೀರು ಸುರಿಸಿದಂತಾಯಿತು. ಹಿಂದಿನ ಸಭೆಯಾಗಿ ಆರು ತಿಂಗಳಿಗೂ ಮೇಲಾದ್ದರಿಂದ ಮರು ದಿನಕ್ಕೆ ಚಿಕ್ಕಮನೆ ಗಂಗಾಧರಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಭೆ ಕೂಡತಕ್ಕದ್ದಿತ್ತೆಂದು ತಿಳಿದುಬಂತು! ಮನಸ್ಸಿನಲ್ಲಿ ಕಳವಳವುಂಟಾಗಿ ನಮ್ಮ ನಾರದಮುನಿಗಳ ಹೆಸರು ತೆಗೆದು ಜವಾನನೊಡನೆ ''ಅವರು ಸಿಕ್ಕಿದರೇನು?'' ಎಂದು ವಿಚಾರಿಸಿದೆನು.

''ಹೌದು ಸ್ವಾಮಿ! ಇಲ್ಲಿ ಸಿಕ್ಕದೆ ಇದ್ದರೆ ಇನ್ನೆಲ್ಲೆಲ್ಲಿ ಹುಡುಕಿಕೊಂಡು ಹೋಗಬೇಕಿತ್ತೋ. ಅವರು ಮನೆಯಲ್ಲಿರುವುದು ಇಲ್ಲವೇ ಇಲ್ಲವಷ್ಟೇ. ಇಲ್ಲೇ ತಮ್ಮ ಮನೆ ಬಾಗಿಲಲ್ಲೇ ಸಿಕ್ಕಿದರು. ಅವರಿಗೆ ಕೊಡತಕ್ಕ ಹೇಳಿಕೆ ಕಾಗದವನ್ನು ಇಲ್ಲೇ ಕೊಟ್ಟುಬಿಟ್ಟೆ'' ಎಂದನು.

ಅಂದಿನಿಂದ ನಮ್ಮೊಳಗೆ ನಿಂತುಹೋದ ಮಾತುಕಥೆ ಇಂದಿಗೂ ಇಲ್ಲ! ನನ್ನ ಪ್ರಾಪ್ತಿಯೇ ಹೀಗಾಯಿತಲ್ಲಾ. ಅಂದು ಪ್ರಾಸಕ್ಕೆ ಮರುಳಾಗಿ ಒಬ್ಬ ಮಿತ್ರನನ್ನು ಕಳಕೊಂಡೆ. ಇಂದು ಕಾವ್ಯಕ್ಕೆ ಮಂಕಾಗಿ ಇನ್ನೊಬ್ಬನನ್ನು ಹೋಗಲಾಡಿಸಿಕೊಂಡೆ.

ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ।
ತಸ್ಮಾತ್ ಕಾರುಣ್ಯಭಾವೇನ ರಕ್ಷರಕ್ಷೋ
ಜಗತ್ಪತೇ ॥



# ಎನ್ನ ಮುದ್ದಿನ ಗಿಣಿಯೆ!

ಲೇಖಕ:—ಶ್ರೀ। ಉಗ್ರಾಣ ಮಂಗೇಶರಾವ್, ಬೋರ್ಡ ಹೈಸ್ಕೂಲು, ಪುತ್ತೂರು.

ಎನ್ನ ಮುದ್ದಿನ ಗಿಣಿಯೆ! ಎನ್ನ ಸೊಬಗಿನ ಕಣಿಯೆ!
ಎನ್ನ ಭಾಗ್ಯದ ಸಿರಿಯೆ! ಚೆಲುವಿನ ಕುವರಿಯೆ!
ನಿನ್ನ ಜನನದ ದಿನಕೆ—(ಚೆನ್ನಾಯ್ತುಲೆಗೆ! ಮನಕೆ
ಸನ್ನುತವೆ? ತಡೆ ಮಗಳ ಈ ಕಿರುಕುಳಗಳ.) ॥ ೧ ॥

ಬಾರೆನ್ನ ಮನೆ ಬೆಳಗೆ! ಸಾರು ಬೇಗನೆ ಬಳಿಗೆ;
ತೋರು ನಿನ್ನಯ ಮೊಗವ; ಬೀರೆನಗೆ ಸೊಗವ.
ಮೀರಿಹುದು ಸುಖದಿಂದು—(ಯಾರೆ? ಬೇಗನೆ ಬಂದು
ನೀರಬಿಂದಿಗೆಯೆಳಕೊ! ಹೋ! ಕವಚಿದಳಕೊ!) ॥ ೨ ॥

ಕಂದ! ಜನನದ ದಿನದ ಸಂದ ನಿನ್ನಯ ಬಿನದ
ದಿಂದ ನಲವಾಂತುದೆದೆ; ಬಂದಪ್ಪು ಮುದದೆ.
ನಿಂದು ನೋಡುವುದೇಕೆ?—(ಮುಂದೋಡಿದಳು!—ಜೋಕೆ!)
ಸುಂದರಿಯೆ! ಪೋ ಪೋಗು! ಹಾಕಿದಳು ಲಾಗು!) ॥ ೩ ॥

ಮಗಳೆ! ಮಾಣಿಕಗೊಂಬೆ! ತೆಗೆದು ತಕ್ಕಿಸಿಕೊಂಬೆ!
ನಗುನಗುತ ಬಾರೆನ್ನ ಬಗೆಗೊಳಿಪ ರನ್ನ!
ಸಿಗಲಾರೆಯಾ ನನಗೆ?—(ನೆಗೆದಳಿದೊ ಕಿರುಮನೆಗೆ
ತೆಗೆದೆನ್ನ ಮಸಿಕುಡಿಕೆ! ಬೇಗವಳ ಹುಡುಕೆ!) ॥ ೪ ॥

ಪುಟ್ಟಮ್ಮ ನೀ ಮುತ್ತ ಕೊಟ್ಟೆನ್ನನಪ್ಪುತ್ತ,
ಹುಟ್ಟುದಿನದುಡುಗೊರೆಯ ಪಡೆಯಬಹುದರಿಯ!
ತಟ್ಟನಿಲ್ಲಿಗೆ ಬಾರೆ—(ಬೊಟ್ಟಿಟ್ಟವಳ ಮೋರೆ
ಸಿಟ್ಟಿಸಲೆ ಮಸದನ್ನೆ! ಮಸಿಗಾಯ್ತು ಸೊನ್ನೆ!) ॥ ೫ ॥

ಅಮ್ಮಣ್ಣಿ, ಬಾ; ನಿನ್ನ ಸೊಮ್ಮ ತಬ್ಬುವೆ, ಚಿನ್ನ!
ಸುಮ್ಮಾನವಹುದಿಂದು ಜನ್ಮದಿನವೆಂದು.
ಸಮ್ಮುಖಕೆ ಬಾ, ಪುರುಳೆ!—(ಸುಮ್ಮನಿರಳೀ ತರಳೆ:
ಗುಮ್ಮನೆಂದಿದೊ ಬಂದಳೇನದರ ಚಂದ!) ॥ ೬ ॥

ಕಡು ಬೆಡಗಿನೆಲೆ ಬಾಲೆ! ಇಡುವೆ ಮುತ್ತಿನ ಮಾಲೆ—
ಬಿಡೆನಿದಕೊ ಸಿಕ್ಕಿದಳು! ಮುತ್ತನಿಕ್ಕಿದಳು!
ಒಡನೆ ಮುದ್ದಾಡಿದೆನು—(ಮಡದಿಮಣಿ, ನೋಡಿದನು!
ಬೆಡಗಲ್ಲವೇ ಪೇಳೆ ಮುತ್ತಿನೀ ಮಾಲೆ?) ॥ ೭ ॥

# ಸರ್ವಂ ಕಾವ್ಯಮಯಂ ಜಗತ್

ಲೇಖಕ:—ಶ್ರೀ| ಉಗ್ರಾಣ ಮಂಗೇಶರಾವ್.

ಕಾವ್ಯವು ಸರಸ್ವತಿಯ ಪ್ರತ್ಯಕ್ಷರೂಪವು; ಕವಿಗಳು ಆ ದೇವಿಯ ಭಜಕರು. ಲಕ್ಷ್ಮಿ ತನ್ನನ್ನು ಭಕ್ತಿಯಿಂದ ಆರಾಧಿಸಿದವನನ್ನು ತ್ಯಜಿಸಿ ತನ್ನನ್ನು ಅಲಕ್ಷಿಸುತ್ತಿದ್ದವನನ್ನೆ ಸೇರುವಳೆಂದು ಹೆಸರುಗೊಂಡಿದ್ದಲ್ಲಿ, ಸರಸ್ವತಿಯಾದರೊ ತನಗೆ ಮನವನ್ನೊಪ್ಪಿಸಿದವನ ಕೈವಿಡಿದು ಆತನ ಹೃದಯಕಮಲದಲ್ಲೆ ವಾಸಿಸುವಳು. ಆಕೆಯ ಕಡೆಗಣ್ಣ ನೋಟದಿಂದಲೇ ಚಿತ್ತವು ನನೆಕೊನೆವೋಗಿ ಕವಿತಾಫಲವುಂಟಾಗುವುದೆಂದರೆ, ಆಕೆ ತಾನಾಗಿಯೇ ಮೆಚ್ಚಿ ವರಿಸಿದ ಕವಿಯ ಪುಣ್ಯವನ್ನೇನೆಂದು ಹೇಳಬಹುದು? ಆತನು ನೋಡಿದುದೇ ಕಾವ್ಯವು; ಆಡಿದುದೇ ಕವಿತೆ; ಹಾಡಿದುದೇ ಪದ್ಯವು! ಹಲವೇಕೆ? ಆತನೇ ವರಕವಿ!

ಜಗವು ವಿಷ್ಣುಮಯವೆಂದು ಯೋಗಿಗಳಾಡುವಂತೆ ವರಕವಿಗಳು ಈ ಜಗವು ಕಾವ್ಯಮಯವೆಂದು ನುಡಿಯಬಹುದು. ಪ್ರಹ್ಲಾದ ಮೊದಲಾದ ಭಗವದ್ಭಕ್ತರ ಪ್ರಭಾವದಿಂದ ಪರಮಾತ್ಮನು ಎಲ್ಲೆಲ್ಲಿಯೂ ಇರುವನೆಂಬುದನ್ನು ನಾವು ಮನಗಂಡಂತೆ ಕಾಳಿದಾಸಾದಿ ವರಕವಿಗಳ ಶಕ್ತಿಯಿಂದ ಕಾವ್ಯವು 'ಎಲ್ಲಿ ನೋಡಿದೊಡಲ್ಲಿ' ಇರುವುದೆಂಬುದನ್ನು ಗ್ರಹಿಸಬಹುದು. ಪರಂತು, ಯೋಗಿಗಳಿಗಲ್ಲದೆ ಮಿಕ್ಕವರಿಗೆ ಪರಮಾತ್ಮನು ಎಲ್ಲೆಲ್ಲಿಯೂ ಗೋಚರಿಸದಂತೆ, ವರಕವಿಗಳಿಗಲ್ಲದೆ ಇತರರಿಗೆ ಕಾವ್ಯವು ಎಲ್ಲೆಲ್ಲಿಯೂ ಕಾಣಿಸದು. ಪ್ರಕೃತಿಯಲ್ಲಿದ್ದೂ ಮಿಕ್ಕವರಿಗೆ ಕಾಣಿಸದ ಕಾವ್ಯಸೌಂದರ್ಯವನ್ನು ಲೋಕಕ್ಕೆ ಪ್ರಕಟಿಸುವುದೇ ಕವಿಯ ಕೆಲಸವಾದುದರಿಂದ 'ಕವಿ ಕಂಡುದನ್ನು ರವಿ ಕಾಣಲಿಲ್ಲ' ಎಂದು ಬಲ್ಲವರು ಆಡಿದರು. ಇತರರು ಚರ್ಮದೃಷ್ಟಿಯಿಂದ ನೋಡುವಾಗ ಕವಿಗಳು ಮರ್ಮದೃಷ್ಟಿಯಿಂದ ನೋಡುವರು. ಇಷ್ಟೇ ಅವರಿಗೂ ಇತರರಿಗೂ ಇರುವ ಭೇದ.

ಆ ಮರ್ಮದೃಷ್ಟಿಯು ಪೂರ್ವವಾಸನೆಯಿಂದಲ್ಲದೆ ಕೇವಲ ವಿದ್ಯಾಬಲದಿಂದ ಲಭಿಸದು. ''ಕಲಿಸಿದೊಡೇಂ ಬರ್ಕುಮೆ ಸಲ್ಲಲಿತ ಕವಿತ್ವಂ? ನಿಸರ್ಗಸುಭಗಂ.'' ಪುಣ್ಯೈಕಭಾಗಿಗಲ್ಲದೆ ಆ ದೃಷ್ಟಿ ಬಾರದು. ಅದು ಬಂದಲ್ಲದೆ ಕಾವ್ಯ ಶೋಭಿಸದು. "ಮಳೆಯಿಲ್ಲದೆ ಪೊಯ್ರ್ಮಾರಿಂ ಬೆಳಗುವೆ ಧರೆ?" ಎಂಬ ನಾಗವರ್ಮನ ಪ್ರಶ್ನೆ ನ್ಯಾಯವಾದುದು.

ಯೋಗಿಗಳು ಲೋಗರ ಚರ್ಮದೃಷ್ಟಿಗೆ ಗೋಚರನಾಗದ ಪರಮಾತ್ಮನನ್ನು ಅವರಿಗೆ ವೇದ್ಯವಾಗುವಂತೆ ಸಾಕಾರವಾಗಿ ವರ್ಣಿಸಿ, ಆ ಪರಮಾತ್ಮನ ಮೂರ್ತಿಗಳುಳ್ಳ ಮಂದಿರಗಳನ್ನು ಆಗಗೊಳಿಸಿದಂತೆ, ಇತರರ ಚಿತ್ತಕ್ಕೆ ಸ್ಫೂರ್ತಿಸದ ಕಾವ್ಯವನ್ನು ಕವಿತಾರೂಪವಾಗಿ ಕವಿಗಳು ಪ್ರತಿಷ್ಠಿಸಿದರು. ಅವರ ಶಕ್ತಿಯಾದರೊ ಅದ್ಭುತವು.—

ತನುವಿಲ್ಲದಲ್ಲಿ ಪ್ರಾಣ ಪ್ರತಿಷ್ಠೆಯು, ಕಟ್ಟಿ<br>
ಯನುಗೊಳಿಸದಾರು ರಸಸ್ಥಾಪನೆಯು, ಭಿತ್ತಿಯೊಂ<br>
ದಿನಿಸಿಲ್ಲದತಿ ಚಿತ್ರಮಂ, ರೂಪುದೋರದೆಡೆಯೊಳ್<br>
ಪಲವಲಂಕಾರಮಂ<br>
ಮನೆಯಿಲ್ಲದರ್ಥ ಸಂಚಿತವನುಂ, ಮೇರೆಯಿರ<br>
ದನುಪಮ ಕ್ರಿಯೆಗಳಂ ನಡೆಯಿಪ ಕವೀಶ್ವರರ<br>
ಘನತೆಯಂ ಬಣ್ಣಿಸುವರಾರ್?

ಪ್ರಾಣಪ್ರತಿಷ್ಠೆಯಂತಿರತಕ್ಕ ಸರಸ್ವತೀಸ್ಥಾಪನೆಯು ಕವಿತೆಯಲ್ಲಾಗದಿದ್ದರೆ, ತನ್ನ ಒಲವಿನಿಂದ ಸರಸ್ವತಿಯನ್ನು ಮೆಚ್ಚಿಸಿ ಕವಿತೆಯಲ್ಲಿ ಆಕೆಯ ಸಾನ್ನಿಧ್ಯವನ್ನುಂಟುಮಾಡದೆ, "ಶಾಸ್ತ್ರದ ಬಲದಿಂ ಕುದಿದು" ಕವಿತೆಯನ್ನು ಕಟ್ಟಿದರೆ, ನೋಡಿದವರ ಮನಕ್ಕೆ ಆನಂದಗೊಡುವ ಸುಂದರ ವಿಗ್ರಹವಿರದ ದೇವಾಲಯದಂತೆಯೂ ಜನವಿಲ್ಲದ ಗೃಹದಂತೆಯೂ ಪ್ರಾಣವಿಲ್ಲದ ದೇಹದಂತೆಯೂ ಆ ಕವಿತೆ ಶೂನ್ಯವಾಗಿ ಕಾಣುವುದು. ಮತ್ತು ಆ ಕವಿಯನ್ನು ಯಾರೂ ಹತ್ತಿರ ಬರಲೀಸರು; ಯಾತಕ್ಕೆಂದರೆ—

ಸರಸತಿಯನಬಲೆಯಂ ಗೋ<br>
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ

ಕ್ಕರಿಗನೆ? ಪಾತಕನಾತನೆ;
ಸರಸ್ವತೀ ದ್ರೋಹನವನನಾರ್ ಮುಟ್ಟುವರೋ?

ಎಂದು ನುಡಿದ ಕವಿರನ್ನನು ಅಂತಹವರ ಯೋಗ್ಯತೆಯನ್ನು ನಿಶ್ಚಯಿಸಿರುವನು.

ಆನಂದಸ್ವರೂಪನಾದ ಪರಮಾತ್ಮನ ಭಾವನೆಯಿಂದ ಯೋಗಿಗಳಿಗುಂಟಾಗುವ ಆನಂದವನ್ನೂ ಕವಿತಾಲಹರಿಗಳೊಳಗೋಲಾಡುವ ಕವಿಗಳ ಆನಂದವನ್ನೂ ಬರೆದು ತಿಳಿಸಲಸಾಧ್ಯವು. "ಮೂಗರು ಕಂಡ ಕನಸಿನಂತೆ ಮೆರೆವಾತ್ಮಯೋಗವನಾರಾಡಬಹುದು?"

ರಸಮುಂ ನಾಲಗೆ, ಕವಿತಾ
ರಸಮುಂ ಕವಿ. . . ಅಕ್ಷಯ ಸುಖ
ರಸಮುಂ ಪರಮಾತ್ಮನರಿವನುಳಿದವರರಿಯರ್

ಎಂದು ಮಹಾಕವಿಗಳು ಆಡಿರುವರಾದರೂ—"ಚಿತ್ತದೊಳೊರಲ್ದಿರ್ದರ್ಥಮಂ ಕೂಡೆ ನಾಲಗೆಯಿಂ ರಂಜಿಸಿ"

ಕವಿ ವಿಬುಧರ ಕಿವಿಯೊಳ್ ಸೂ
ಸುವ ನವರಸಮಿಳಿದು, ತೀವಿ ತನುವಂ ಮನವಂ
ಕವಿದು ಹೊರಸೂಸಿತೆನೆ ಪೊ
ಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ

ಎಂದು ಮತ್ತೊಬ್ಬ ಕವಿವರ್ಯನು ತಿಳಿಸಿರುವನು. ಅಂತಹ ಕಾವ್ಯ "ಕಮಲಾಕರದೊಳ್ ಸರಸ್ವತಿ ಮನೋಮುದದಿಂ ಜಲಕೇಳಿಯಾಡುವಳ್". ಮತ್ತು ಆ ಕಾವ್ಯವು

ಇನಿಯುಳ ಸೋಂಕಿನಂತೆ, ಪೊಸಮಾವಿನ ಪೂವಿನ ಜೊಂಪದಂತೆ, ಚಂ
ದನರಸದಣ್ಪಿನಂತೆ, ನನೆಯೇರಿದ ಮಲ್ಲಿಗೆಯುಂತೆ, ಪೂರ್ಣ ಚಂ
ದ್ರನ ಸಿರಿಯಂತೆ, ಬಂದೆಸೆವ ತೆಂಕಣ ತಂಬೆಲರಂತೆ

ವಾಚಕರ ಮನಸ್ಸನ್ನು ಸದಾ ಸೂರೆಗೊಳ್ಳುವುದು. ಅದಲ್ಲದೆ ಕವಿಯ ಅಂತರಂಗದ ಆನಂದತರಂಗವನ್ನು ವಾಚಕರ ಹೃದಯರಂಗಕ್ಕೆ ನೇರವಾಗಿ ಮುಟ್ಟಿಸುವುದು. ಆ ಆನಂದವನ್ನು ಮಾತ್ರ ಇತರರಿಗೆ ತಿಳಿಯೆ ಹೇಳಲಾಗದು. ವಾಚಕರಿಗೆ ಉಂಟಾದ ಆನಂದವೇ ಕವಿಗಾದ ಮೂಲಾನಂದದ ಒಂದು ತರಂಗವಾದರೆ, ಅದನ್ನು ಮತ್ತೊಬ್ಬನಿಗೆ ಮುಟ್ಟಿಸುವುದೆಂದರೆ ಹೇಗೆ ಸಾಧ್ಯವಾದೀತು? ಮಾತ್ರವಲ್ಲ—

ಕಡುಕಂಪಂ ಪಿಡಿಕೆಯ್ಸಲಕ್ಕುಮೆ? ಬಳಲ್ದೈತಂದ ತಂಗಾಳಿಯಂ
ಪಿಡಿಯಲ್ಬರ್ಕುಮೆ . . . . . . . . . . .
ನುಡಿಯಲ್ ಬಾರದಿಂತುಟಿ ವಲಂ ಕಾವ್ಯಾಮೃತಾಸ್ವಾದನಂ

ಎಂದು ಕವಿಕುಂಜರನು ಅದು ಆಗದೆಂದು ವಿವರಿಸಿರುವನು.

ಪರಮಾತ್ಮನನ್ನು ಯೋಗಿಗಳು ವಿವಿಧವಾಗಿ ವರ್ಣಿಸಿದಂತೆ, ಕಾವ್ಯವನ್ನು ಕವಿಗಳು ಬಗೆಬಗೆಯಾಗಿ ಬಣ್ಣಿಸಿರುವರು. "ಕವಿಭಾವ ಕೃತಾನೇಕ ಪ್ರವಿಭಾಗ ವಿವಿಕ್ತಸೂಕ್ತ ಮಾರ್ಗಂ", "ಜಗದೊಳ್ ಸನ್ನಿದಮಾದ ನಾಳ್ನುಡಿಗಳಂ ಛಂದಕ್ಕೆ ಬರ್ಪಂತೆ ನೆಟ್ಟಗೆ ಮಾತಾಡುವ ಬಲ್ಮೆ", "ಛಂದಕ್ಕಳವಟ್ಟ ನುಡಿ", "ಹೃದಯದ ಭಾಷೆ", "ಆಹ್ಲಾದವನ್ನು ಹುಟ್ಟಿಸುವ ಮಾತು", "ಕಾವ್ಯಂ ರಸಾತ್ಮಕಂ ವಾಕ್ಯಂ"—ಇತ್ಯಾದಿ ಅನೇಕ ವರ್ಣನೆಗಳಿದ್ದರೂ, ಅವೆಲ್ಲವೂ ಆಕಾಶದಿಂದ ಧರೆಗಿಳಿದು ಪ್ರವಹಿಸುವ ಬೇರೆ ಬೇರೆ ನದಿಗಳು ಒಂದೇ ಸಮುದ್ರವನ್ನು ಸೇರುವ ಹಾಗೆ, ಎಲ್ಲಾ ದೇವರ ವರ್ಣನೆಗಳೂ ಆ ಪರಮಾತ್ಮನನ್ನೆ ಹೊಂದುವ ಹಾಗೆ, ಆ ಪರಮ ಪೂಜ್ಯೆಯಾದ ಸರಸ್ವತಿಯನ್ನೆ ಸಾರುವುವು.

ಆದರೂ ರಸಾತ್ಮಕವಾದ ವಾಕ್ಯವು ಕಾವ್ಯವು ಎಂಬ ಮತವು ಹಲವು ಅನುಯಾಯಿಗಳಿಗೆ ಬಹಳವಾಗಿ ಮೆಚ್ಚುವುದು. ಯಾತಕ್ಕೆಂದರೆ ಆದಿಕವಿಯೆನಿಸಿದ ವಾಲ್ಮೀಕಿಮುನಿ ಕ್ರೌಂಚಪಕ್ಷಿಯ ಕಾತರಧ್ವನಿಗೆ ಕರುಣಾರಸಾರ್ದ್ರಹೃದಯನಾಗಿ ಆಡಿದ ನುಡಿಯೇ ಒಂದು ಛಂದವಾಗಿ ಪರಿಣಮಿಸಿತು. ಆದುದರಿಂದಲೆ ರಸಹೀನವಾದ ಕಾವ್ಯವು ಸುವಾಸನೆಯಿಲ್ಲದ ಪುಷ್ಪಕ್ಕೆ ಸಮಾನವೆಂದು ರಸಿಕರು ತಿಳಿಯುವರು. ರನ್ನನು—

ಕವಿ ಮಾರ್ಗದೊಳೊಳಪೊಕ್ಕುಂ
ನವರಸಮುಂ ತೆರೆಯೆ ನುಡಿದನೆನಿಸಿದ ಕವಿ ಸ
ತ್ಕವಿಯೆನಿಕುಂ. ಗೂಡಾರದ
ಕವಿಯಂತಿರೆ ಮುಚ್ಚಿ ಪೋದ ಕವಿಯುಂ ಕವಿಯೇ?

ಎಂದು ಪ್ರಶ್ನಿಸಿದುದರ ತಾತ್ಪರ್ಯವು ಬೇರೆಯಲ್ಲ.

ಮಕ್ಕಳ ನಗುವಿನಲ್ಲಿಯೂ ಅಳುವಿನಲ್ಲಿಯೂ, ಹಿರಿಯರ ಒಲವಿನಲ್ಲಿಯೂ ಮುನಿಸಿನಲ್ಲಿಯೂ, ಸಂಸಾರದ ಸುಖದಲ್ಲಿಯೂ ದುಃಖದಲ್ಲಿಯೂ, ಇಹ

ಲೋಕದ ಚಿಂತೆಯಲ್ಲಿಯೂ ಸಂತೋಷದಲ್ಲಿಯೂ ದ್ವಂದ್ವಾತೀತರಾದ ಯೋಗಿಗಳಂತೆ ಸಮದೃಷ್ಟಿಯಿಂದ ವರ್ತಿಸಿ, ಸುಖದೊಳಗಿನ ದುಃಖವನ್ನೂ ದುಃಖದೊಳಗಿನ ಸುಖವನ್ನೂ ಜನಸಮುದಾಯಕ್ಕೆ ತಿಳಿಯಪಡಿಸಿ, ಪರಮಸುಖದ ದಾರಿಯನ್ನು ಕಾಣಿಸುವ ಮಹಾಕವಿಯ ನವರಸಭರಿತವಾದ ಕಾವ್ಯವು— "ಮಾತುಮಾತಿಗೆ, ದಿನದಿನಕೆ, ಕ್ಷಣಕೆ, ನವ್ಯನೂತನ ಭಾವವ ತೋರ್ಪ" ಪರಮಾತ್ಮನಂತೆ ಚಿರಕಾಲ ರಸಿಕಜನಚಿತ್ತಾಹ್ಲಾದಕರವಾಗಿ ಮೆರೆಯುವುದು. ಅಂತಹ ಕಾವ್ಯವು ಅಮೂಲ್ಯವಾದುದು.

ಬೆಲೆಯಿಂದಕ್ಕುಮೆ ಕೃತಿ? ಗಾ
ವಿಲ! ಭುವನದ ಭಾಗ್ಯದಿಂದಮುಕ್ಕುಂ, ನೋಳ್ಪಂ
ಬೆಲೆಗೊಟ್ಟು ತಾರ ಮಧುವಂ,
ಮಲಯಾನಿಲನಂ, ಮನೋಜನಂ,
ಕೌಮುದಿಯಂ

ಎಂಬ ಮಾತು ನಿಜವಾದುದು.

ಆದುದರಿಂದ

ಮತಿ ಕೋಶಂ, ಪದವಿದ್ಯೆ ಕಂಠಿಕೆ, ಜಸಂ ಶ್ವೇತಾತಪತ್ರಂ, ಸರ
ಸ್ವತಿ ಮಾದೇವಿ, ಪದೋಕ್ತಿ ಭೇರಿ, ಕಳಿತಂ ಸಿಂಹಾಸನಂ, ಸಂದಲಂ
ಕೃತಿ ಚಂಚಚ್ಚಮರೀಜಮಾಗೆ, ಕವಿತಾ ಸಾಮ್ರಾಜ್ಯಮಂ ತಾಳ್ದಿದ

ಕವಿಚಕ್ರವರ್ತಿಗಳಿಗೆ ಆ ಕಾವ್ಯಗಳಿಗಾಗಿ ನಾವಾದರೂ ಏನು ಬೆಲೆಗೊಡುವೆವು? ಆದರೆ ನಾವು ಅವರ ಕಾವ್ಯಗಳನ್ನು ಓದಿ, ಅವರಿಗಾದ ಆನಂದವನ್ನು ಪಡೆದೆವೆಂದರೆ ಅವರಿಗೆ ಬಿರುದುಬಾವಲಿಗಳನ್ನು ಪಡೆದುದಕ್ಕಿಂತಲೂ ಹೆಚ್ಚಿನ ಆನಂದವಾಗುವುದು ನಿಶ್ಚಯವೆಂದು ಒಬ್ಬ ಮಹಾಕವಿ ಈ ರೀತಿ ತಿಳಿಸಿರುವನು:

ಅರಸರ್ ಕುಡುವಾ ಕಾರ್ತ
ಸ್ವರಕಂಕಣಮಿರ್ಕೆ, ಸರಸರಾಸ್ವಾದಿಸಿ ಕಾ
ವ್ಯರಸವ, ಸೂಸುವ ಸುಖಬಾ
ಷ್ಪರಾಶ್ರು ಕಂಕಣಮೆ ಕವಿಗೆ ಕಂಕಣಮಲ್ತೆ!

ಅಂತಹ ಮಹಾಕವಿಗಳು ಕನ್ನಡ ನಾಡಿನಲ್ಲಿ ಆಗಾಗ ಅವತರಿಸಲಿ!

---

# ಪರವಸ್ತ್ರ

(ಶ್ರೀ ರವೀಂದ್ರನಾಥ ಟಾಗೋರರವರ ಒಂದು ಕವಿತೆಯ ಅನುವಾದ.)

ಪರವಸ್ತ್ರಗಳ ಧರಿಸಿ, ಮೈಯೊಳೆಲ್ಲ ಗುಲಾಮ-
ಗಿರಿಯ ಮುದ್ರೆಯ ತೋರ್ಪುದೇನಹಂಕಾರಂ?
ಹೆರವರಾಧೀನತೆಯನರಿಪ ಲಾಂಛನದಿಂದ
ಹರಕು ಚಿಂದಿಯೆ ಮೇಲದುವೆ ಅಲಂಕಾರಂ!

ತಲೆಮಂಡೆಯನ್ನೇರಿ, ಸ್ವಪ್ರತಿಷ್ಠೆಯ ತೋರಿ,
ಕುಲಗೌರವವನಳಿಸಿ, ನಿನ್ನಯಾ ಟೋಪಿ
"ನಿಲಲೆನ್ನಡಿಯೊಳು ನೀನಲ್ಪರಾ ಸೋಂಕಿನಿಂ
ಸಲಹಿದುದು ನಾನಲ್ತೆ" ಯೆನುವುದಲೆ, ಪಾಪಿ?

ಒಡೆಯರಿಂ ಕಡಪಡೆದ ತೊಡಿಗೆಗಳ ತೊಡುತ ಗಡ
ಪೊಡಮಡುತ್ತಡಿಯಿಡಲು ತೊಡಗಿದೆಯ, ಮಡೆಯಾ?
ಕಡುಕೆಡುಕಿನೀ ವೇಷ ನಿನ್ನ ನಾಚಿಕೆಯ ನಾ-
ಲ್ಮಡಿ ಬೆಳೆಯಿಸದೆ, ಮೂಢ? ಜಡಭರಿತ! ಬಿಡೆಯಾ?

ಅಂಗವನ್ನೇರ್ದ ಪರವಸ್ತ್ರ ನಿನ್ನಭಿಮಾನ-
ಭಂಗ ಮಾಡುವುದಲ್ತೆ ನೋಡು, ದಿನದಿನಕೆ?
"ಮಂಗ! ಕೆಡಿಸದಿರೆನ್ನ! ನಿನ್ನ ಮೈದೊಗಲಿನು-
ತ್ತುಂಗ ನಾ"ನೆನ್ನುವುದು ನಿನ್ನವರ ಮನಕೆ!

ಯಮ್. ಅನಂತರಾವ್.

---



# ಕ್ರೋಡ ಕ್ಷೇತ್ರ ಮಹಿಮೆ.

ಲೇಖಕ:—ಶ್ರೀ ಯಂ. ಬಾಬು ಬಿ. ಎ. ಎಲ್. ಟಿ. ಟ್ರೈನಿಂಗಸ್ಕೂಲ್, ಮಂಗಳೂರು.



ಭಾರ್ಗವ ಸೃಷ್ಟಿಯಲ್ಲಿ ಪ್ರಸಿದ್ಧಿ ಪಡೆದ ಸಪ್ತ ಪುಣ್ಯಕ್ಷೇತ್ರಗಳಲ್ಲಿ ಕ್ರೋಡ ಕ್ಷೇತ್ರವು ಒಂದಾಗಿದ್ದು ಪುರಾಣೇತಿಹಾಸಗಳಲ್ಲಿ ಅನಾದಿಕಾಲದಿಂದ ಹೆಸರುಗೊಂಡ ಪವಿತ್ರ ಸ್ಥಳವಾಗಿರುತ್ತದೆ. ಕ್ರೋಡ ಋಷಿಯ ಘೋರ ತಪಸ್ಸಿಗೆ ಶ್ರೀ ಶಂಕರನಾರಾಯಣ ದೇವರು ಮೆಚ್ಚಿ, ಅವನಿಗೆ ಪ್ರಸನ್ನರಾಗಿ, ಅವನ ಮಹತ್ವಾಕಾಂಕ್ಷೆಯಂತೆ ಇಲ್ಲಿಯೇ ಉದ್ಭವಿಸಿದ ಕಾರಣದಿಂದಲೇ ಈ ಸ್ಥಳವನ್ನು ಜನರು ಕ್ರೋಡಕ್ಷೇತ್ರವೆಂದೂ ಶಂಕರನಾರಾಯಣವೆಂದೂ ಕರೆಯುವರು.

ಈ ಶಂಕರನಾರಾಯಣ ಪುಣ್ಯಕ್ಷೇತ್ರವು ಕುಂದಾಪುರ ತಾಲೂಕಿಗೆ ಸೇರಿದ ಮಹಾಮಹಿಮೆಯುಳ್ಳ ಸ್ಥಳವಾಗಿರುವುದರಿಂದ ನಮ್ಮ ಜಿಲ್ಲೆಯ ವಿವಿಧ ಭಾಗಗಳಿಂದಲೂ ನೆರೆಜಿಲ್ಲೆಗಳಿಂದಲೂ ಯಾತ್ರಿಕರು ಪ್ರತಿ ವರ್ಷ ಇಲ್ಲಿಗೆ ಬಂದು ದೇವರ ಸಂದರ್ಶನೆಯನ್ನು ಮಾಡಿ, ತಾವು ತಂದ ಹರಿಕೆಕಾಣಿಕೆಗಳನ್ನು ಸಮರ್ಪಿಸಿ ದೇವರ ಪ್ರಸಾದವನ್ನು ಪಡೆಯುವರು. ಇದು ಕುಂದಾಪುರದಿಂದ ಸುಮಾರು 15 ಮೈಲು ಪೂರ್ವದಿಕ್ಕಿನಲ್ಲಿ ಕಂಡಲೂರಿಗೂ ಕುಂದಾಪುರಕ್ಕೂ ಮಧ್ಯದಲ್ಲಿದೆ. ಇಲ್ಲಿಗೆ ದೋಣಿಯ ಮೂಲಕವಾಗಲಿ ರಸ್ತೆಯ ಮೂಲಕವಾಗಲಿ ಹೋಗಬಹುದು. ಇಲ್ಲಿಯವರು ಈ ಸ್ಥಳವನ್ನು ಸೌಡ ಶಂಕರನಾರಾಯಣವೆಂದೂ ಹೇಳುತ್ತಾರೆ.

ಕೆಲವು ವರ್ಷಗಳ ಹಿಂದೆ ನಾನು ಅಲ್ಲಿಗೆ ಹೋಗಿ, ಅಲ್ಲಿಯ ಸ್ಥಳಪುರಾಣದಿಂದ ಪ್ರಾಯಪ್ರಬುದ್ಧರಾದ ಮತ್ತು ಅನುಭವಶಾಲಿಗಳಾದ ಒಬ್ಬ ಅರ್ಚಕರಿಂದ ಕೇಳಿ ತಿಳಿದುಕೊಂಡ ಕೆಲವು ವಿಷಯಗಳನ್ನು ಈ ಕೆಳಗೆ ಉಲ್ಲೇಖಿಸಿರುವೆನು.

ಜನರಲ್ಲಿ ಕೆಲವರು ವಿಷ್ಣುವೇ ದೇವರುಗಳಲ್ಲಿ ಸರ್ವೋತ್ಕೃಷ್ಟನೆಂದೂ ಇನ್ನೂ ಕೆಲವರು ಶಿವನೇ ದೇವಾಧಿದೇವನೆಂದೂ ತಮ್ಮೊಳಗೆ ವಾದವಿವಾದಗಳನ್ನು ಮಾಡುತ್ತಾ, ಒಬ್ಬರು ಇನ್ನೊಬ್ಬರನ್ನು ಈ ಕಾರಣದಿಂದ ದೂಷಿಸುತ್ತಾ ದ್ವೇಷಿಸುತ್ತಾ ಇದ್ದುದರಿಂದ ಜನನಾಶವಾಗಿ ಲೋಕವು ಹಾಳಾಗುವುದನ್ನು ಕ್ರೋಡಋಷಿಯು ನೋಡಿ, ಮನನೊಂದು, ಜನರಲ್ಲಿ ಬೇರೂರಿಕೊಂಡಿದ್ದ ಈ ಭೇದಭಾವವನ್ನು ಕಿತ್ತು ಹಾಕಿ ಅವರಲ್ಲಿ ಪ್ರೇಮ ಮತ್ತು ಸೌಹಾರ್ದಭಾವಗಳನ್ನು ಬೆಳಸಿ, ಅವರು ಅನ್ಯೋನ್ಯರಾಗಿ ಜೀವಿಸುವಂತೆ ಮಾಡಬೇಕೆಂಬ ಸದುದ್ದೇಶದಿಂದ ಶಿವವಿಷ್ಣು ದೇವರುಗಳು ಭಿನ್ನಭಾವವಿಲ್ಲದೆ ಒಂದೇ ಸ್ಥಳದಲ್ಲಿ ಉದ್ಭವಿಸುವಂತೆ ತಾನು ಮಾಡಬೇಕೆಂದಾಲೋಚಿಸಿ, ದಕ್ಷಿಣ ಕನ್ನಡ ಜಿಲ್ಲೆಯ ವಾರಾಹಿ ಸೀತಾನದಿಗಳ ಮಧ್ಯದಲ್ಲಿರುವ ಪುಣ್ಯಕ್ಷೇತ್ರವು ಕ್ಷಿಪ್ರ ಸಿದ್ಧಿದಾಯಕವಾದ ಸುಸ್ಥಳವೆಂದು ತಿಳಿದು, ವಾರಾಹಿ ನದಿಯ ಹತ್ತಿರ ಸಹ್ಯ ಪರ್ವತದ ತಪ್ಪಲಲ್ಲಿರುವ ಪರ್ವತಶಿಖರದಲ್ಲಿ ನಿಂತು, ಕಠಿಣ ತಪಸ್ಸನ್ನು ಮಾಡಿದನು. ಅವನ ಭಕ್ತಿಗೆ ಶಿವನಾರಾಯಣ ದೇವರುಗಳು ಮೆಚ್ಚಿ, ತ್ರಿಶೂಲಚಕ್ರಗಳನ್ನು ದಕ್ಷಿಣೋತ್ತರ ಕರಗಳಲ್ಲಿ ಧರಿಸಿಕೊಂಡು, ಸರ್ವಾಂಗಗಳಲ್ಲಿ ದ್ವೈತಾದ್ವೈತ ಭಾವವನ್ನು ತೋರ್ಪಡಿಸಿ, ಕ್ರೋಡ ಋಷಿಗೆ ಪ್ರತ್ಯಕ್ಷರಾಗಿ ಮುನೀಶ್ವರನನ್ನು ನೋಡಿ—"ಎಲೈ ಋಷೀಶ್ವರನೇ, ಕೈಲಾಸ ವೈಕುಂಠಗಳ ಮುಖ್ಯ ಪ್ರಭಾವವನ್ನು ನೀನು ತಪಸ್ಸು ಮಾಡಿದ ಈ ಪುಣ್ಯ ಭೂಮಿಯಲ್ಲಿ ನಿನ್ನ ಮನೋರಥದಂತೆ ನಾವು ಏಕ ರೂಪದಿಂದ ಲೋಕೋದ್ಧಾರಾರ್ಥವಾಗಿ ತೋರ್ಪಡಿಸಿ ಇಲ್ಲಿ ಉದ್ಭವಿಸುವೆವು. ಈ ಸ್ಥಳವು ಕ್ರೋಡ ಕ್ಷೇತ್ರವಾಗಲಿ" ಎಂದು ವರವನ್ನು ಕೊಟ್ಟು ಅಂತರ್ಧಾನರಾದರು.

ಸ್ವಲ್ಪ ಸಮಯದನಂತರ ಜಂಭಾಸುರನ ಪುತ್ರರಾದ ಖರರಟ್ಟರೆಂಬಿಬ್ಬರು ರಾಕ್ಷಸರು ಘೋರ ತಪಸ್ಸಿನಿಂದ ಶಿವನನ್ನು ಒಲಿಸಲು, ಅವನು ಅವರಿಗೆ ಕಾಣಿಸಿಕೊಂಡಾಗ, ಅವರು ಅವನನ್ನು ಕುರಿತು—"ಸ್ವಾಮಿ,

ನಿನ್ನ ಒಂದು ಶಕ್ತಿಯು ಎರಡಾಗಿ, ಎರಡು ಐದಾಗಿ, ಐದು ಹತ್ತಾಗಿ, ಪುನಃ ಹಾಗೆಯೇ ಒಂದು ಶಕ್ತಿಯಾಗಿ ಪರಿಣಮಿಸುವಾಗ ನಮಗೆ ಮರಣ ಹೊರತು ಬೇರೆ ಯಾವ ವಿಧದಿಂದಲೂ ನಮಗೆ ಸಾವು ಬಾರದ ಹಾಗೆ ವರವನ್ನು ದಯಪಾಲಿಸು" ಎಂದು ಬೇಡಿಕೊಳ್ಳಲು, ಶಂಕರನು ಅದಕ್ಕೊಪ್ಪಿ ಅವರನ್ನು ನೋಡಿ—"ಬಾಲಕರೇ, ನೀವು ಯಾವಾಗಲೂ ನನ್ನ ಪೂಜಾಸಕ್ತರಾಗಿರಿ. ನಿಮ್ಮ ಆಚರಣೆಗೆ ಯಾವ ವಿಷಯದಲ್ಲಿಯೂ ಲೋಪಬಾರದಂತೆ ನಡೆದುಕೊಳ್ಳಿರಿ" ಎಂದು ಹೇಳಿ ಅದೃಶ್ಯನಾದನು.

ಈ ದೈತ್ಯಪುತ್ರರಾದ ಖರರಟ್ಟರು ಇಂದ್ರಾದಿ ದೇವತೆಗಳನ್ನೂ ಭೂಲೋಕದ ರಾಜರನ್ನೂ ಜಯಿಸಿ, ಏಕಚ್ಛತ್ರಾಧಿಪತಿಗಳಾಗಿ ಯಜ್ಞ ಯಾಗಾದಿಗಳ ಕಾಲದಲ್ಲಿ ದೇವತೆಗಳಿಗೆ ಸಲ್ಲತಕ್ಕ ಹವಿರ್ಭಾಗಗಳನ್ನು ಅವರಿಗೆ ಕೊಡಬಾರದೆಂದೂ ಅವುಗಳನ್ನು ತಮ್ಮ ಹೆಸರಿನಲ್ಲಿ ತಮಗೆ ಸಮರ್ಪಿಸಬೇಕೆಂದೂ ತಮ್ಮ ರಾಜ್ಯದಲ್ಲಿ ಎಲ್ಲೆಲ್ಲಿಯೂ ಕಟ್ಟುನಿಟ್ಟು ಮಾಡಿದರು. ಅಷ್ಟರಲ್ಲಿ ಅವರು ಪ್ರತಿನಿತ್ಯ ಮಾಡುತಿದ್ದ ಶಿವಾರ್ಚನೆಯ ಕಾರ್ಯಗಳನ್ನು ಕೂಡ ಸರಿಯಾಗಿ ಮಾಡಲಿಲ್ಲ.

ಈ ಕೆಳಗೆ ಕಾಣಿಸಿದಂತೆ ಐದು ಸ್ಥಳಗಳಲ್ಲಿ ಐವರು ಊರ್ಧ್ವರೇತಸ್ಕರಾದ ಮಹಾ ಋಷಿಗಳು ಶಂಕರನಾರಾಯಣ ದೇವರ ದ್ವೈತಾದ್ವೈತ ರೂಪವನ್ನು ಕುರಿತು ಕಠಿಣ ತಪಸ್ಸನ್ನು ಮಾಡುತ್ತಿರಲು, ಐದು ಸ್ಥಳಗಳಲ್ಲಿ ಹತ್ತು ರೂಪಗಳಾಗಿಯೂ, ಶೋಧಿಸಲು ಒಂದೇ ರೂಪವಾಗಿಯೂ, ಅಭೇದವಾಗಿ ಅವತರಿಸಿ ಲೋಕರಕ್ಷಣೆಯನ್ನು ಮಾಡುವೆನೆಂದು ದೇವರು ಕ್ರೋಡ ಋಷಿಗೆ ಮೊದಲೇ ವರವನ್ನು ಅನುಗ್ರಹಿಸಿದ್ದರು. ಅದರಂತೆಯೇ ಒಂದನೇದಾದ ವಾರಾಹಿ ತೀರದಲ್ಲಿ ಕ್ರೋಡ ಋಷಿಯು ಶಂಕರನಾರಾಯಣರೆಂಬೆರಡು ಶಕ್ತಿಗಳನ್ನೂ ಶಂಕರನಾರಾಯಣದ ಈಶಾನ್ಯ ದಿಕ್ಕಿನಲ್ಲಿ ಹೊಳೆ ಶಂಕರನಾರಾಯಣ ಎಂಬ ಸ್ಥಳದಲ್ಲಿ ವಾರಾಹಿ ನದಿಯ ಮೂಲದ ಹತ್ತಿರ ಹೊಳೆಯ ಮಧ್ಯ ಭಾಗದಲ್ಲಿ ಅಗಸ್ತ್ಯ ಋಷಿಯು ಅಘೋರ ಸಂಕರ್ಷಣ ಎಂಬೆರಡು ಶಕ್ತಿಗಳನ್ನೂ, ಅಲ್ಲಿಂದ ಶುದ್ಧ ದಕ್ಷಿಣಕ್ಕೆ ಈಗ ಅಮಾವಾಸೆ ಬೈಲೆಂದು ಹೇಳುವ ಸ್ಥಳದಲ್ಲಿ ವಿಮಲಾ ನದಿಯ ತೀರದಲ್ಲಿ ಮಾಂಡವ್ಯ ಋಷಿಯು ಪ್ರದ್ಯುಮ್ನ ಸದ್ಯೋಜಾತ ಎಂಬೆರಡು ಶಕ್ತಿಗಳನ್ನೂ, ಅಲ್ಲಿಂದ ಶುದ್ಧ ದಕ್ಷಿಣಕ್ಕಿರುವ ಬೆಳ್ವೆ ಎಂಬ ಸ್ಥಳದಲ್ಲಿ ಜಮದಗ್ನಿ ಋಷಿಯು ವಾಮದೇವ ಅನಿರುದ್ಧ ಎಂಬೆರಡು ಶಕ್ತಿಗಳನ್ನೂ, ಅಲ್ಲಿಂದ ಶುದ್ಧ ನೈಋತ್ಯಕ್ಕಿರುವ ಸೀತಾನದಿಯ ಉತ್ತರ ಭಾಗದಲ್ಲಿ ರೋಮಶ ಋಷಿಯು ತತ್ಪುರುಷ ವಾಸುದೇವ ಎಂಬೆರಡು ಶಕ್ತಿಗಳನ್ನೂ ಧ್ಯಾನಿಸುತ್ತಿರಲು, ಆಯಾ ಸ್ಥಳಗಳಲ್ಲಿ ಭೇದಾಭೇದ ಲಿಂಗರೂಪಗಳಾಗಿ ಶಂಕರನಾರಾಯಣ ದೇವರು ಅವತರಿಸಿದರು.

ಅಷ್ಟರಲ್ಲಿ ವಿಷ್ಣುವು ಮೋಹಿನಿಯೆಂಬ ಸ್ತ್ರೀ ರೂಪವನ್ನು ಧರಿಸಿ ಖರಾಸುರನ ಉಪವನದಲ್ಲಿ ಮನಮೋಹನಕರವಾದ ಗಾಯನವನ್ನು ಹಾಡಲು, ಅವನು ಮೋಹಪರವಶನಾಗಿ ಅವಳ ಬಳಿಗೆ ಬಂದು ತನ್ನ ಮನೋರಥವನ್ನು ಈಡೇರಿಸಬೇಕೆಂದು ಕೇಳಿಕೊಳ್ಳಲು, ಅವಳು ಅವನಿಗೆ—'ದೈತ್ಯೇಂದ್ರನೇ, ನನ್ನೊಂದಿಗೆ ಯುದ್ಧವನ್ನು ಮಾಡಿ ನನ್ನನ್ನು ಜಯಿಸಿದರೆ ನಾನು ನಿನ್ನ ಅಧೀನಳಾಗುವೆನು' ಎಂದು ಉತ್ತರವನ್ನು ಕೊಟ್ಟಳು.

ಖರರಟ್ಟರು ತಮ್ಮ ಬಲಸಹಿತ ಮೋಹಿನಿಯೊಂದಿಗೆ ಯುದ್ಧ ಮಾಡಲುದ್ಯುಕ್ತರಾಗಲು, ಶಿವ ವಿಷ್ಣುಗಳ ಹತ್ತು ಶಕ್ತಿಗಳು ದಾನವರ ಮುಂಭಾಗದಲ್ಲಿ ನಿಂತು ಯುದ್ಧ ಮಾಡುತ್ತಿರಲು, ದೈತ್ಯ ಸೈನ್ಯವೆಲ್ಲವೂ ಮಡಿದು ಹೋಗಲು, ಖರರಟ್ಟರು ದೇವರನ್ನು ಕುರಿತು—ಸ್ವಾಮಿಾ, ನೀವು ಹತ್ತು ಜನರು ನಮ್ಮಿಬ್ಬರೊಂದಿಗೆ ಕಾದಾಡುವುದು ನ್ಯಾಯವಲ್ಲ. ನಮ್ಮ ಬಲವೆಲ್ಲಾ ಅಳಿದು ಈಗ ನಾವಿಬ್ಬರು ಮಾತ್ರ ಉಳಿದಿರುವೆವು. ಹೀಗಿರುತ್ತಾ ನೀವಿಬ್ಬರು ನಮ್ಮಿಬ್ಬರೊಂದಿಗೆ ಕಾದಾಡುವುದು ವಿಹಿತ' ಎಂದು ಬೇಡಿಕೊಳ್ಳಲು, ಆಗ ದೇವರು—'ಹಾಗೆಯೇ ಆಗಲಿ. ಈಗ ನಿಮಗೆ ತೋರುವ ಹತ್ತು ಶಕ್ತಿಗಳನ್ನು ಮರೆಪಡಿಸಿ ಶಂಕರನಾರಾಯಣರೆಂಬೆರಡು ಶಕ್ತಿಗಳನ್ನು ಮಾತ್ರ ತೋರ್ಪಡಿಸುವೆನೆ'ಂದು ಹೇಳಿ, ಆ ಎರಡು ಶಕ್ತಿಗಳು ಮಾತ್ರ ಅವರ ಮುಂದೆ ನಿಂತು—'ಎಲೈ ದೈತ್ಯರೇ, ಈಗ ನೀವು ಇಬ್ಬರು ನಮ್ಮಿಬ್ಬರೊಂದಿಗೆ ಯುದ್ಧ ಮಾಡಿರಿ' ಎಂದು ಹೇಳಿ ಅವರೊಡನೆ ಯುದ್ಧ ಮಾಡಲು, ಖರಾಸುರನ ತಮ್ಮನಾದ ರಟ್ಟಾಸುರನು ಯುದ್ದದಲ್ಲಿ ಬಿದ್ದುಹೋಗಲು, ಅಣ್ಣನು ಈ ಎರಡು ಶಕ್ತಿಗಳನ್ನು ನೋಡಿ—'ನಾನು ಈಗ ಒಬ್ಬನೇ ಉಳಿದಿರುವೆನು. ನೀವಿಬ್ಬರು ನನ್ನೊಬ್ಬನೊಂದಿಗೆ ಕಾದಾಡುವುದು ಧರ್ಮವಲ್ಲ' ಎಂದು ಹೇಳಲು ದೇವರು—'ದೈತ್ಯರಾಜನೇ, ನಿನ್ನಿಷ್ಟವಿದ್ದಂತಾಗಲಿ. ಲೋಕದಲ್ಲಿ ಒಂದೆಂಬುದೇ ಪ್ರಸಿದ್ಧ; ಎರಡೆಂಬುದು ಅದರಲ್ಲಿ ಐಕ್ಯವಾಗಿರುವುದು. ಈ ಮರ್ಮವನ್ನು

ಈಗ ತೋರಿಸುವೆನೆಂದು ದೀಪದ್ವಯವು ಒಂದುಗೂಡಿದಂತೆ ವಿಷ್ಣು — ಶಿವಶಕ್ತಿಗಳೊಂದಾಗಿ, ಬಲಭಾಗದಲ್ಲಿ ತ್ರಿಶೂಲವೂ ವಾಮ ಭಾಗದಲ್ಲಿ ಸುದರ್ಶನ ಚಕ್ರವೂ, ಇಡೀ ದೇಹದ ಬಲಭಾಗವು ನಖಶಿಖಾಂತ ಶಿವರೂಪವಾಗಿಯೂ, ವಾಮಭಾಗವು ವಿಷ್ಣುರೂಪವಾಗಿಯೂ ತೋರಿಸಿಕೊಂಡು, ನೋಡುವ ಜನರ ಚರ್ಮ ಚಕ್ಷುಗಳಿಗೆ ಎರಡೂ ನಿಜವಾಗಿ ಕಾಣುವಂತೆಯೂ, ಶೋಧಿಸಲು ದೇವರೊಬ್ಬನೇ ಎಂಬ ತತ್ವವು ಸ್ಪಷ್ಟವಾಗುವಂತೆಯೂ, ಶಂಕರನಾರಾಯಣ ದೇವರು ತ್ರಿಶೂಲ ಚಕ್ರಾಯುಧಗಳಿಂದ ಖರಾಸುರನನ್ನು ಯುದ್ಧದಲ್ಲಿ ಸಂಹರಿಸಲು, ಸುರರು ದೇವರ ಮಸ್ತಕದ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ಋಷಿಗಳು 'ಜಯ ಜಯ' ಎಂದು ದೇವರ ಸ್ತೋತ್ರವನ್ನು ಮಾಡಿದರು.

ಆಗ ದೇವಾಧಿದೇವನು ಮುನೀಶ್ವರರನ್ನು ಕುರಿತು—'ಎಲೈ ಋಷಿಗಳಿರಾ, ಶಿವವಿಷ್ಣು ಶಕ್ತಿ ದ್ವಯವು ನಿಮ್ಮೆಲ್ಲರ ಇಷ್ಟದಂತೆ ಇಲ್ಲಿ ಒಟ್ಟುಕೂಡಿ ಆವಿರ್ಭವಿಸಿದ ಈ ದಿನದಲ್ಲಿ ನಮ್ಮ ಅಭೇದರೂಪಗಳನ್ನು ಯಾರು ದರ್ಶನ ಪೂಜಾದ್ಯುತ್ಸವಗಳನ್ನು ಮಾಡುತ್ತಾರೋ ಅವರ ಅನಿಷ್ಟ ನಿವೃತ್ತಿಯಾಗಿ ಇಷ್ಟ ಸಿದ್ಧಿಯಾಗಲಿ. ಅವರಿಗೆ ಪುನರ್ಜನ್ಮದ ಬಾಧೆಯು ತಟ್ಟಲಾರದು. ನೀವಿಲ್ಲಿ ನಿರಾತಂಕವಾಗಿ ನಮ್ಮ ಧ್ಯಾನ ಮಾಡುತ್ತಾ ಸುಖದಿಂದಿರಿ' ಎಂದು ಹೇಳಿ, ಕ್ರೋಡ ಋಷಿಯನ್ನು ಕುರಿತು—'ಎಲೈ ಋಷಿಯೇ, ನೀನು ತಪಸ್ಸು ಮಾಡಿದ ಈ ಶಂಕರನಾರಾಯಣ ಕ್ಷೇತ್ರವು ಪವಿತ್ರ ಪುಣ್ಯಭೂಮಿಯಾಗಲಿ. ಕೈಲಾಸ ವೈಕುಂಠಗಳ ಪೂರ್ಣ ಶಕ್ತಿಯು ಇಲ್ಲಿ ನೆಲೆಗೊಳ್ಳಲಿ. ನೀನು ಕಮಂಡಲವಿಟ್ಟ ಸ್ಥಳವು ಕ್ರೋಡ ತೀರ್ಥವಾಗಲಿ. ಇಲ್ಲಿ ಸ್ನಾನ ಮಾಡಿದವರ ಪಾಪವು ಪರಿಹಾರವಾಗಲಿ. ಯುದ್ಧದಿಂದುಂಟಾದ ಕೊಳೆ ಕಶ್ಮಲವನ್ನು ನಿವೃತ್ತಿಪಡಿಸಲೋಸುಗ ನಾವು ತ್ರಿಶೂಲ ಚಕ್ರಗಳಿಂದ ರಚಿಸಿದ ಈ ತೀರ್ಥವು ಕೋಟಿತೀರ್ಥವಾಗಲಿ. ನಾವು ಅವತರಿಸಿದ ಸ್ಥಳದ ಉದಕವು ಸಿದ್ಧಾಮೃತವೆಂಬ ಮಹಾ ಪುಣ್ಯತೀರ್ಥವಾಗಲಿ. ಈ ತೀರ್ಥಗಳಲ್ಲಿ ಸ್ನಾನ ಮಾಡಿ ನಮ್ಮ ಅಭೇದವಾದ ಲಿಂಗಗಳನ್ನರ್ಚಿಸಿ ಉತ್ಸವಾದಿಗಳನ್ನು ಯಾರು ಮಾಡುವರೋ ಅಂಥವರು ನಿರಂತರ ಸುಖಭೋಗಗಳನ್ನು ಪಡೆಯಲಿ. ಈ ಕ್ಷೇತ್ರ ದರ್ಶನ ಸೇವಾದಿಗಳಿಂದ ಭಜಕರ ಮನೋರಥವು ಕೈಗೂಡಲಿ' ಎಂದು ವರಗಳನ್ನು ಕೊಟ್ಟನು.

## ಆದಿಶಂಕರ ನಾರಾಯಣ.

ಶಂಕರನಾರಾಯಣ ದೇವರು ಮೊದಲು ಗುಡ್ಡದ ಮೇಲೆ ಉದ್ಭವಿಸಿದುದರಿಂದ ಜನರು ಆ ಸ್ಥಳವನ್ನು ಆದಿ ಶಂಕರನಾರಾಯಣವೆಂದು ಕರೆಯುತ್ತಾರೆ. ಈಗ ದೇವಸ್ಥಾನವಿರುವ ಸ್ಥಳದಲ್ಲಿ ದೇವರು ಅನಂತರ ಉದ್ಭವಿಸಿದರು. ಆದಿಶಂಕರನಾರಾಯಣದಲ್ಲಿರುವ ಒಂದು ಗುಡಿಯೊಳಗೆ ಶಂಕರನಾರಾಯಣ ದೇವರ ಎರಡು ಕಲ್ಲಿನ ವಿಗ್ರಹಗಳೂ, ಈ ಗುಡಿಯ ಹತ್ತಿರ ಕ್ರೋಡ ಋಷಿಗಳು ತಪಸ್ಸುಮಾಡಿದ ಗುಹೆಯೂ ಉಂಟೆಂದು ಇಲ್ಲಿಯವರು ನನಗೆ ಹೇಳಿದರು.

## ಕ್ರೋಡ ತೀರ್ಥ.

ಗುಡ್ಡದ ಕೆಳಗೆ ಮಾರ್ಗದ ಬದಿಯಲ್ಲಿ ಒಂದು ಕೆರೆಯು ಇದೆ. ಇಲ್ಲಿ ಮೊದಲು ಕ್ರೋಡ ಋಷಿಯು ಕಮಂಡಲವನ್ನಿಟ್ಟಿದ್ದುದರಿಂದ ಶಂಕರನಾರಾಯಣ ದೇವರು ಈ ಸ್ಥಳವನ್ನು ಕುಂಡಿಕೆಯಾಗಿ ಮಾರ್ಪಡಿಸಿ, ಅದನ್ನು ಕ್ರೋಡತೀರ್ಥವೆಂದು ಕರೆದರು. ಇದರಲ್ಲಿ 12 ತಿಂಗಳಲ್ಲಿಯೂ ಕಟಿಪ್ರಮಾಣ ನೀರು ಉಂಟೆಂದು ಹೇಳುತ್ತಾರೆ.

## ಕೋಟಿ ತೀರ್ಥ.

ಶಂಕರನಾರಾಯಣ ದೇವಸ್ಥಾನದ ಹತ್ತಿರ ಕೋಟಿ ತೀರ್ಥವಿದೆ. ಶಂಕರನಾರಾಯಣ ದೇವರು ಖರರಟ್ಟರೆಂಬ ಸುರರನ್ನು ವಧಿಸಿ ಅನಂತರ ತಮ್ಮ ಕೈಯಲ್ಲಿದ್ದ ತ್ರಿಶೂಲ ಚಕ್ರಗಳಿಂದ ಅಗೆದು ಒಂದು ಕುಂಡಿಕೆಯನ್ನು ಮಾಡಿ, ಅದರಲ್ಲಿ ದೇಹಶುದ್ಧ್ಯರ್ಥವಾಗಿ ಸ್ನಾನಮಾಡಿ, ಅದಕ್ಕೆ ಕೋಟಿ ತೀರ್ಥವೆಂದು ಹೆಸರು ಕೊಟ್ಟರು.

ಗುಡ್ಡದ ಮೇಲೆ ಮೊದಲು ಉದ್ಭವಿಸಿದ ಇಲ್ಲಿಯ ದೇವರು ಕೆಲವು ವರ್ಷಗಳ ತರುವಾಯ ಈಗ ದೇವಸ್ಥಾನವಿರುವ ತಗ್ಗಿನಲ್ಲಿ ಯಾಕೆ ಅವತರಿಸಿದರೆಂಬ ವಿಷಯದಲ್ಲಿ ಇಲ್ಲಿಯವರು ಹೀಗೆ ಹೇಳುವರು:—

"ಶಂಕರನಾರಾಯಣ ದೇವರು ಮೊದಲು ಗುಡ್ಡದ ಮೇಲೆ ಉದ್ಭವಿಸಿದರು. ಅಲ್ಲಿ ದೇವರಿಗೆ ಗುಡಿ ಕಟ್ಟಿ ಅವರನ್ನು ಪೂಜಿಸುತ್ತಾ ಬರುತಿದ್ದರು. ಆಗ ಮುದಿ ಬ್ರಾಹ್ಮಣ ಅರ್ಚಕನೊಬ್ಬನು ಪೂಜೆ ಮಾಡುತಿದ್ದನು. ಅವನು ಪ್ರತಿನಿತ್ಯವೂ ದೇವರ ಅಭಿಷೇಕಕ್ಕೆ ತಗ್ಗಿನಿಂದ ನೀರನ್ನು ಹೊತ್ತುಕೊಂಡು ಗುಡ್ಡವನ್ನು ಬಹಳ ಪ್ರಯಾಸದಿಂದ ಹತ್ತಿ ದೇವರ ಪೂಜಾಭಿಷೇಕಗಳನ್ನು ಮಾಡಿ ಬರುತಿದ್ದನು. ಒಮ್ಮೆ

ಅವನು ದೇವರನ್ನು ಕುರಿತು—'ಸ್ವಾಮಿ, ನಾನೀಗ ತೀರಾ ಮುದುಕನಾಗಿರುವೆನು. ನನಗೆ ಮೈಯಲ್ಲಿ ಶಕ್ತಿಯಿಲ್ಲದಿರುವುದರಿಂದ ಅಭಿಷೇಕಕ್ಕೆ ನೀರನ್ನು ಹೊತ್ತುಕೊಂಡು ಕಡಿದಾದ ಗುಡ್ಡದ ಬದಿಯನ್ನು ಹತ್ತಿಕೊಂಡು ಹೋಗಲಿಕ್ಕೆ ಸಾಧ್ಯವಿಲ್ಲ. ನೀನು ನನ್ನ ಮೇಲೆ ಕೃಪೆಯಿಟ್ಟು ತಗ್ಗಿನಲ್ಲಿ ಉದ್ಭವಿಸಿದರೆ ನನಗೆ ದೊಡ್ಡ ಉಪಕಾರವಾಗುತಿತ್ತು' ಎಂದು ದೈನ್ಯ ಭಾವದಿಂದ ಬೇಡಿಕೊಂಡನು. ಆಗ ದೇವರು ಅವನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು — 'ಅರ್ಚಕನೇ, ನಿನ್ನ ಇಷ್ಟವಿದ್ದಂತಾಗಲಿ. ನಾನೆಲ್ಲಿ ಉದ್ಭವಿಸಬೇಕೆಂದು ನೀನಿಚ್ಚಿಸುತ್ತಿಯೋ ಅಲ್ಲಿ ಎರಡು ಹೊಸ ಮಡಿಕೆಗಳನ್ನು ತಂದು ನೆಲದಲ್ಲಿ ಹೂತಿಟ್ಟು, ಅವುಗಳನ್ನು 8ನೇ ದಿವಸ ದಲ್ಲಿ ತೆಗೆದುನೋಡಿದರೆ ಅಲ್ಲಿ ನಾನು ಉದ್ಭವಿಸುವೆನು' ಎಂದು ಹೇಳಿದರು. ಅವನು ದೇವರು ಹೇಳಿದಂತೆ ಎರಡು ಹೊಸ ಮಡಿಕೆಗಳನ್ನು ತಂದು ಈಗ ಇರುವ ದೇವಸ್ಥಾನದ ಗರ್ಭಗೃಹವಿರುವ ಸ್ಥಳದ ನೆಲದಲ್ಲಿ ಹೂಳಿಟ್ಟು, ಕೆಲವು ದಿವಸಗಳ ನಂತರ ಅವುಗಳನ್ನು ತೆಗೆದು ನೋಡಲು ಅಲ್ಲಿ ದೇವರು ಉದ್ಭವಿಸಿದ್ದರು."

## ಶಂಕರನಾರಾಯಣ ದೇವಸ್ಥಾನ.

ಈ ದೇವಸ್ಥಾನವು ಕೆರೆಯ ಮೇಲೆ ಕಟ್ಟಲ್ಪಟ್ಟ ಸುಂದರವಾದ ದೇವಮಂದಿರವಾಗಿರುತ್ತದೆ. ಅದರ ನಾಲ್ಕು ಸುತ್ತಲಿನ ಅಂಗಳದ ನೆಲಕ್ಕೆ ಶಿಲೆಗಳನ್ನು ಹಾಸಿರುತ್ತಾರೆ. ಕೆರೆಯ ನೀರು ಹಾಸುಕಲ್ಲುಗಳ ಮಧ್ಯ ದಲ್ಲಿರುವ ಬಿರುಕುಗಳ ಮೂಲಕ ದೇವಸ್ಥಾನದ ಅಂಗಳ ದೊಳಗೆ ಒಸರುತ್ತದೆ. ಗುಡ್ಡದ ಮೇಲಿನಿಂದ ನೀರಿನ ಒರ ತೆಯು ದೇವಸ್ಥಾನದ ಗರ್ಭಗೃಹದ ಒಳಗಿರುವ ನೀರಿನ ಕುಂಡದೊಳಗೆ ಹರಿಯುತ್ತದೆಂದು ಹೇಳುತ್ತಾರೆ.

ಗರ್ಭಗೃಹದೊಳಗೆ ಉದ್ಭವ ಶಂಕರನಾರಾಯಣ ದೇವರೂ ದೇವಸ್ಥಾನದ ಹೊರಸುತ್ತುಗಳಲ್ಲಿ ಶಂಕರ ನಾರಾಯಣ ದೇವರ ವಿಗ್ರಹವೂ, ಪಾರ್ಥೇಶ್ವರ ಲಿಂಗವೂ, ಗೋಪಾಲಕೃಷ್ಣ, ಸುಬ್ರಹ್ಮಣ್ಯ, ಗೌರಿ, ಲಕ್ಷ್ಮೀದೇವಿಯರ ಕಲ್ಲಿನ ಪ್ರತಿಮೆಗಳೂ, ಐದು ಮುಖ ಗಳುಳ್ಳ ಮುಖ್ಯಪ್ರಾಣ ದೇವರ ಮರದ ವಿಗ್ರಹವೂ ಇವೆ ಎಂದೂ, ನಗರದ ಅರಸರು ಈ ದೇವಸ್ಥಾನಕ್ಕೆ ಮೊದಲು ಒಂದು ಬಹಳ ಸುಂದರವಾದ ಓಲಗ ಮಂಟಪವನ್ನೂ ಒಂದು ಗಂಟೆಯನ್ನೂ ಉಚಿತವಾಗಿ ಕೊಟ್ಟಿರುವರೆಂದೂ, ಅವು ಈಗಲೂ ಇಲ್ಲಿ ಇರುವು ವೆಂದೂ ಇಲ್ಲಿಯವರು ಹೇಳುವರು. ಶಾಲಿವಾಹನ ಶಕ 1485ರಲ್ಲಿ ವಿಜಯನಗರದ ಕೃಷ್ಣರಾಜರು ಬಾರ ಕೂರು-ಮಂಗಳೂರು ಪ್ರಾಂತ್ಯದ ಒಡೆಯರ ಮೂಲಕ ವಾಗಿ ಈ ದೇವಸ್ಥಾನಕ್ಕೆ ಬಿಟ್ಟ ಉತ್ತಾರ ಉಂಬಳಿ ಗಳ ವಿವರವು ಈ ದೇವಸ್ಥಾನದ ಹೊರಸುತ್ತಿನಲ್ಲಿರುವ ಒಂದು ಶಿಲಾಶಾಸನದಿಂದ ತಿಳಿದು ಬರುತ್ತದೆ.

## ಶಂಕರನಾರಾಯಣ ದೇವಸ್ಥಾನದ ದೊಡ್ಡ ಗಂಟೆ.

ಈ ದೇವಸ್ಥಾನದ ಎದುರಿನ ಚಾವಡಿಯಲ್ಲಿ ಕಂಚಿನ ಒಂದು ದೊಡ್ಡ ಗಂಟೆಯನ್ನು ತೂಗಾಡಿ ಸಿರುವರು. ಇದರಷ್ಟು ದೊಡ್ಡ ಗಂಟೆಯು ಬೇರೆ ಎಲ್ಲಿಯೂ ಇಲ್ಲನೆಂದು ಹೇಳಬಹುದು. ಈ ಗಂಟೆಯ ಹೊರಮೈಯಲ್ಲಿ 1743 ಎಂಬ ಅಂಕೆಗಳು ಕಾಣು ತ್ತವೆ. ಈ ಗಂಟೆಯ ಹೊರಭಾಗದ ಎರಡು ಬದಿ ಗಳಲ್ಲಿ ಎರಡು ಪ್ರತಿಮೆಗಳು ಕಾಣುತ್ತವೆ. ಈ ಗಂಟೆಯ ಶಬ್ದವು ಕಂಡಲೂರು ಎಂದರೆ ಸುಮಾರು 7 ಮೈಲು ದೂರದ ವರೆಗೆ ಕೇಳುತ್ತದೆಂದು ಇಲ್ಲಿ ಯವರು ಹೇಳುತ್ತಾರೆ. ಗಂಟೆಯ ಮೇಲೆ ಬರೆದ ಅಕ್ಷರಗಳನ್ನು ಓದಲಿಕ್ಕಾಗುವುದಿಲ್ಲ. ಅವು ಕನ್ನಡ ಅಥವಾ ಇಂಗ್ಲಿಷು ಬರಹಗಳಲ್ಲ.

ಶಂಕರನಾರಾಯಣ ದೇವರು ಖರರಟ್ಟರನ್ನು ಕೊಂದು ಇಲ್ಲಿ ಮೊದಲು ತಪಸ್ಸು ಮಾಡಿಕೊಂಡಿದ್ದ ಕ್ರೋಡ ಋಷಿಗೆ ವರವನ್ನು ಕೊಟ್ಟ ದಿವಸವಾದ ಮಕರ ಸಂಕ್ರಮಣದ 2ನೇ ದಿನ ಇಲ್ಲಿ ಪ್ರತಿ ವರ್ಷ ರಥೋತ್ಸವವು ಬಹಳ ವಿಜೃಂಭಣೆಯಿಂದ ಜರಗುತ್ತ ದೆಂದು ಇಲ್ಲಿಯವರು ಹೇಳುತ್ತಾರೆ. ಈ ದೇವ ಸ್ಥಾನಕ್ಕೆ ಸರಕಾರದಿಂದ ತಸದೀಕು ಸಿಗುತ್ತದೆ. ಇದ ರಿಂದಲೂ ದೇವಸ್ಥಾನದ ಬೇರೆ ಉತ್ಪತ್ತಿಯಿಂದಲೂ ಪೂಜಾ ವಿನಿಯೋಗಾದಿಗಳು ನಡೆಯುತ್ತವೆ.

ಶಂಕರನಾರಾಯಣದಿಂದ 4 ಹರದಾರಿ ಪೂರ್ವ ದಿಕ್ಕಿನಲ್ಲಿ 'ತೊಂಬಟ್ಟು ಗುಡ್ಡ' ಎಂಬ ಸ್ಥಳವುಂಟೆಂದೂ ಅಲ್ಲಿ ಮೇಲುಸುಂಕ ಅಮ್ಮನವರ ದೇವಸ್ಥಾನ ವುಂಟೆಂದೂ ಖರರಟ್ಟರನ್ನು ಶಂಕರನಾರಾಯಣ ದೇವರು ಸಂಹರಿಸುವ ಮೊದಲು ಇಲ್ಲಿಯ ಭಗವತಿಯು ಮೋಹಿನಿರೂಪವನ್ನು ಧರಿಸಿಕೊಂಡು ಆ ದೈತ್ಯ ರೊಂದಿಗೆ ಯುದ್ಧಮಾಡಿ ದೇವರಿಗೆ ಸಹಾಯ ಮಾಡಿ ದಳೆಂದೂ ಆ ಕಾರಣದಿಂದ ದೇವಿಯನ್ನು ಈ ಗುಡ್ಡದ ಮೇಲೆ ಪ್ರತಿಷ್ಠಿಸಿರುವರೆಂದೂ ಈ ಗುಡ್ಡದ ಕೆಳಗೆ ಗಣಪತಿಯು ಉದ್ಭವಿಸಿದ ಸ್ಥಳದಲ್ಲಿ ಗಣಪತಿ ದೇವ ಸ್ಥಾನವಿದೆಯೆಂದೂ ಇಲ್ಲಿಯವರು ಹೇಳುತ್ತಾರೆ.



# ಕನ್ನಡದ ಮುಂದಿನ ಬೆಳವಣಿಗೆ

ಲೇಖಕರು:—ಮ. ರಾ. ರಾ. ಬೈಂದೂರ ಆನಂದರಾವ್, ವಕೀಲ್, ಪುತ್ತೂರು.

ಕಾವೇರಿ ಪ್ರವಾಹದಿಂದ ಹೈದರಾಬಾದು ಸಂಸ್ಥಾನದ ವರೆಗೂ ಪಸರಿಸಿರುವ ನಮ್ಮ ಈ ವಿಶಾಲವಾದ ಕನ್ನಡ ನಾಡು ರಾಜಕೀಯ ಕಾರಣಗಳಿಂದ ಭಿನ್ನಭಿನ್ನವಾಗಿದೆ. ಮೈಸೂರು ಪ್ರಾಂತವು ಶ್ರೀಮನ್ಮಹಾರಾಜರ ಕೈಕೆಳಗೂ ದಕ್ಷಿಣ ಕನ್ನಡ, ಬಳ್ಳಾರಿ, ಅನಂತಪುರ ಜಿಲ್ಲೆಗಳು ಮತ್ತು ಕೊಯಂಬುತ್ತೂರು, ಸೇಲಂ ಜಿಲ್ಲೆಗಳ ಒಂದೆರಡು ತಾಲೂಕುಗಳು ಮದರಾಸು ಆಧಿಪತ್ಯಕ್ಕೂ ಉತ್ತರ ಕನ್ನಡ, ಬೆಳಗಾಂವಿ, ಧಾರವಾಡ, ಬಿಜಾಪುರ ಜಿಲ್ಲೆಗಳು ಮುಂಬಾಯಿ ಆಧಿಪತ್ಯಕ್ಕೂ ಗಲಬಗರ್ಾ ಪ್ರದೇಶವು ಹೈದರಾಬಾದು ಸಂಸ್ಥಾನಕ್ಕೂ ಸೇರಿರುವುವಲ್ಲದೆ, ಕೊಡಗು ಜಿಲ್ಲೆಯು ಇಂಡಿಯಾ ಸರಕಾರದವರ ಕೈಕೆಳಗೆ ಪ್ರತ್ಯೇಕ ಬಿಡಾರ ಮಾಡಿಕೊಂಡಿದೆ. ಹೀಗೆಲ್ಲಾ ಇರುವುದರಿಂದ ಆಯಾ ಸರಕಾರದವರಿಂದ ನಿಯಮಿತವಾದ ಪಠ್ಯಪುಸ್ತಕಗಳೂ ಶಿಕ್ಷಣಕ್ರಮವೂ ಕೂಡಾ ಪ್ರತ್ಯಪ್ರತ್ಯೇಕವಾಗಿದ್ದು, ಅಲ್ಲಲ್ಲಿನ ಕನ್ನಡ ಭಾಷೆಯು ಶಿಕ್ಷಣ ಕ್ರಮಕ್ಕನುಗುಣವಾಗಿ ಮಾರ್ಪಾಟ ಹೊಂದುತ್ತಲಿದೆ. ಅದಲ್ಲದೆ ಆಯಾ ಪ್ರಾಂತಗಳ ನೆರೆಕರೆಯಲ್ಲಿ ರೂಢಿಯಲ್ಲಿರುವ ಅನ್ಯಭಾಷೆಗಳ ಸಂಸರ್ಗದಿಂದಲೂ ಕೂಡಾ ಹೇರಳವಾದ ಅನ್ಯಭಾಷಾ ಶಬ್ದಗಳು ಕನ್ನಡ ಭಾಷೆಯಲ್ಲಿ ವಿಂಗಡಿಸಲಾಗದಂತೆ ಮಿಶ್ರಿತವಾಗಿವೆ.

2. ಮೈಸೂರು ರಾಜ್ಯದಲ್ಲಿ ರೂಢಿಯಲ್ಲಿರುವ ಕನ್ನಡಕ್ಕೆ ಮೈಸೂರು ಕನ್ನಡವೆಂದೂ, ಮುಂಬಾಯಿ ಸಂಸ್ಥಾನದ ಭಾಗದಲ್ಲಿ ಚಾಲತಿಯಲ್ಲಿರುವ ಭಾಷೆಗೆ ಧಾರವಾಡ ಕನ್ನಡವೆಂದೂ, ದಕ್ಷಿಣ ಕನ್ನಡ ಮತ್ತು ಕೊಡಗು ಪ್ರಾಂತಗಳಲ್ಲಿ ಆಡಲ್ಪಡುವ ಭಾಷೆಗೆ ಮಂಗಳೂರು ಕನ್ನಡವೆಂದೂ ಹೇಳುತ್ತಾರೆ.

3. ಧಾರವಾಡ ಕನ್ನಡವು ಮರಾಠಿ ಭಾಷೆಯ ಸಂಸರ್ಗದಿಂದಲೂ, ಗಲಬಗರ್ಾ ಪ್ರಾಂತವು ಹೈದರಾಬಾದು ಸರಕಾರಕ್ಕೊಳಪಟ್ಟಿದ್ದರಿಂದ ಪ್ರಾಯಶಃ ಉರ್ದು ಶಬ್ದಗಳ ಕಲಬೆರಿಕೆಯಿಂದಲೂ, ಮಂಗಳೂರು ಭಾಷೆಯು ತುಳು ಭಾಷೆಯ ಸ್ಪರ್ಶನದಿಂದಲೂ, ಬಳ್ಳಾರಿ ಅನಂತಪುರಗಳ ಕನ್ನಡವು ತೆಲುಗು ಭಾಷೆಯ ಸಂಪರ್ಕದಿಂದಲೂ ತಕ್ಕಮಟ್ಟಿಗೆ ಕಲುಷಿತವಾಗಿ ಅಲ್ಪಸ್ವಲ್ಪ ಅನ್ಯಶಬ್ದಾವಳಿಯನ್ನು ಪರಿಗ್ರಹಿಸಿವೆ. ಮೈಸೂರು ಕನ್ನಡವೂ ತೀರ ನಿರ್ದೋಷಿಯಲ್ಲ; ಆದರಲ್ಲಿಯೂ ಹೈದರಾಲಿ ಮೊದಲಾದ ಮುಸಲ್ಮಾನ ಅರಸರ ಕಾಲದಲ್ಲಿ ರೂಢಿಯಲ್ಲಿದ್ದ ಹಲವು ಹಿಂದೂಸ್ಥಾನಿ ಶಬ್ದಗಳು ಈಗಲೂ ಕಂಡು ಬರುವುವು. ಹೀಗಾಗಿ ನಿರ್ಮಲವಾದ ಶುದ್ಧ ಕನ್ನಡವು ಯಾವುದೆಂದು ಹೇಳಲು ಸಾಧ್ಯವೂ ಇಲ್ಲ; ತಮ್ಮ ಕನ್ನಡವೇ ಪ್ರಶಸ್ತವಾದುದೆಂದು ಯಾರೊಬ್ಬರಾದರೂ ಆಗ್ರಹಪಡುವುದು ಯೋಗ್ಯವೂ ಅಲ್ಲ.

4. ಅನ್ಯಭಾಷಾ ಸಂಸರ್ಗದಿಂದ ಕನ್ನಡದಲ್ಲಿ ಕಲಬೆರಿಕೆಯಾದ ಅನ್ಯಶಬ್ದಗಳ ಸಂಖ್ಯೆಯು ಅತಿರೇಕವಾಗಿಲ್ಲ. ಇಂಥ ಕಲಬೆರಿಕೆಯಿಂದ ಭಾಷೆಯು ಅಭಿವೃದ್ಧಿಗೊಳ್ಳುವುದಲ್ಲದೆ ಸರ್ವಥಾ ಹಾಳಾಗದು. ಇಂಗ್ಲೀಷು ಭಾಷೆಯಲ್ಲಿ ಬರೇ ಎಂಗ್ಲೋ-ಸೆಕ್ಸನ್ ಶಬ್ದಗಳು ಮಾತ್ರ ಉಪಯೋಗಿಸಲ್ಪಡುತಿದ್ದರೆ ಆ ಭಾಷೆಯು ಇಷ್ಟು ಪ್ರಚಾರಕ್ಕೂ ಅಭಿವೃದ್ಧಿಗೂ ಎಂದಿಗೂ ಬರುತಿದ್ದಿಲ್ಲ. ಇಂಗ್ಲೀಷು ಭಾಷೆಯಲ್ಲಿ ಲಟೀನ್, ಗ್ರೀಕ್, ಫ್ರೆಂಚ್ ಇತ್ಯಾದಿ ಯುರೋಪ ಖಂಡದ ವಿವಿಧ ಭಾಷೆಗಳ ಅನೇಕ ಶಬ್ದಗಳು ಮಾತ್ರವಲ್ಲದೆ ತಮಿಳು ಇತ್ಯಾದಿ ಹಿಂದೂ ದೇಶದ ಭಾಷೆಗಳ ಹಲವು ಶಬ್ದಗಳು ಕೂಡಾ ಇರುವುವು. ಇವೆಲ್ಲಾ ಕಾರಣಗಳಿಂದ ಆಯಾ ಪ್ರಾಂತದ ಕನ್ನಡವು ಅಲ್ಲಲ್ಲಿ

ರೂಢಿಯಲ್ಲಿರುವ ಇತರ ಭಾಷೆಗಳಿಂದ ಕಲುಷಿತವಾಗಿ ಕೆಟ್ಟುಹೋಗುತ್ತಿದೆಯೆಂಬ ಕೆಲವರ ಭಾವನೆಯು ಶುದ್ಧ ತಪ್ಪು. ಯಾವ ಸಂದರ್ಭದಲ್ಲಿ ಆ ಸ್ಥಾನದಲ್ಲಿ ಅತ್ಯಂತ ಯೋಗ್ಯವಾದದ್ದೆಂದು ಕಂಡುಬರುವುದೋ ಆ ಶಬ್ದವನ್ನೇ ಉಪಯೋಗಿಸತಕ್ಕದ್ದು. ಇದರಿಂದ ಭಾಷೆಗೆ ಉಜ್ವಲಸ್ವರೂಪವೂ ವ್ಯಾಪಕತ್ವವೂ ಉಂಟಾಗಿ ಶಬ್ದಾವಳಿಯೂ ಹೆಚ್ಚುವುದು.

5. ಜನರು ಮಾತನಾಡುವ ಭಾಷೆಯಲ್ಲಿ ದೇಶ ಗುಣಕ್ಕನುಸಾರವಾಗಿ ಎಷ್ಟು ಪ್ರಭೇದಗಳಿದ್ದರೂ ಗ್ರಂಥಸ್ಥ ಭಾಷೆಯು ಏಕರೂಪತೆಯನ್ನು ಹೊಂದ ಬೇಕೆಂಬುದು ಸಹಜವಾದುದೇ ಆಗಿದೆ. ಇಂಗ್ಲಾಂಡಿನಲ್ಲಿ ಕೂಡ ಬಡಗಲಾಗಿನವರ ಮಾತಿಗೂ ತೆಂಕಲಾಗಿನವರ ಮಾತಿಗೂ ಅನೇಕ ವ್ಯತ್ಯಾಸಗಳಿವೆ. ಪರಂತು ಅವರ ಗ್ರಂಥಸ್ಥಭಾಷೆಯು ಸರ್ವತ್ರ ಆಂಗ್ಲ ದ್ವೀಪದಲ್ಲಿಯೂ ಒಂದೇ ಆಗಿರುವುದು. ಕನ್ನಡ ಗ್ರಾಂಥಿಕ ಭಾಷೆಯು ಧಾರವಾಡ, ಮೈಸೂರು, ಮಂಗಳೂರು ಇತ್ಯಾದಿ ಸಮಸ್ತ ಪ್ರಾಂತಗಳಿಂದ ಕೂಡಿದ ಸಮಗ್ರ ಕರ್ಣಾಟಕ ಭೂಮಿಯಲ್ಲಿಯೂ ಏಕವಿಧವಾಗಿರ ಬೇಕು. ಸ್ಥಳಗುಣದಿಂದ ಅಲ್ಪ ಸ್ವಲ್ಪ ವ್ಯತ್ಯಾಸಗಳು ಇನ್ನೂ ಇರುವುವು. ಪರಂತು ಒಂದು ಕಡೆಯ ಭಾಷೆಯಲ್ಲಿ ಇನ್ನೊಂದು ಕಡೆಯಲ್ಲಿ ತಿಳಿಯಲಾಗದಷ್ಟು ವ್ಯತ್ಯಾಸಗಳು ಎಲ್ಲಿಯೂ ಇರುವುದಿಲ್ಲಾ. ಆದ್ದರಿಂದ ಈ ವ್ಯತ್ಯಾಸಗಳನ್ನು ಕ್ರಮೇಣ ತೆಗೆದು ಹಾಕುತ್ತ ಒಂದು ಏಕರೂಪತೆಗೆ ತರುವುದು ಕಷ್ಟಸಾಧ್ಯವಲ್ಲ. ಧಾರವಾಡ ಭಾಷೆಯಲ್ಲಿ ಮರಾಠಿ ಶಬ್ದಗಳು ಯಥೇಷ್ಟವಾಗಿರುವುವೆಂದೊಂದು ದೂಷಣೆ ಇದೆ. ಆದರೆ ಸಂಸ್ಕೃತ ಶಬ್ದಗಳ ಪ್ರಾಚುರ್ಯದಿಂದ ಭಾಷೆಗೆ ಕ್ಲಿಷ್ಟತೆಯನ್ನು ತರುವುದಕ್ಕಿಂತ, ಸುಲಭವಾದ ಪ್ರಕೃತ ಸಾವಿರಾರು ಜನರ ಬಾಯಲ್ಲಿ ನಲಿಯುವ ಸುಲಲಿತವಾದ ಮರಾಠಿ ಭಾಷೆಯ ಶಬ್ದಗಳನ್ನು ಉಪಯೋಗಿಸುವುದು ಎಷ್ಟೋ ಒಳ್ಳೇದು. ಆದ್ದರಿಂದ ಮರಾಠಿ, ಹಿಂದಿ—ಯಾ—ಯಾವ ಅನ್ಯಭಾಷೆಯ ಶಬ್ದವಾದರೂ ಸರಿ, ಅದನ್ನು ಉಪಯೋಗಿಸಿದ ಸ್ಥಾನದಲ್ಲಿ ಅದು ಯೋಗ್ಯವಾದುದೆಂದೂ ಅತ್ಯುತ್ತಮವಾದುದೆಂದೂ ತೋರಿದರೆ ಅದನ್ನೇ ಉಪಯೋಗಿಸಲು ಅಭ್ಯಂತರವೇನು? ಹೀಗಾದರೇನೆ ಮೇಲೆ ಹೇಳಿದಂತೆ ಭಾಷೆಗೆ ಉಜ್ವಲ ಸ್ವರೂಪವೂ ವ್ಯಾಪಕತ್ವವೂ ಉಂಟಾದೀತು. ಪರಂತು ನಾವು ಸದಾ ಸಂಕುಚಿತ ದೃಷ್ಟಿಯಿಂದ ನೋಡಿದರೆ ಭಾಷೆಯು ಅಭಿವೃದ್ಧಿಗೊಳ್ಳದೆ ಕ್ಷೀಣಾವಸ್ಥೆಗೆ ಬರುವುದು ಖಂಡಿತ. ಈ ರೀತಿ ಮಂಗಳೂರಿನವರು, ಧಾರವಾಡಿನವರು, ಮತ್ತು ಮೈಸೂರಿನವರು—ಇವರಲ್ಲಿ ಯಾವ ಪ್ರಾಂತ್ಯದವರಾದರೂ ತಮ್ಮ ಪ್ರಾಂತ್ಯದಲ್ಲಿ ರೂಢಿಯಲ್ಲಿರುವ ಭಾಷೆಯೇ ಪರಿಶುದ್ಧವಾದುದೆಂಬ ದುರಾಗ್ರಹವನ್ನು ಬಿಟ್ಟು, ಯಾವ ನಿರ್ಬಂಧವನ್ನೂ ಇಡದೆ ಕೈ ಕೈ ಹಿಡಿದು ಒಗ್ಗಟ್ಟಿನಿಂದ ಕೆಲಸಮಾಡುವುದರ ಮೇಲೆಯೇ ಕನ್ನಡ ಭಾಷೆಯ ಭವಿತವ್ಯತೆಯು ಹೊಂದಿರುವುದು.

6. ಪ್ರಕೃತ ನಮ್ಮೊಡೆಯರು ಇಂಗ್ಲೀಷ ಸಾರ್ವಭೌಮರಾದ್ದರಿಂದ ಅನೇಕ ಇಂಗ್ಲೀಷು ಶಬ್ದಗಳು ನಮ್ಮಲ್ಲಿ ಬಳಕೆಯಲ್ಲಿರುವುವು. ಅನೇಕ ಸಂದರ್ಭಗಳಲ್ಲಿ ಇವುಗಳ ಬದಲಿಗೆ ಕನ್ನಡದಲ್ಲಿ ಎಂತಹ ಶಬ್ದಮಾಲೆಯನ್ನು ಉಚ್ಚರಿಸಿದರೂ ಕೂಡಾ ಇಂಗ್ಲೀಷು ಶಬ್ದದಷ್ಟು ಸುಲಭವಾಗಲಾರದು. ಇಂತಹ ಸಂದರ್ಭಗಳಲ್ಲಿ ಇಂಗ್ಲಿಷಿನ ಅರ್ಥವು ಒಬ್ಬ ನಾಡಿಗನಿಗೂ ಕೂಡ ತಿಳಿದಿರುವುದಾದರೆ, ಮತ್ತು ಆ ಶಬ್ದದ ಅರ್ಥವು ಅದರ ಪ್ರತಿಯಾಗಿ "ಹಾಯ್ ಕೋರ್ಟು" ಎಂಬುದಕ್ಕೆ "ಉನ್ನತ ನ್ಯಾಯಸ್ಥಾನ"; "ಸೆಂಟ್ರಲ್ ಕೊಲೇಜು" ಎಂಬುದಕ್ಕೆ "ಮಧ್ಯಸ್ಥ ವಿದ್ಯಾಲಯ" ಇತ್ಯಾದಿ ಕನ್ನಡದಲ್ಲಿ ಕಷ್ಟಪಟ್ಟು ಕಲ್ಪಿಸುವ ಶಬ್ದಗಳಿಗಿಂತ ಸುಲಭವಾಗಿ ತಿಳಿಯುವಾಗ, ಸರಿಯಾದ ಅರ್ಥವನ್ನು ಸುಲಭವಾಗಿ ತಿಳಿಸುವ ಒಂದೇ ಒಂದು ಇಂಗ್ಲೀಷು ಶಬ್ದಕ್ಕೆ ಬದಲಾಗಿ ಕನ್ನಡದಲ್ಲಿ ಅನೇಕ ಶಬ್ದಗಳನ್ನು ಜೋಡಿಸಿ, ಅಕಟವಿಕಟವಾದ ಶಬ್ದಜಾಲವನ್ನು ಪ್ರಯೋಗಿಸುವುದು ನ್ಯಾಯವಲ್ಲ. ಆದ್ದರಿಂದ ಅನ್ಯ ಭಾಷಾ ಶಬ್ದಗಳನ್ನು ಯೋಗ್ಯವೆಂದು ತೋರಿದ್ದಲ್ಲಿ ಉಪಯೋಗಿಸಲೇ ಬೇಕು.

7. ಧಾರವಾಡದವರು ಮರಾಠಿ ಶಬ್ದಗಳನ್ನು ಹೆಚ್ಚಿಸುತ್ತಾ ಹೋಗಿ, ನಾವೂ ಇತರ ಭಾಷಾ ಶಬ್ದಗಳನ್ನು ಹೆಚ್ಚಿಸುತ್ತಾ ಬಂದರೆ, ಗ್ರಂಥಸ್ಥ ಭಾಷೆಯು ಏಕರೂಪತೆಗೆ ಬರುವುದು ಹೇಗೆಂಬ ವಾದವಿರಬಹುದು. ಪರಂತು ಇದು ಸುಲಭಸಾಧ್ಯವೇ ಆಗಿದೆ. ಇದು ಧಾರವಾಡಿನವರ ಶಬ್ದ, ಅದು ಮೈಸೂರಿನವರ ಶಬ್ದ, ಮತ್ತೊಂದು ಮಂಗಳೂರಿನವರ ಶಬ್ದವೆಂಬ ಭೇದ ಭಾವನೆಯನ್ನು ಬಿಟ್ಟು ಯಾವ ಶಬ್ದವು ಎಲ್ಲಿ ಯೋಗ್ಯವೆಂದು ತೋರುವುದೋ ಅದನ್ನೇ ಉಪಯೋಗಿಸಿದರೆ ಕಾರ್ಯವು ಸುಲಭಸಾಧ್ಯವೇ ಆಗುವುದು.

8. ಏಕರೂಪತೆಗೆ ಇನ್ನೂ ಕೆಲವು ಸಾಧನಗಳು ಅಗತ್ಯ:—(a) ಪಾರಿಭಾಷಿಕ ಶಬ್ದಗಳು, ವಿವಿಧ ಶಾಸ್ತ್ರ ಸಂಬಂಧವಾದ ಶಬ್ದಗಳು, ಅಸ್ತ್ರಶಸ್ತ್ರಗಳ ಹೆಸರುಗಳು ಎಲ್ಲಾ ಕಡೆಯಲ್ಲಿಯೂ ಏಕರೀತಿಯಲ್ಲಿರಬೇಕು. ಉದಾ: (Oxygen) ಎಂಬ ಶಬ್ದಕ್ಕೆ ಕೆಲವರು "ಆಮ್ಲ ಜನಕ ವಾಯು"ವೆಂದೂ, ಕೆಲವರು "ಪ್ರಾಣವಾಯು" ವೆಂದೂ, ಬೇರೆ ಕೆಲವರು "ಓಶಜಾನಿ" ಎಂದೂ ಹೇಳುವರು. ಇದೇ ರೀತಿ ಅನೇಕಾನೇಕ ಶಬ್ದಗಳು ವಿವಿಧ ರೂಪಾಂತರಗಳನ್ನು ಹೊಂದಿರುವುವು. ಹೀಗೆ ಸರ್ವಥಾ ಆಗಬಾರದು. ಬ್ರಿಟಿಷ್ ಸಾಮ್ರಾಜ್ಯದಲ್ಲಿ ಯಾವ ಮೂಲೆಗೆ ಹೋದರೂ, ಇಂಗ್ಲಿಷ್ ಭಾಷೆಯೇ ಗ್ರಂಥಸ್ಥಭಾಷೆಯಾಗಿರುವ ಅಮೇರಿಕಾಖಂಡದಲ್ಲಿ ಕೂಡಾ ಇಂಗ್ಲೀಷು ಭಾಷೆಯ ಪಾರಿಭಾಷಿಕ, ಶಾಸ್ತ್ರೀಯ ಇತ್ಯಾದಿ ಶಬ್ದಗಳು ಒಂದೇಯಾಗಿರು ವುವು; ಏಕತೆಯನ್ನೂ ಸ್ಥಿರತ್ವವನ್ನೂ ಹೊಂದಿರುವುವು. ಯೂರೋಪು ಖಂಡದ ಫ್ರೆಂಚ್, ಜರ್ಮನ್, ಮೊದ ಲಾದ ಇತರ ಭಾಷೆಗಳಲ್ಲಿಯೂ ಕೂಡಾ ಈ ಕ್ರಮ ವನ್ನೇ ಅನುಸರಿಸುವರು.

(b) ಈ ರೀತಿ ಯೋಗ್ಯವಾದ ಪಾರಿಭಾಷಿಕ ಮತ್ತು ಶಾಸ್ತ್ರೀಯ ಶಬ್ದಗಳ ನಿಘಂಟೊಂದನ್ನು ಪ್ರಕ ಟಿಸಿ, ಎಲ್ಲರೂ ಅದನ್ನೇ ಅನುಸರಿಸತಕ್ಕದ್ದು.

(c) ಶಬ್ದಾಂತ್ಯಗಳನ್ನೂ ಪ್ರತ್ಯಯಗಳನ್ನೂ ಉಪ ಯೋಗಿಸುವುದರಲ್ಲಿ ಒಂದೇ ವಿಧಾನವನ್ನು ಏರ್ಪಡಿಸ ತಕ್ಕದ್ದು. ಅದಲ್ಲದೆ, ತಕ್ಕದ್ದು—ತಕ್ಕುದು, ಇರುವದು—ಇರುವುದು, ಇಂತಹ—ಇಂಥ, ನಿರ್ಮಲ ನಿರ್ಮ್ಮಲ ಮುಂತಾದ ಅನೇಕ ಶಬ್ದ ಪ್ರಯೋಗಗಳಲ್ಲಿ ಯಾವು ದಾದರೊಂದನ್ನೆ ನಿರ್ಧರಿಸಿ ಅದನ್ನೇ ಉಪಯೋಗಿಸ ತಕ್ಕದ್ದು.

9. ಇಂಗ್ಲೀಷಿನಲ್ಲಿ ಬೇರೆ ಬೇರೆ ಗ್ರಂಥಕರ್ತರ ಶೈಲಿಯು ಬೇರೆ ಬೇರೆಯಾಗಿ ಅವರವರ ಶಕ್ತಿಸಾಮರ್ಥ್ಯ ಗಳ ಮೇಲೆ ಹೊಂದಿರುತ್ತದಾದರೂ, ಅವರು ಶಬ್ದ ಪ್ರಯೋಗದಲ್ಲಾದಲೀ ಅಕ್ಷರ ಪ್ರಯೋಗದಲ್ಲಾಗಲೀ ವ್ಯತ್ಯಾಸಗಳನ್ನು ತರಲಾರರು. ಮನುಷ್ಯರಲ್ಲಿ ಹೇಗೆ ಬೇರೆ ಬೇರೆ ಸ್ವಭಾವಗುಣ, ರೂಪ, ತೇಜಸ್ಸುಗಳಿರು ವುವೋ ಅವರ ಶೈಲಿಯು ಸ್ವಭಾವತಃ ಬೇರೆ ಬೇರೆ ಯಾಗಿರಲೇಬೇಕು. ಎಲ್ಲಾ ಮನುಷ್ಯರಿಗೂ ಒಂದೇ ಸ್ವಭಾವ, ರೂಪಗಳಾಗಿದ್ದರೆ ಎಲ್ಲವೂ ಅಕಳವಿಕಳವಾಗಿ ಹೋದೀತು. ಮನುಷ್ಯರಲ್ಲಿ ಏಕರೂಪವೂ ಏಕ ಸ್ವಭಾವವೂ ಹೇಗೆ ಅಸಾಧ್ಯವೋ ಹಾಗೆಯೇ ಶೈಲಿ ಯಲ್ಲಿಯೂ ಏಕರೂಪತೆಯು ಅಸಾಧ್ಯ. ಪರಂತು ಗ್ರಂಥಕರ್ತನು ಯಾವ ವಿಷಯವನ್ನು ಕುರಿತು ಬರೆಯು ವನೋ ಶೈಲಿಯೂ ಅದಕ್ಕೆ ಅನುಗುಣವಾಗಿರಬೇಕು. ಪ್ರಸಂಗಾನುಸಾರವಾಗಿ ಶೈಲಿಯೂ ತಬ್ಬಿಲಾಗಲೇ ಬೇಕು. ವೆಂಕಟಾಚಾರ್ಯರ ಕಾದಂಬರಿಗಳ ಶೈಲಿಯೇ ಬೇರೆ, 'ಶ್ರೀನಿವಾಸನ' ಚಿಕ್ಕ ಕಥೆಗಳ ಶೈಲಿಯೇ ಬೇರೆ, ವಾಸುದೇವಯ್ಯನವರ ಆರ್ಯಕೀರ್ತಿಯ ಶೈಲಿಯೇ ಬೇರೆ. ಒಂದರ ಶೈಲಿಯು ಇನ್ನೊಂದಕ್ಕೆ ಸರ್ವಥಾ ಒಪ್ಪದು. ಆದರೆ ಶಬ್ದಪ್ರಯೋಗದಲ್ಲಾಗಲೀ ಅಕ್ಷರ ಪ್ರಯೋಗದಲ್ಲಾಗಲೀ ವ್ಯತ್ಯಾಸಗಳನ್ನು ಅವರಲ್ಲಿ ಯಾರೂ ತರಲಿಲ್ಲ. ತರಲೂ ಬಾರದು.

10. ಶೈಲಿಯ ಹೊರತು ಬೇರೆ ವಿಷಯಗಳನ್ನು ಕುರಿತು ಯಾವ ತರದ ನಿರ್ಬಂಧಗಳೂ ಇರಕೂಡದು. ಭಾಷೆಯು ಸ್ವತಂತ್ರವಾಗಿ ಇಬ್ಬದಿಯ ಮರಳು ದಿಣ್ಣೆ ಗಳನ್ನೂ ಸುಗಂಧಪುಷ್ಪಗಳನ್ನೂ ಕಿತ್ತುಕೊಂಡು ನಲಿದಾ ಡುವ ನದಿಯ ಪ್ರವಾಹದಂತೆ ಹರಿಯಬೇಕು. ಉಪ ನದಿಗಳ ಜಲರಾಶಿಯನ್ನು ಸ್ವೀಕರಿಸುವಂತೆ ನೆರೆಕರೆ ಯಲ್ಲಿನ ಅನ್ಯಭಾಷಾ ಶಬ್ದಗಳನ್ನೂ ಅಗತ್ಯವಿರುವಲ್ಲಿ ಆವಾಹನ ಮಾಡಬೇಕು.

11. ಯಾವ ಜನಾಂಗದವರು ಶಾಸ್ತ್ರೀಯ ಪರಿಶೋಧನೆಗಳೇ ಇತ್ಯಾದಿ ನವನಾಗರಿಕತೆಯ ಪ್ರಸಾ ರಣೆಯಲ್ಲಿ ಹೇಗೆ ಹೇಗೆ ಅಭಿವೃದ್ಧಿಗೊಳುವರೋ ಅವರ ಶಬ್ದಾವಳಿಯೂ ಹೆಚ್ಚುವುದು: ಭಾಷೆಯೂ ರೂಪಾಂತರಗೊಳ್ಳುವುದು. ಭಾಷೆಯು ಆಕಾರ ಮತ್ತು ಪ್ರಮಾಣದಲ್ಲಿ ಬೆಳೆವಣಗೆಯಿಲ್ಲದ ನಿರ್ಜೀವ ವಸ್ತುವೆಂದೆಣಿಸಲಾಗದು. ಮನುಷ್ಯರು ಕಾಲಗುಣ ಕ್ಕನುಸಾರವಾಗಿ ಹೇಗೆ ಮಾರ್ಪಾಟವನ್ನು ಹೊಂದು ವರೋ ಹಾಗೆಯೇ ಅವರಾಡುವ ಭಾಷೆಯೂ ಸರ್ವದಾ ರೂಪಾಂತರ ಹೊಂದುತ್ತಲೇ ಇರುವುದು. ಮನುಷ್ಯರು ಸುಧಾರಣೆ ಹೊಂದಿದ ಹಾಗೆಯೇ ಅದೇ ವೇಗದಿಂದ ಅವರ ಭಾಷೆಯೂ ಸುಧಾರಣೆ ಹೊಂದಿ ಹೊಸ ಹೊಸ ಶಬ್ದಗಳನ್ನು ಎಲ್ಲಾ ಕಡೆ ಗಳಿಂದಲೂ ಆಕರ್ಷಿಸುವುದು. ತೋಳಗಳ ಗವಿಯಲ್ಲಿ ಸಿಕ್ಕಿದ ಮಕ್ಕಳ ಕಥೆಯನ್ನು ನಾವು ಕೇಳಿದ್ದೇವಷ್ಟೆ. ಅವಕ್ಕೆ ಮನುಷ್ಯ ಸ್ವಭಾವವು ಮಾತ್ರವಲ್ಲದೆ ಭಾಷೆ ಕೂಡಾ ಗೊತ್ತಿರಲಿಲ್ಲವಂತೆ! ಅವೇ ಮಕ್ಕಳು ಮನು ಷ್ಯರ ಸಹವಾಸದಲ್ಲಿರುತಿದ್ದರೆ ಎಂತಹ ಭಾಷಾ

ನೈಪುಣ್ಯವನ್ನು ಹೊಂದುತಿದ್ದರೆಂದು ಊಹಿಸಬಹುದು. ಹಾಗೆಯೇ ಯಾವ ಸುಧಾರಣೆಯನ್ನೂ ಹೊಂದದ, ಇತರರೊಡನೆ ಯಾವ ಸಂಪರ್ಕವೂ ಇಲ್ಲದ ಇನ್ನೂ ಪ್ರಥಮಾವಸ್ಥೆಯಲ್ಲೇ ಇದ್ದು ನರಭಕ್ಷಕರಾದ ಹಲವು ಜನರು ಆಡುವ ಭಾಷೆಯು ಸಾವಿರಾರು ವರ್ಷಗಳ ಹಿಂದೆ ಹೇಗಿತ್ತೋ ಈ ಹೊತ್ತಿಗೂ ಅದೇ ರೀತಿಯಲ್ಲಿ ಅಪೂರ್ಣಾವಸ್ಥೆಯಲ್ಲಿರುವುದು. ಆದರೆ ಜೀವನ ಕಲಹದಲ್ಲಿ ಯಾವ ಜನಾಂಗವು ಸರ್ವ ಕಲಾಶಾಸ್ತ್ರಗಳಲ್ಲಿಯೂ ನಿಪುಣತೆಯನ್ನು ಹೊಂದುವುದೋ ಅವರ ಭಾಷೆಯು ದಿನೇ ದಿನೇ ಆವಶ್ಯಕವಾದ ಹೊಸ ಹೊಸ ಅನ್ಯಭಾಷಾ ಶಬ್ದಗಳ ಪ್ರಯೋಗದಿಂದಲೂ ಇತರ ವಿಧದಿಂದಲೂ ವೃದ್ಧಿಗೊಂಡಿದೆ. ಇದಕ್ಕೆಲ್ಲಾ ನಮ್ಮೊಡೆಯರ ಇಂಗ್ಲೀಷು ಭಾಷೆಯೇ ಪ್ರಥಮ ದೃಷ್ಟಾಂತವಾಗಿದೆ.

12. ನೀರು ಒಳಗೆ ಬರಲು ಮತ್ತು ಹೊರಗೆ ಹೋಗಲು ಎಡೆಯಿಲ್ಲದ ಕೊಳದ ನೀರು ಅಲ್ಲೇ ಕೊಳತು ಹಾಳಾಗುವುದು. ಪರಂತು ಹಲವು ಉಪನದಿಗಳ ಪ್ರವಾಹಗಳನ್ನೂ ಸ್ವೀಕರಿಸಿ ಮುಂದರಿಯುವ ಗಂಗಾಜಲ ಪ್ರವಾಹವು ಸರ್ವದಾ ನಿರ್ಮಲವಾಗಿರುವುದು. ತದ್ರೀತಿ ಯಾವ ಜನಾಂಗದ ಭಾಷೆಯಲ್ಲಿ ಆಗಾಗ ಹೊಸ ಹೊಸ ಮಾರ್ಪಾಟಗಳುಂಟಾಗುವುವೋ, ಆ ಜನಾಂಗದವರೇ ನಾಗರಿಕರು ಎಂದು ಖಂಡಿತವಾಗಿ ಹೇಳಬಹುದು. ಅಂಥವರ ಭಾಷೆಯೇ ಅಭಿವೃದ್ಧಿಗೊಳ್ಳುವುದು. ಸರ್ವದಾ ದೇಹ, ಬುದ್ಧಿ, ಜ್ಞಾನ ಇವುಗಳಲ್ಲಿ ಮಾರ್ಪಾಟವನ್ನು ಹೊಂದುತ್ತಿರುವುದೇ ಮನುಷ್ಯನ ಮುಖ್ಯ ಲಕ್ಷಣ. ಇಲ್ಲದಿದ್ದರೆ ಈ ಸಂಸಾರವು ನಿಸ್ಸಾರವಾಗಿ ಹೋದೀತು. ನಮ್ಮೊಂದಿಗೆ ನಮ್ಮ ಭಾಷೆಯೂ ಎಡೆಬಿಡದೆ ಮಾರ್ಪಾಟ ಹೊಂದಲೇ ಬೇಕು. ಭಾಷೆಗೆ ನಮ್ಮಂತೆಯೇ ದೇಹವಿದೆ, ಆತ್ಮವಿದೆ. ಅದು "ರಬ್ಬರ"ನಂತೆ ಎಳೆದಷ್ಟು ಉದ್ದ ಬರುವುದು. ನಾವು ಎಂದಿನ ವರೆಗೆ ನೆರೆಕರೆಯವರೊಡನೆ ಅಥವಾ ಪರಸ್ಥಳದವರೊಡನೆ ಬಗೆಬಗೆಯ ವ್ಯವಹಾರಗಳನ್ನು ನಡಿಸುವೆವೋ, ಎಂದಿನ ವರೆಗೆ ನಾಗರಿಕತೆಯ ಸಾಧನಗಳಲ್ಲಿ ಪ್ರವರ್ತಿಸುವೆವೋ, ಅಂದಿನ ವರೆಗೂ ನಮ್ಮ ಭಾಷೆಯು ಅನ್ಯಭಾಷಾ ಸಂಸರ್ಗ ಫಲದಿಂದಲೂ ಆಂತರಿಕ ಅಭಿವೃದ್ಧಿಯಿಂದಲೂ ರೂಪಾಂತರಹೊಂದುತ್ತಲೇ ಇರುವುದು; ಹೊಂದಲೇ ಬೇಕು.

13. ಈ ರೂಪಾಂತರ ವಿಧಿಯು ನಿರಾತಂಕವಾಗಿ ಸಾಗಬೇಕು. ಯಾವ ತರದ ನಿರ್ಬಂಧಗಳೂ ಇರಬಾರದು. ಭಾಷೆಯು ಸ್ಫುಟವಾಗುವ ಹಾಗೆ ವ್ಯಾಕರಣ ಸೂತ್ರಗಳೂ **ಸ್ವತೇವವಾಗಿ** ಶಿಥಿಲವಾಗುವುವು. ಅಕ್ಷರ ಪ್ರಯೋಗ, ಶಬ್ದ ಪ್ರಯೋಗ, ವಾಕ್ಯರಚನೆ, ಮತ್ತು ಶೈಲಿಯಲ್ಲಿಯೂ ಕೂಡ ಮಾರ್ಪಾಟಗಳು ಸದಾ ಆಗುತ್ತಲಿವೆ. ಭಾಷೆಯು ವೃದ್ಧಿಯಾಗಬೇಕಾದರೆ ಇವೆಲ್ಲಾ ಅತ್ಯಗತ್ಯ. ಈಗಿನ ಬರವಣಿಗೆಗಳಲ್ಲಿ ಹಳೇ ವ್ಯಾಕರಣ ಸೂತ್ರಗಳನ್ನು ಅಕ್ಷರಶಃ ಅನುಸರಿಸುವುದಿಲ್ಲ; ಅನುಸರಿಸುವುದೂ ಅಸಾಧ್ಯ. ಸಾವಿರಾರು ವರ್ಷಗಳ ಹಿಂದೆ ಬರೆಯಲ್ಪಟ್ಟ ಹಳೆಯ ವ್ಯಾಕರಣಗಳು ಈಗಿನ ಭಾಷಾ ಮಾರ್ಪಾಟಗಳಿಗೆ ಸರಿಯಾಗಿ ಇರುವುದಿಲ್ಲ. ಇಂಗ್ಲೀಷು ಭಾಷೆಯ ವ್ಯಾಕರಣ ಕ್ರಮ, ಅಕ್ಷರ ಪ್ರಯೋಗ, ಶಬ್ದಪ್ರಯೋಗ, ವಾಕ್ಯರಚನೆ ಮತ್ತು ಶೈಲಿ ಇತ್ಯಾದಿಗಳು ಚೊಸರ್ ಕವಿಯ ಕಾಲದಲ್ಲಿ ಹೇಗಿದ್ದುವು, ಷೇಕ್‌ಸ್‌ಪಿಯರ್ ಮಹಾಕವಿಯ ಕಾಲದಲ್ಲಿ ಹೇಗೆ ಮಾರ್ಪಾಟವನ್ನು ಹೊಂದಿದವು, ಡೊಕ್ಟರ್ ಜೊನ್‌ಸನ್ ಮೊದಲಾದವರ ಕಾಲದಲ್ಲಿ ಎಂತಹ ಬದಲಾವಣೆಗಳಾದವು, ಪ್ರಕೃತ ಕಾಲದಲ್ಲಿ ಎಂತಹ ಮಾರ್ಪಾಟಗಳನ್ನು ಹೊಂದಿವೆ, ಎಂಬುದನ್ನು ನಾವು ಸರ್ವದಾ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ವ್ಯಾಕರಣ ಸೂತ್ರಬಂಧನವು ಮೃತ ಭಾಷೆಗಳಾದ ಲಟೀನ, ಗ್ರೀಕ, ಸಂಸ್ಕೃತಗಳಿಗೆ ಒಪ್ಪಿದ್ದಾಗಿದೆ. ಅವು ಪ್ರಕೃತ ಮಾತನಾಡಲ್ಪಡುವ ಭಾಷೆಗಳಲ್ಲ. ಕನ್ನಡವು ಹಾಗಲ್ಲ. ಅದು ಸಜೀವವಾದ ಭಾಷೆ. ಲಕ್ಷಾಂತರ ಜನರು ಆಡುವ ಮಾತು. ನೆರೆಯ ನೀರಿಗೆ ಅಣೆಕಟ್ಟು ಹಾಕಲು ಸಾಧ್ಯವಿಲ್ಲ. ಷೇಕ್‌ಸ್‌ಪಿಯರ್ ಮಹಾಕವಿಯ ವ್ಯಾಕರಣ ಕ್ರಮಕ್ಕನುಸಾರವಾಗಿ ಈಗ ಇಂಗ್ಲೀಷು ಬರವಣಿಗೆಗಳನ್ನು ಬರೆದರೆ ಹೇಗೆ ಹಾಸ್ಯಾಸ್ಪದವಾದೀತೋ ಹಾಗೆಯೇ ಕನ್ನಡದಲ್ಲಿಯೂ ಕೂಡಾ ಹಿಂದಿನ ವ್ಯಾಕರಣ ಸೂತ್ರಗಳನ್ನೇ ಅಥವಾ ಸಂಪ್ರದಾಯಗಳನ್ನೇ ಅನುಸರಿಸಿ ಪ್ರಕೃತದಲ್ಲಿ ಗ್ರಂಥಗಳನ್ನು ಬರೆದರೆ ಹಾಸ್ಯಾಸ್ಪದವೇ ಆದೀತು. ಲಟೀನ್, ಗ್ರೀಕ್, ಸಂಸ್ಕೃತಗಳು ಸಾವಿರಾರು ವರ್ಷಗಳ ಹಿಂದೆಯೇ ಅತ್ಯುನ್ನತ ಚರಮ ಸೀಮೆಯನ್ನು ಹೊಂದಿ ಮೃತಪಟ್ಟಿವೆ; ಅವಕ್ಕೆ ಅಭಿವೃದ್ಧಿಗೆ ಅವಕಾಶವಿಲ್ಲ. ಶಬ್ದಮಣಿದರ್ಪಣ ಇತ್ಯಾದಿ ಪ್ರಾಚೀನ ಹಳೆಗನ್ನಡ ವ್ಯಾಕರಣಗಳನ್ನು ಬರೆಯುವಾಗ ನಮ್ಮ ಕನ್ನಡವು ಬಾಲ್ಯಾವಸ್ಥೆಯಲ್ಲಿ

ಇತ್ತು. ಈಗ ವೃದ್ಧಿಯಾಗಿದೆ, ಇನ್ನೂ ವೃದ್ಧಿಯಾಗುತ್ತಿದೆ; ವೃದ್ಧಿಯಾಗಲೇ ಬೇಕು. ಭಾಷೆಗೆ ಆತ್ಮ, ದೇಹಗಳೆರಡೂ ಇವೆಯೆಂದು ಮೇಲೊಂದು ಕಡೆಯಲ್ಲಿ ಹೇಳಿದ್ದೇನೆ. ದೇಹವು ಬೆಳೆದಂತೆ ಅಂಗಿಯೂ ದೊಡ್ಡದಾಗಬೇಕು. ಭಾಷೆಯು ಬೆಳೆದಂತೆ ವ್ಯಾಕರಣ ಸೂತ್ರಗಳೇ ಮುಂತಾದ ವಿಶಿಷ್ಟ ನಿರ್ಬಂಧಗಳು ಸಡಿಲಿಸಲ್ಪಡಬೇಕು; ಇಲ್ಲದಿದ್ದರೆ ಬಿಗಿಯಾದ ಅಂಗಿಯು ಹರಿದುಹೋಗುವಂತೆ ವ್ಯಾಕರಣ ಸೂತ್ರಗಳೇ ಒಡೆದು ಹೋದಾವಲ್ಲದೆ, ಭಾಷೆಯು ಕೆಟ್ಟುಹೋಗದು. ವಿಧ ವಿಧವಾದ ಕಲಾಶಾಸ್ತ್ರಾದಿ ಸಮಸ್ತ ನಾಗರಿಕತೆಯ ಸಾಹಿತ್ಯ ಸನ್ನಾಹಗಳು ಹೇಗೆ ಹೆಚ್ಚುತ್ತವೋ ಶಬ್ದಾವಳಿಯೂ ಹೆಚ್ಚಾಗಬೇಕು. ಗ್ರಂಥಕರ್ತರ, ಪತ್ರಿಕಾಕರ್ತರ, ಶಾಸ್ತ್ರಜ್ಞರ ಲೇಖಣಿಯು ಸರಾಗವಾಗಿ ಹರಿಯಬೇಕಾದರೆ ಭಾಷೆಗೆ ಅಣೆಕಟ್ಟು ಹಾಕಲು ಸರ್ವಥಾ ಸಾಧ್ಯವಿಲ್ಲ.

14. ಗ್ರಂಥಾಭಿವೃದ್ಧಿಯು ಭಾಷಾಭಿವೃದ್ಧಿಯ ಸಾಮಗ್ರಿ ಸನ್ನಾಹಗಳಲ್ಲೊಂದಾಗಿದೆ. ಉತ್ತಮ ತರಗತಿಯ ಗ್ರಂಥಸ್ತೋಮವು ಬೆಳೆದರೇನೆ ಭಾಷೆಯೂ ಬೆಳೆದೀತು. ಹಿಂದೆ ಗ್ರಂಥಕರ್ತರಿಗೆ ರಾಜಾಶ್ರಯವಿತ್ತು. ಹೀಗಾಗಿ ಗ್ರಂಥಕರ್ತರು ಉದರಪೋಷಣೆಯ ಯೋಚನೆ ಇಲ್ಲದೆ ರಾಜಾಸ್ಥಾನದಲ್ಲಿ ಮೆರೆದು ಅನೇಕ ಉದ್ಗ್ರಂಥಗಳನ್ನು ಬರೆಯುತಿದ್ದರು. ಪ್ರಕೃತ ಕಾಲದಲ್ಲಿ ಮುಖ್ಯವಾಗಿ ಕನ್ನಡಕ್ಕೆ ರಾಜಾಶ್ರಯವೂ ಇಲ್ಲ; ವಾಚಕ ಸಮುದಾಯದ ಪ್ರೋತ್ಸಾಹವೂ ಇಲ್ಲ. ಗ್ರಂಥಕರ್ತರಿಗೆ ಉದರನಿರ್ವಾಹವೇ ಪ್ರಥಮದ ಚಿಂತೆಯಾಗಿದೆ. ಮುಖ್ಯವಾಗಿ ಗ್ರಂಥಕರ್ತರಿಗೆ ಬೇಕಾದುದು ಸಂತೋಷಚಿತ್ತತೆ; ಅದಿಲ್ಲದಿದ್ದರೆ ಯಾವ ಕಾರ್ಯವೂ ಫಲಕಾರಿಯಾಗದು. ಪ್ರಕೃತ ಉದರನಿರ್ವಾಹದ ಚಿಂತೆಯಲ್ಲಿ ಸಂತೋಷಚಿತ್ತತೆಯೇ ಮಾಯವಾಗಿದೆ. ಇಂತಹ ಸಂದರ್ಭದಲ್ಲಿ ವಾಲ್ಮೀಕಿಯು ರಾಮಾಯಣವನ್ನು ಬರೆದಂತೆ ಫಲಾಪೇಕ್ಷೆ ಇಲ್ಲದೆ ಬರೆಯುವವರು ಅತಿ ವಿರಳ. ಆದ್ದರಿಂದ ಗ್ರಂಥಾಭಿವೃದ್ಧಿಗೆ ರಾಜಾಶ್ರಯ ಮತ್ತು ಜನರ ಪ್ರೋತ್ಸಾಹ ಇವೆರಡೂ ಅತ್ಯಗತ್ಯ. ನಮ್ಮ ಗ್ರಂಥಕರ್ತರು ಕಲಾಕೌಶಲದಲ್ಲಾಗಲೀ ಭಾಷಾ ಪಾಂಡಿತ್ಯದಲ್ಲಾಗಲೀ ಹಿಂದುಳಿದವರಲ್ಲ. ಪರಂತು ಸಾಕಷ್ಟು ರಾಜಾಶ್ರಯ ಮತ್ತು ಜನರ ಪ್ರೋತ್ಸಾಹವಿಲ್ಲದೇನೆ ಪ್ರಕೃತ ಮೌಢ್ಯದಲ್ಲಿರುವರು. ಅವರನ್ನು ಈ ಅವಸ್ಥೆಯಿಂದ ಮೇಲಕ್ಕೆತ್ತಿದ ಹೊರತು ಉಚ್ಚತರಗತಿಯ ಗ್ರಂಥಸ್ತೋಮವು ಹೊರಡಲಾರದು. ಗ್ರಂಥಾಭಿವೃದ್ಧಿ ಇಲ್ಲದೆ ಭಾಷಾಭಿವೃದ್ಧಿಯ ಕಾರ್ಯವು ಮುಂದೆ ಸಾಗಲಾರದು.

---

# ಪೌರುಷದ ಪರಿಭವ ಅಥವಾ ಉತ್ತರನ ಸತ್ವಪ್ರದರ್ಶನ

**ಲೇಖಕ: — ಸುರತಕಲ್ ರಂಗಪ್ಪಯ್ಯ ಹೆಬ್ಬಾರ, ಕರ್ಣಾಟಕ ಪಂಡಿತ,**
**"ಸೈಂಟ್ ಅಲೋಯಿಸಿಯಸ್ ಕಾಲೇಜು" ಮಂಗಳೂರು.**

॥ ಚೌಪದಿ ॥

"ನಡುಗುತ್ತಲೈತಂದುದೇಕೆಲವೊ ಪೇಳೂ ।
ಕಡು ಭಯಕೆ ಕಾರಣವದಾವುದದು ಬಾಳೂ ॥
ಗೆಡಿಸಿದವರಾರ್ ನಿನ್ನ ಮೂಗಿನೊಳದೇನೂ ।
ನುಡಿಬೇಗಬೇಗನೆನ್ನೊಡನೆ ಹದನನ್ನೂ" ॥ ೧ ॥

ಎಂದೆನುತಲುತ್ತರನು ಕೇಳಲ್ಕೆ ಗೋಪಾ ।
ಎಂದನೆಲೆ ಜೀಯನೇನೆಂಬೆ ಪರಿತಾಪಾ ॥
ಬಂದುದೈ ಪರದಂಡು ಮತ್ಸ್ಯಕುಲ ದೀಪಾ ।
ಸಂದುದೈ ತುರುವಿಂಡು ಪರಬಲಕೆ ಭೂಪಾ ॥ ೨ ॥

ಬಂದಿರುವರಾರೆನುತ್ತೆಂದು ವಿಸ್ತರಿಸೂ ।
ಎಂದೆನಲ್ಕವನೆಂದನೊಡೆಯ ಚಿತ್ತೈಸೂ ॥
ಇಂದು ಕುಲಜಾತ ಧರಣೇಂದ್ರ ಕುರುವೀರಾ ।
ಬಂಧಿಸಿಹ ತುರುಚಯವನಿಂದು ರಣಧೀರಾ ॥ ೩ ॥

ಗುರುಭೀಷ್ಮ ಕೃಪಕರ್ಣ ದುಶ್ಶಾಸನಾದೀ ।
ಗರುವರತಿರಥ ಮಹಾರಥರನೊಡಗೂಡೀ ॥
ಗಿರಿಕುಲವ ಧಿಕ್ಕರಿಪ ಮತ್ತಗಜ ತುರಗಾ ।
ಬೆರಸಿ ಬಂದಿಹ ನೋಟ ಪುಟ್ಟಿಪುದು ಬೆರಗಾ ॥ ೪ ॥

ಸಾಕೆಲವೊ ಗಳಹದಿರು ಬರಿದೆ ಹೊಗಳದಿರೂ ।
ಆ ಕೌರವರದಾವ ಶೂರರೆನಿಸಿಹರೂ ॥
ನೂಕು ಕುನ್ನಿಯನಿವನ ಭೀತಮಾನಸನಾ ।
ನೂಕೆಂದು ಧಟ್ಟಿಸಿದ ಮೆಚ್ಚಿಸತಿ ಗಡಣಾ ॥ ೫ ॥

ದೇವ ಕೋಪಿಪುದೇಕೆ ಗೋವಳರ ಕುಲವಾ ।
ಆ ವೀರಭಟರು ಸದೆಬಡಿದು ತುರುಚಯವಾ ॥
ಠೀವಿಯಿಂ ಪಿಡಿದ ಕತದಿಂದೆ ಭಯಗೊಂಡೂ ।
ಭಾವಿಸದೆ ಪೇಳ್ದೆನ್ನ ಕಾವುದೈ ಬಂದೂ ॥ ೬ ॥

ಎನೆ ಕೇಳ್ದು ವಿಾಸೆಯನು ತಿರುಹುತುತ್ತರನೂ ।
ವನಜಾಕ್ಷಿಯರ ಮೊಗವನೀಕ್ಷಿಸುತ ತಾನೂ ॥
ಬಣಗು ಕೌರವನೇಸರವನು ತಾ ಸಿಲಲೂ ।
ರಣಕೆ ತಾನೆದುರಪ್ಪ ಧುರಧೀರನಾರೂ ॥ ೭ ॥

॥ ಕುಸುಮ ಷಟ್ಪದಿ ॥

ಭಲರೆ ಕೌರವರಿಂದು । ತಿಳಿಗೇಡಿತನದಿಂದೆ ।
ಬಳಿಸಂದು ಕೆಟ್ಟರೈ ಪೇಳಲೇನಾ ॥
ಅಲಘುಬಲ ಕೇಸರಿಯು । ಬಲವ ಪರಿಕಿಸಲೆಂದು ।
ಹುಲುನರಿಗಳೊಂದಾಗಿ ಬಂದ ತೆರನಾ ॥ ೮ ॥

ಬಂದಿರುವ ಸೈನ್ಯದೊಳು । ನಿಂದು ಕಾದುವ ಭಟರು ।
ಇಂದೆನಗೆ ತೋರರೈ ಕುಂದದೊಂದೂ ॥
ಮಂದಬಲ ವೃದ್ಧ, ಬುಧ । ವೃಂದ ಭೋಜನ ಪ್ರಿಯರು ।
ನಿಂದ್ಯಕುಲಜಾತರುಳಿದಿರುವ ಕೆಲರೂ ॥ ೯ ॥

ಆದಡಾಗಲಿ ಧುರದಿ । ಕಾದಿ ಗೆಲ್ಲುವೆನೆನಲು ।
ಬಾಧಿಪುದು ಸಾರಥಿ ವಿಹೀನತೆಯದೂ ॥
ಮೇದಿನಿಯೊಳಾರಿದನು । ಸಾಧ್ಯಗೊಳಿಸುವರೆಂದು ।
ಮೋದಗೊಳೆ ಸುದತಿಜನ ಪೇಳ್ದನಂದೂ ॥ ೧೦ ॥

॥ ಚೌಪದಿ ॥

ಈ ತೆರದ ಪೌರುಷದ ಮಾತನಾಲಿಸುತಾ ।
ತಾತತುಕ್ಷಣದೊಳರ್ಜುನನು ತೆರಳುತ್ತಾ ॥
ಆ ತಳೋದರಿಯನುತ್ತರೆಯು ಕಳುಹಿಸುತಾ ।
ಸೂತನಾಗುವನು ತವ ರಥಕೊಬ್ಬನೆನುತಾ ॥ ೧೧ ॥

ಪೇಳಿಸಲ್ಕದ ಕೇಳುತುಬ್ಬೇರಿ ಕುವರಾ ।
ಕಾಳುಗೆಡಿಸುವೆನಿಂದು ಭಲರೆ! ಕೌರವರಾ ॥
ಬಾಲೆ ಬೇಗವನ ಕರತಾರೆ ಹಿತಕರನಾ ।
ಪೇಳಲೊಡಗೊಂಡು ಬಂದಳು ಗೂಢನರನಾ ॥ ೧೨ ॥

ಸಾರಥಿಯನೇರಿಸುತ ರಥಕೆ ಸುಕುಮಾರಾ ।
ಭೂರಿಹರುಷದೊಳೇರೆ ರೂಪಜಿತಮಾರಾ ॥
ಧೀರಸೂತನು ರಥವ ಹಾರಿಸಲು ದೂರಾ ।
ಕಾರಿರುಳ ತೆರವೆ ಮುಂತೋರಿದುದು ಪೂರಾ ॥ ೧೩ ॥

ಕಂಡು ಭಯಗೊಂಡು ಪರದಂಡೊ ಜವದಂಡೋ ।
ಚಂಡಭುಜಬಲಯುತರ ಹಿಂಡೊ ಭಯ ತಂಡೋ ॥
ಖಂಡಪರಶುವಿನುಗ್ರರಣದ ಮಹಕಣನೋ ।
ಶುಂಡಾಲ ಪುರಬಲವೊ ಗಂಡುಗಲಿ ಕುಲವೋ ॥ ೧೪ ॥

ಎಂದು ಭೀತಾಕುಲನು ನೊಂದು ಮನದೊಳಗೇ ।
ಕಂದರ್ಪವೈರಿ ತ್ರಿಪುರಾರಿ ಪದಗಳಿಗೇ ॥
ವಂದನೆಯ ಮಾಡುತ್ತಲಂದು ಸಾರಥಿಗೇ ।
ಎಂದನಿಂತೆಂದು ಬಲು ಬಂಧಕೊಳಗಾಗೇ ॥ ೧೫ ॥

॥ ಕುಸುಮ ಷಟ್ಪದಿ ॥

ಸಾಪಥಿ 'ಬೃಹನ್ನಳೆ'ಯೆ । ಸೈರಿಸೈ ರಥವನೀ ।
ಹಾರಿಸದೆ ಹಿಂತಿರುಹಿ ತೋರು ದಯವಾ ॥
ಭೂರಿ ಸೈನ್ಯವು ಮಹಾ । ವಾರಿಧಿಯ ತೆರದೊಳಿದೊ ।
ಭೋರೆಂದು ಬೊಬ್ಬಿಡುತೆ ಹಾರುತಿಹುದೂ ॥ ೧೬ ॥

ಧೀರನಹೆಯ್ಯೈಸೆ ಸುಕು । ಮಾರ ನೀನಿಂತು ಭಯ ।
ದೋರಿದರೆ ನಗದಿಹುದೆ ಜಗದ ಜನವೂ ॥
ಚಾರುಮತ್ಸ್ಯಾಧೀಶ । ವೀರರಾಜನ ಕುಲಕೆ ।
ತಾರದಿರು ಕುಂದನ್ನು ಸಾರಿರುವೆನೂ ॥ ೧೭ ॥

॥ ಶರ ಷಟ್ಪದಿ ॥

ಸಾರಥಿಯಿಂತೆನ । ಲಾರುತ ಮನ, ಭಯ ।
ವೇರುತೆ ಕಂಪಿಸುತಾ ಕುವರಾ ॥
ತೇರಹಿಂದೆ ತಾ । ಸಾರುತಲಾಗಲೆ ।
ಹಾರಿದನೈ ಧರಣಿಗೆ ಧೀರಾ ॥ ೧೮ ॥

ನಾರಿಯುರೆದುರೊಳು । ಕೌರವ ಸೈನ್ಯದ ।
ವೀರರನೆಲ್ಲರ ತಡೆಗಡಿದೂ ॥
ಸೇರಿಸುವೆನು ಯಮ । ನೂರಿಗೆನುತ್ತಲೆ ।
ತೋರಿದ ಬಲಯುತ ನಿಲ್ಲೆಂದೂ ॥ ೧೯ ॥

ಓಡುತಿರುವ ರಣ । ಹೇಡಿಯ ಬೆಂಬಿಡ ।
ದೋಡಿ ಪಿಡಿದು ರಥಕಡರಿಸುತಾ ॥
ಹೂಡಿ ಸರಳನಲು । ಗಾಡಿಸಿ ಧನುವ, ವಿ ।
ಭಾಡಿಸಿ ಪರಬಲವನು ಪಾರ್ಥಾ ॥ ೨೦ ॥

ಗೋಕುಲ ಮರೆಳಲು । ಗೋಕುಲಪಾಲಕ ।
ನಾಕಮಲೇಶನ ಪದಯುಗಳಾ ॥
ಏಕ ಮನದಿ ಭಜ । ನೀಕರಿಸುತ ಪೃಥೆ ।
ಯಾಕುವರನು ಸಂದನು ಹೊಳಲಾ ॥ ೨೧ ॥



Printed at The Sadananda Co-operative Printing Works, Ltd., Mangalore.

# ಇತಿಹಾಸದ ಇರುಳಲ್ಲಿ ತುಳುನಾಡು



## ಸತ್ತ್ವತರು.

ಋಗ್ವೇದದ 'ಐತರೇಯ ಬ್ರಾಹ್ಮಣ'ದಲ್ಲಿ ಆರ್ಯರ ಆ ಕಾಲದ ನೆಲೆವೀಡುಗಳ ಎಲ್ಲೆಗಳಲ್ಲಿ ಅಂಧ್ರರೂ, ಪುಂಡ್ರರೂ, ಶಬರರೂ, ಪುಲಿಂದರೂ, ಮೂತಿಬರೂ ಎಂಬ ಜನರು[1] ವಾಸಿಸುತ್ತಿದ್ದರೆಂದಿದೆ; ಇವರು ಬಹುಶಃ ದ್ರಾವಿಡ ಜನಾಂಗದವರಾಗಿರಬೇಕು. ಇವರೇ ಮೊದಲಾದ ದಸ್ಯು ಜನರು (=ಅನಾರ್ಯರು) ವಿಶ್ವಾಮಿತ್ರ ಋಷಿಯ ಸಂತತಿಯವರೆಂದು ಅಲ್ಲಿಯೇ[1] ಹೇಳಿರುವುದರಿಂದ, ಆ ಕಾಲಕ್ಕಿಂತ ಮುಂಚಿನಿಂದಲೇ ಆರ್ಯ-ಅನಾರ್ಯರಲ್ಲಿ ಶರೀರ ಸಂಬಂಧವಾಗುತ್ತಲಿರಬೇಕು ಮಾತ್ರವಲ್ಲ, ದಕ್ಷಿಣಾಪಥದಲ್ಲಿ ಆರ್ಯರ ಅಧಿವೇಶನವು (Settlement) ದಿನೇ ದಿನೇ ವಿಸ್ತರಿಸುತ್ತಲಿರಬೇಕು. ಅದೇ ಬ್ರಾಹ್ಮಣದ 'ಇಂದ್ರ ಮಹಾಭಿಷೇಕ' ಎಂಬ ಅಧ್ಯಾಯದಲ್ಲಿ ದಕ್ಷಿಣ ದಿಕ್ಕಿನಲ್ಲಿರುವ 'ಸತ್ತ್ವತ'ರೆಂಬ[2] ಜನರ ಅರಸರು 'ಭೌಜ್ಯ'ಕ್ಕೆ[3] ಅಭಿಷಿಕ್ತರಾಗುತ್ತಿದ್ದರಂದಿದೆ. ಭಾರತವರ್ಷದ ದಕ್ಷಿಣ ದಿಕ್ಕಿನಲ್ಲಿದ್ದ 'ಸತ್ತ್ವತ'ರೆಂಬೀ ಜನರು ಯಾರು?

## ಸಾತ್ತ್ವತರು.

ಚಂದ್ರವಂಶದ ಯದುಮಹಾರಾಯನ ಮಗನಾದ 'ಕ್ರೋಷ್ಟು' ಎಂಬವನ ಸಂತತಿಯಲ್ಲಿ 'ಸತ್ತ್ವತ'ನೆಂಬ[4] ರಾಜನಿದ್ದನು; ಆತನ ವಂಶದವರು 'ಸಾತ್ತ್ವತ'ರೆಂದು ಪ್ರಸಿದ್ಧರಾದರು—ಇದೇ 'ಸಾತ್ತ್ವತ'ರ ವಂಶದಲ್ಲಿ ಶ್ರೀ ಕೃಷ್ಣನು ಉದಿಸಿದನು ಶ್ರೀಕೃಷ್ಣನು (ದಕ್ಷಿಣಾಪಥದಲ್ಲಿಯ) 'ಮಾರ್ತಿಕವತ' ಎಂದ ನಗರದ ಅರಸಾದ ಸಾಲ್ವನನ್ನು ಗೆದ್ದುಕೊಂದನೆಂಬ ಆಖ್ಯಾಯಿಕೆಯು 'ಮಹಾಭಾರತ'[5]ದಲ್ಲಿದೆ. ಆ ಕಾಲದ ರಾಜನೀತಿಗನುಸಾರವಾಗಿ ನವೀನಜಿತವಾದ ಆ 'ಮಾರ್ತಿಕವತ'ದಲ್ಲಿ ಶ್ರೀ ಕೃಷ್ಣನ ಸವಂಶೀಯರಾದ 'ಭೋಜ—ಅಂಧಕ—ವೃಷ್ಣಿ' ಮೊದಲಾದ ವಿವಿಧ ಶಾಖೆಗಳ ಸಾತ್ತ್ವತರು ಬಂದು ನೆಲಸಿರಬೇಕೆಂಬುದು, ಸತ್ತ್ವತನ ಮಗನಾದ ದೇವಾವೃಧನ ವಂಶದವರು 'ಮಾರ್ತಿಕವತ ಭೋಜ'ರೆಂದು ಪ್ರಸಿದ್ಧವಾದರೆಂದು 'ಹರಿವಂಶ' (I.37)ದಲ್ಲಿರುವ ಹೇಳಿಕೆಯಿಂದ ವ್ಯಕ್ತವಾಗುತ್ತದೆ. 'ಭೋಜ'ರೆಂಬ ಜನರಲ್ಲಿ ಬಳಿಕೆಯಾಗಿರುವ ರಾಜ್ಯರೀತಿಗೆ 'ಭೌಜ್ಯ'ವೆಂಬ ಹೆಸರು ಬರೆತಕ್ಕುದಾದುದರಿಂದ, 'ಐತರೇಯ ಬ್ರಾಹ್ಮಣ'ದಲ್ಲಿ ಹೇಳಿರುವ, ತೆಂಕಣ ಪ್ರಾಂತಗಳಲ್ಲಿ ನೆಲಸಿದ್ದ 'ಸತ್ತ್ವತ'ರು ಯದುವಂಶದ ಸತ್ತ್ವತರಾಯನ ವಂಶೀಯರಾದ 'ಭೋಜ—ಅಂಧಕ—ವೃಷ್ಣಿ ಮೊದಲಾದ ಶಾಖೆಯವರಾದ[6] ಸಾತ್ತ್ವತರಾಗಿರಬೇಕು.

## ತಾಲವನ—ತಾಲೀಯರು—ಸಾತಿಯ (ಪುತ) ರು

ಈ ಭಾರತ ವರ್ಷದ ದಕ್ಷಿಣಾಪಥದಲ್ಲಿಯ ದೇಶಗಳಲ್ಲಿ 'ತಾಲವನ' (ತಾಲೀವನ), 'ತಾಲೀಕಟ' (ತಾಲಿಕಟ, ತಾಲಾಕಟ) ಅಥವಾ 'ತಾಲ' ಎಂಬ ಹೆಸರಿನದೊಂದು ದೇಶವಿತ್ತೆಂದು 'ಮಹಾಭಾರತ'[7], 'ಮಾರ್ಕಂಡೇಯ ಪುರಾಣ'[8], ವರಾಹಮಿಹಿರನ (ಕ್ರಿ. ಶ. ಸು. ೬ನೆಯ ಶತಕ) 'ಬೃಹತ್ಸಂಹಿತಾ'[9] ಇವುಗಳಲ್ಲಿ ತೋರುತ್ತದೆ. ಈ 'ತಾಲವನ'ವು ದಕ್ಷಿಣಭಾಗದಲ್ಲಿತ್ತೆಂದು 'ಮಹಾಭಾರತ' 'ಬೃಹತ್ಸಂಹಿತೆ'ಗಳಿಂದಲೂ, ಪಶ್ಚಿಮ (ಅಪರಾಂತ)ದಲ್ಲಿತ್ತೆಂದು 'ಮಾರ್ಕಂಡೇಯ ಪುರಾಣ'ದಿಂದಲೂ ಕಾಣಬ

ರುತ್ತದೆ; ಹಾಗೆಯೇ ಪಡುಗಡಲ ಕರಾವಳಿಯಲ್ಲಿರುವ 'ಶೂರ್ಪಾರಕ' — 'ಕೊಂಕಣ' — 'ವಾನವಾಸಿಕ'— 'ಕೇರಳ' ಇವೇ ಮೊದಲಾದ ಸ್ಥಾನನಾಮನಿರ್ದಿಷ್ಟವಾಗಿರುವ ದೇಶಗಳೊಂದಿಗೆ ಈ 'ತಾಲವನ'ವೆಂಬ ದೇಶದ ಹೆಸರು ಕೂಡಾ ಹೇಳಲ್ಪಟ್ಟಿರುವುದರಿಂದ, ಇದು ಪಡುಗಡಲ ದಂಡೆಯಲ್ಲಿ, ಹೆಚ್ಚು ಕಡಿಮೆ ತೆಂಕಣ ಪಕ್ಕದಲ್ಲಿ, ಇರುವ ದೇಶವಾಗಿರಬೇಕೆಂಬುದು ಮಾತ್ರವಲ್ಲ, ಈ ಕರಾವಳಿಯಲ್ಲಿರುವ ಠಾಣಾ ಜಿಲ್ಲೆಯಿಂದ ಕೇರಳ ವರೆಗಣ ದೇಶಗಳೆಲ್ಲವೂ ಈ ಮೇಲಣ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುವುದರಿಂದ, ಅವನ್ನು ಕಳೆದು ಮಿಕ್ಕುಳಿದ ತುಳುನಾಡೇ 'ತಾಲವನ'[10] ದೇಶವಾಗಿರಬೇಕೆಂಬುದೂ ವ್ಯಕ್ತವಾಗುತ್ತದೆ—ಆದ್ದರಿಂದ 'ತಾಲವನ'ವೆಂಬುದು ನಮ್ಮಾ ತುಳುನಾಡಿನ ಪೌರಾಣಕಾಲೀನ ಹೆಸರಾಗಿರಬೇಕು. ಈ 'ತಾಲವನ' ದೇಶದ ಜನರು 'ತಾಲವಾನ (ಕಾ:') 'ತಾಲೀಯ (ಕಾ:) 'ಎಂಬುದಾಗಿ ಮಾತ್ರ ಮೇಲಣ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿರುವರಾದರೂ, ಈ ದೇಶದ 'ತಾಲ' ಎಂಬ ಹೆಸರಿಂದ ಅವರಿಗೆ 'ತಾಲಾ:' ಎಂದೂ 'ತಾಲಿ(ೀ)ವನ' ಎಂಬುದರಿಂದ 'ತಾಲಿ(ೀ)ವನಾ:' 'ತಾಲಿ(ೀ)ವಾನಾ:' ಎಂದೂ ಅವರಿಗೆ ಹೆಸರಾಗುತ್ತವೆ. ಇವುಗಳಲ್ಲಿಯ 'ತಾಲೀಯ' (=ತಾಲಿಯ) ಎಂಬ ಶಬ್ದವೇದ್ರಾವಿಡಭಾಷಾಭೂಯಿಷ್ಟವಾದ ಈ ಪ್ರಾಂತಗಳಲ್ಲಿಯ ದ್ರಾವಿಡಸ್ವರವ್ಯತ್ಯಯಗಳಿಗನುಸಾರವಾಗಿ 'ಸಾತಿಯ' (ಸತಿಯ) ಎಂದು ರೂಪಾಂತರವನ್ನು ಹೊಂದಿತು; ಈ 'ತಾಲವನ'ದ 'ಸಾತಿಯ'ರೆಂಬ ಜನರೇ ಮೌರ್ಯಚಕ್ರವರ್ತಿಯಾದ ಅಶೋಕನ 'ದ್ವಿತೀಯ ಶಿಲಾಲೇಖ' (Rock Edict II) ದಲ್ಲಿ ಹೇಳಲ್ಪಟ್ಟಿರುವ 'ಸಾತಿಯ(ಸತಿಯ) ಪುತ'ರೆಂಬ[11]ವರು; ಈ 'ತಾಲವನ'ದ 'ತಾಲೀಯ'ರ, (ಅಂದರೆ ಅಶೋಕನ ಶಾಸನದ 'ಸಾತಿಯ'ರ ದೇಶವು ನಮ್ಮಾ ತುಳುನಾಡೇ, ಅಂದರೆ 'ತಾಲವನ'ವೆಂಬುದು ತುಳುನಾಡೇ—ಎಂಬೀ ವಿಷಯಗಳನ್ನು ವಿಸ್ತರೇಣ ತರ್ಕಿಸಿ ಬರೆದಿರುವ 'Satiyaputo of the Asokan Edicts' ಎಂಬ ನನ್ನದೊಂದು ನಿಬಂಧವು ಮಂಗ್ಳೂರಿನ 'The 'Canara High School O. B. A. Magazine' ಎಂಬ ತ್ರೈಮಾಸಿಕಪತ್ರಿಕೆಯಲ್ಲಿ ಸದ್ಯ: ಪ್ರಕಟವಾಗುವುದರಿಂದ ಅದೇ ವಿಷಯಗಳನ್ನು ಇಲ್ಲಿ ಪುನಃ ಚರ್ಚಿಸ ತೊಡಗಿದರೆ 'ಚರ್ವಿತಚರ್ವಣ'ವಾಗದಿರದಾದುದರಿಂದ, ಅವನ್ನು ವಾಚಕ ಮಹಾಶಯರು ಆ ಪತ್ರಿಕೆಯಿಂದ ಓದಿಕೊಳ್ಳುವುದೆಂದು ಬಿನ್ನವಿಸಿ, ಅದರಲ್ಲಿಯ ವಿಚಾರವನ್ನು ಇಲ್ಲಿ ಆಧರಿಸಿ ಮುಂದರಿಸುವೆನು.

### ಸಾತ—ಸಾತವಾ(ಹ)ನ.

ಈ 'ತಾಲವನ' ದೇಶದ ಜನರಿಗೆ, 'ತಾಲಾ:' 'ತಾಲವಾನಾ:' 'ತಾಲೀವಾನಾ:' 'ತಾಲೀಯಾ:' ಎಂಬ ಹೆಸರುಗಳುಂಟಾಗುತ್ತವೆಂದು ಹೇಳಿದೆಯಷ್ಟೇ; ಈ ಶಬ್ದಗಳು ಕ್ರಮಶಃ 'ಸಾತಾ,' 'ಸಾತವಾನಾ,' 'ಸಾಲಿ(ೀ)ವಾನಾ' 'ಸಾತಿ (ೀ) ಯಾ' ಎಂದಾಗುತ್ತವೆಂಬುದು ಮೇಲೆ ಹೆಸರಿಸಿರುವ ನನ್ನ ನಿಬಂಧದಿಂದ ತಿಳಿದುಬರುವುದು; ಇವುಗಳಿಂದ ಕ್ರಮಶ: 'ಸಾತ' (ಮತ್ತು 'ಸಾಲ', 'ಹಾಲ') 'ಸಾತವಾನ,' 'ಸಾಲಿವಾನ' ಇತ್ಯಾದಿ ಶಬ್ದರೂಪಗಳಾಗುತ್ತವೆ. ಇವುಗಳಲ್ಲಿಯ 'ಸಾತ', 'ಸಾಲ' (ಹಾಲ), 'ಸಾ(ಶಾ)ಲಿವಾ(ಹ)ನ,' 'ಸಾತವಾ(ಹ)ನ'ವೆಂಬೀ ರೂಪಾಂತರಗಳನ್ನು ಪರಿಶೀಲಿಸಿದರೆ, 'ಸಾತ,' 'ಹಾಲ' (ಸಾಲ), 'ಶಾ(=ಸಾ)ಲಿವಾ(ಹ)ನ,' 'ಸಾತವಾ(ಹ)ನ' ಎಂಬ 'ಸಾತವಾಹನ' ವಂಶದ ಹಾಗೂ ಆ ವಂಶದ ಹಲವರಸರ ಹೆಸರುಗಳು ಹೊರವಡುತ್ತವೆ-ಆದ್ದರಿಂದ 'ಸಾತವಾಹನ' ವಂಶದ (ದಕ್ಷಿಣಾಪಥದಲ್ಲಿಯ) ಆದಿಮ ಉಪನಿವೇಶವು (earliest settlement) ನಮ್ಮಾ ತುಳುನಾಡು ಆಗಿರಬಹುದೇ ಎಂಬ ಶಂಕೆಯು ಮೊಳೆದೋರುತ್ತದೆ; ವಿಚಾರಿಸಿ ನೋಡೋಣ.

### ಸಾತವಾಹನರು.

ಗೋದಾವರೀನದಿಯ ತೀರದಲ್ಲಿರುವ 'ಪ್ರತಿಷ್ಠಾನ' ನಗರ[12] (ಈಗಣ 'ಪೈಠಣ')ದಲ್ಲಿ 'ಸಾತವಾಹನ'ನೆಂಬೊಬ್ಬ ಅರಸಿದ್ದನೆಂದು 'ಕಥಾತ್ಸಾರಿಸಗರ' (I. 6 ೧೫ ) ದಲ್ಲಿದೆ; ಶಾಪದಿಂದ ಸಿಂಹರೂಪಿಯಾದ 'ಸಾತ'ನೆಂಬ ಯಕ್ಷನ ಬೆನ್ನನ್ನೇರಿ ಈತನು ಮೆರೆಯುತ್ತಿದ್ದುದರಿಂದ,[13] ಅತನಿಗೆ 'ಸಾತವಾಹನ'ನೆಂಬ ಹೆಸರಾಯಿತೆಂದೂ, ಆತನು 'ಸ್ವಾಮಿಕುಮಾರ' (=ಕಾರ್ತಿಕೇಯ,ಷಣ್ಮುಖ)ನ ಪ್ರಸಾದದಿಂದ ಸರ್ವವಿದ್ಯೆಗಳನ್ನು ಕಲಿತುಕೊಂಡನೆಂದೂ ಇದೆ.[14] ಇದೇ ರೀತಿಯ ಕಥೆಯು ಕ್ಷೇಮೇಂದ್ರನ 'ಬೃಹತ್ಕಥಾಮಂಜರಿ' (I. 3)ಯಲ್ಲಿದೆ. ಜೈನಾಚಾರ್ಯ ಹೇಮ

ಚಂದ್ರನು (ಕ್ರಿ. ಶ. 12ನೆಯ ಶತಕ) ತನ್ನ 'ಅಭಿಧಾನ ಚಿಂತಾಮಣಿ' ಎಂಬ ಕೋಶದಲ್ಲಿ 'ಹಾಲಃಸ್ಯಾತ್ ಸಾತ ವಾಹನೇ'[15] (III. 72) ಎಂದೂ, ತನ್ನ 'ಅನೇಕಾರ್ಥ ಸಂಗ್ರಹ' ಎಂಬ ಕೋಶದಲ್ಲಿ 'ಶಾಲೋ ಹಾಲೇ ಮ ತ್ಸ್ಯಭೇದೇ'[16] (II. 516), ಮತ್ತು 'ಹಾಲಃ ಸಾತವಾಹನ ಪಾರ್ಥಿವೇ'[17] (II. 521) ಎಂದೂ ಹೇಳಿರುವನು. ಅದೇ ಹೇಮಚಂದ್ರನ 'ಶಬ್ದಾನುಶಾಸನ'ವೆಂಬ ಪ್ರಾಕೃತವ್ಯಾಕರಣದಲ್ಲಿ, 'ಅತಸೀ ಸಾತವಾಹನೇ ಲಃ'[18] (VIII, 1. ೨೧೧) ಎಂಬ ಸೂತ್ರವಿದೆ; ಮತ್ತಿದೇ ಸೂತ್ರಕ್ಕೆ ವಾರ್ತಿಕವಾಗಿ ಆತನು 'ಸಾಲಹಣೋ ಸಾಲವಾಹಣೋ । ಸಾಲಾಹಣೀ ಭಾಸಾ ॥'ಎಂದಿರುವನು—ಅಂದರೆ 'ಸಾತವಾಹನ' ಶಬ್ದವು 'ಸಾಲಹಣ' ಸಾಲವಾಹಣ' ಎಂದಾಗುತ್ತದೆ; ಮತ್ತು 'ಸಾತವಾಹನ'ರ ಕಾಲದಲ್ಲಿ[19] ಅಥವಾ ಅವರ ಆಸ್ಥಾನದಲ್ಲಿ ಬಳಿಕೆಯಲ್ಲಿದ್ದ (ಪ್ರಾಕೃತ)ಭಾಷೆಗೆ 'ಸಾಲಾಹಣೀ' ಎಂದು ಹೆಸರಾಗುತ್ತದೆ. ಅದೇ ಹೇಮಚಂದ್ರನು ತನ್ನ 'ದೇಶೀಕೋಶ'ದಲ್ಲಿ 'ಶಾಲಿವಾಹನ', 'ಸಾಲನ', 'ಹಾಲ' ಮತ್ತು 'ಕುಂತಲ' ಎಂಬೀ ಹೆಸರುಗಳೆಲ್ಲವೂ ಒಬ್ಬನೇ ವ್ಯಕ್ತಿಯ ಹೆಸರುಗಳೆಂದು[20] ಹೇಳಿರುವನು. ಈ 'ಶಾಲಿವಾಹನ', 'ಸಾಲವಾಹಣ(ನ), 'ಸಾಲಹಣ(ನ)' 'ಸಾಲನ', 'ಹಾಲ, 'ಕುಂತಲ' ಮೊದಲಾದ ಹೆಸರುಗಳು 'ಸಾತವಾಹನ'ವಂಶದಲ್ಲಿಯ ಏಕಮಾತ್ರ ಅರಸನ ಹೆಸರುಗಳಲ್ಲದೆ, ಆ ಸಮಗ್ರವಂಶದ ಹಾಗೂ ಆ ವಂಶದಲ್ಲಿಯ ಎಲ್ಲಾ ಅರಸುಗಳನ್ನು ನಿರ್ದೇಶಿಸತಕ್ಕ ಹೆಸರುಗಳಲ್ಲವೆಂದು ಐತಿಹಾಸಿಕರಲ್ಲಿ ಅನೇಕರು ಅಭಿಪ್ರಾಯಪಡುವರಾದರೂ, ಅವನ್ನು ಯಥಾರ್ಥವೆಂದು ಒಪ್ಪಲಾಗುವುದಿಲ್ಲ; ಏಕೆಂದರೆ—

ಈ 'ಸಾತವಾಹನ' ವಂಶದ ಒಬ್ಬ ಪ್ರಸಿದ್ಧ ಅರಸನಾದ' ಗೌತಮಿಪುತ್ರ ಯಜ್ಞಶ್ರೀ ಶಾತಕರ್ಣಿ" ಎಂಬವನ ನಾಣ್ಯದಲ್ಲಿ 'ಗೋತಮಿ ಪುತಸ (ಸ) ಹಿರು (=ಸಿರಿ) ಯಞ ಹಾತಕಣಿಸ(=ಸಾತಕಣಿಸ)' ಎಂದಿದೆ;[21] ಆದುದರಿಂದ 'ಸಿರಿ' ಎಂಬುದು 'ಹಿರು' ಎಂದಿರುವುದರಿಂದಲೂ, 'ಸಾತ' ಎಂಬುದು 'ಹಾತ' ಎಂದಿರುವುದರಿಂದಲೂ, 'ಸಾಲ' ಎಂಬುದೇ 'ಹಾಲ' ಎಂದಾಯಿತೆಂಬುದು ದೃಢವಾಗುತ್ತದೆ. ಇವರ ಇನ್ನೂ ಪ್ರಾಚೀನತರವಾದ ನಾಣ್ಯಗಳಲ್ಲಿ ಬರೇ 'ಸಿರಿ ಸಾತೋ'[22] ಎಂದು ಮಾತ್ರ ಇದೆ. ಈಗ 'ಸಾತವಾಹನ' ಎಂಬುದು 'ಸಾಲವಾಹಣ' ಎಂದಾಗುತ್ತದೆಂದು ಹೇಮಚಂದ್ರನ ಸೂತ್ರದಿಂದ ಸಿದ್ಧವಾಗುವುದರಿಂದ, 'ಸಾತ'='ಸಾಲ'='ಹಾಲ' ಇವೆಲ್ಲವೂ ಒಂದೇ ಶಬ್ದದ ವಿವಿಧ ರೂಪಾಂತರಗಳೆಂದೂ, 'ಸಾತ' ಎಂಬುದು ಹೇಗೂ ವ್ಯಕ್ತಿನಾಮವಲ್ಲ ವಂಶನಾಮವೇ ಎಂದು ಖಂಡಿತವಿರುವುದರಿಂದ, ಇವು ಕೂಡಾ ವಂಶನಾಮಗಳೇ ಎಂದೂ ನಿರ್ಧಾರವಾಗುತ್ತದೆ. 'ಸಾಲಹಣ' ಎಂಬುದು 'ಸಾಲ(ವಾ)ಹಣ'[23] ಎಂಬುದರಿಂದಲೇ; ಹಾಗೆಯೇ 'ಸಾಲನ(ಣ)' ಎಂಬುದು 'ಸಾಲಹಣ' ಎಂಬುದರಿಂದಲೇ. ಆದರೆ 'ಕುಂತಲ' ಎಂಬುದೆಲ್ಲಿಂದ? 'ಸಾತವಾಹನ'ರ ಬಹುಕಾಲೀನ ರಾಜಧಾನಿಯಾಗಿದ್ದ 'ಪ್ರತಿಷ್ಠಾನ' ನಗರವು ಮೂಳಕ' ಅಥವಾ 'ಅಳಕ'ವೆಂದು ಹೆಸರುಳ್ಳ ದೇಶದ ರಾಜಧಾನಿಯು; ಆ ದೇಶವೇ 'ಕುಂತಲ'[24] ವೆಂದೂ ಕರೆಯಲ್ಪಡುತ್ತಿತ್ತು; ಆ ರಾಜ್ಯದಲ್ಲಿ ಇವರ ರಾಜಧಾನಿಯು ಒಯ್ಯಲ್ಪಟ್ಟಂದಿನಿಂದ ಇವರಿಗೆ 'ಕುಂತಲ'ರೆಂದೂ ಹೆಸರು ಬರಲಾಯಿತು. ಕ್ರಿ. ಪೂ. ಸು. 300 (?) ಕ್ಕಿಂತ ಮುಂಚಿನದಾದ ವಾತ್ಸ್ಯಾಯನನ 'ಕಾಮಸೂತ್ರ'[25] ವೆಂಬ ಗ್ರಂಥದಲ್ಲಿ 'ಕುಂತಲಃ ಶಾತಕರ್ಣಿಃ ಶಾತವಾಹನೋ' ಎಂದಿರುವುದರಿಂದ, ಅದಕ್ಕೆ ಮುಂಚೆಯೇ 'ಸಾತವಾಹನ'ರು ಕುಂತಲ ದೇಶದಲ್ಲಿದ್ದರೆಂದು ವ್ಯಕ್ತವಾಗುತ್ತದೆ.[26] ಈ 'ಸಾತವಾಹನ' ವಂಶೀಯರಲ್ಲಿ ಅನೇಕರಿಗೆ 'ಸಾತಕರ್ಣಿ' (ಶಾತಕರ್ಣಿ)[27] ಎಂಬ ಹೆಸರುಗಳಿದ್ದುವೆಂದು 'ವಾಯು'—'ಮತ್ಸ್ಯ'—'ವಿಷ್ಣು'—'ಭಾಗವತ' ಪುರಾಣಗಳಿಂದಲೂ, ವಾತ್ಸ್ಯಾಯನನಿಂದ ಮೇಲುದ್ಧರಿಸಿರುವ ವಾಕ್ಯದಿಂದಲೂ ತೋರುತ್ತಿದೆ; ಆದರೆ ಈ ಹೆಸರು 'ಸಾತವಾಹನ'ವಂಶದ ಹೆಸರಲ್ಲವೆಂದೂ ತದ್ವಂಶೀಯ ಅರಸರಲ್ಲಿ ಕೆಲವರ ಕೇವಲ ವ್ಯಕ್ತಿವಿಶೇಷ ಹೆಸರೆಂದೂ ಐತಿಹಾಸಿಕದಲ್ಲಿ ಅನೇಕರ ಅಭಿಪ್ರಾಯವಿದೆ— ಇದನ್ನೂ ಒಪ್ಪಲಾಗುವುದಿಲ್ಲ; ಏಕೆಂದರೆ 'ಕ' ಕಾರವೂ 'ಹ' ಕಾರವೂ ಸಮಾನವಾಗಿ ಕಂಠ್ಯ (guttaral) ವರ್ಣಗಳಾಗಿರುವುದರಿಂದ, 'ಹ' ಕಾರಕ್ಕೆ 'ಕ'ಕಾರಾದೇಶವು ಬರುವುದೇನೂ ಚೋದ್ಯವಲ್ಲ; ಹೇಮಚಂದ್ರನ ಸೂತ್ರದ ರೀತ್ಯಾ 'ಸಾತವಾಹನ'='ಸಾಲಹಣ'='ಸಾತಹಣ'

ಎಂಬುದರಲ್ಲಿಯ 'ಹ'ಕಾರವು 'ಕ'ಕಾರವಾಗಿ, 'ಸಾತಹಣಿ' ='ಸಾತಕಣ'='ಸಾತಕಣಿ' ಎಂದಾಯಿತು. ಈ 'ಸಾತವಾಹನ'ರ ಶಿಲಾಲೇಖವೊಂದು ಬಳ್ಳಾರಿ ಜಿಲ್ಲೆಯ 'ಮ್ಯಾಕದೋನಿ' (Myakdoni)[28] ಎಂಬಲ್ಲಿ ದೊರಕಿಯದೆ; ಅದರಲ್ಲಿ 'ಸಾತವಾಹನ' ಎಂಬುದಕ್ಕೆ 'ಸತವಘನಿ' ಎಂದಿದೆ; ಎಂಬುದರಿಂದ 'ಸಾತವಾಹನ' ಶಬ್ದದಲ್ಲಿಯ 'ಹ' ಕಾರವು, 'ಘ'ಕಾರವಾದುದೂ, ಅಂತಿಮ 'ಅ' ವರ್ಣವು 'ಇ' ಆದುದೂ ವ್ಯಕ್ತವಾಗುತ್ತದೆ. 'ಕಾಮಸೂತ್ರ'ದಲ್ಲಿಯ 'ಕುಂತಲ: ಶಾತಕರ್ಣಿ: ಶಾತವಾಹನ' ಎಂಬುದರಲ್ಲಿ 'ಕುಂತಲ'ವೆಂಬುದು ದೇಶದಿಂದ ಬಂದ ಹೆಸರೆಂದೂ, 'ಶಾತವಾಹನ' ಎಂಬುದು ವಂಶನಾಮವೆಂದೂ ನಿಶ್ಚಿತವಿರುವುದರಿಂದ, 'ಶಾತಕರ್ಣಿ ಎಂಬುದು ಒಬ್ಬ ಅರಸನ ಸ್ವಕೀಯ ನಾಮವಿಶೇಷವೇನೋ ಎಂದು ಶಂಕೆಯುಂಟಾಗಬಹುದು; ಆದರೆ 'ಸಾತವಾಹನ' ಎಂಬ ಹೆಸರನ್ನು ತದ್ವಂಶಸ್ಥಾಪಕನಿಂದ ಈ ವಂಶೀಯ ಅರಸರೆಲ್ಲರೂ ಹೇಗೆ ಆಂತುಕೊಂಡರೋ, ಹಾಗೆಯೇ 'ಶಾತಕರ್ಣಿ' ಎಂಬುದು ಆ ವಂಶದಲ್ಲಿಯ ಯಾವನೊಬ್ಬ ಪ್ರಸಿದ್ಧ ಪುರುಷನು ಅಥವಾ ಕೆಲವರು 'ಸಾತವಾಹನ' ಶಬ್ದದ ಬದಲಾಗಿ ಆಂತುಕೊಂಡುದರಿಂದ ಇವೆರಡು ಹೆಸರುಗಳು ಪೃಥಕ್ಕೆಂಬ ಮಿಥ್ಯಾಗ್ರಹಿಕೆಯಿಂದಾಗಲಿ, ಅಥವಾ 'ಅಯೋಧ್ಯಾನಾಯಕ: ಶ್ರೀಮಾನ್ ರಾಘವೋ ರಘುಪುಂಗವ:' ಎಂಬಂತಾಗಲೀ ಧರಿಸಲ್ಪಟ್ಟಿರಬೇಕು. ಈ ವಂಶದ ಅರಸನಾದ 'ಶಾಲಿವಾಹನ' ಎಂಬ ಹೆಸರಿನ ಅರಸನ 'ಶಕ'ವು ಈಗಲೂ ಪ್ರಸಿದ್ಧವಿದೆಯಷ್ಟೇ; ಈ 'ಶಾಲಿವಾಹನ' ಎಂಬುದು ವ್ಯಕ್ತಿವಿಶೇಷವಾದ ಹೆಸರಲ್ಲದೆ ವಂಶದ ಹೆಸರಲ್ಲವೆಂದು ಸಾಹಿತ್ಯದಿಂದಲೂ ಜನಶ್ರುತಿಯಿಂದಲೂ ತೋರುತ್ತದಾದರೂ, ಹೇಮಚಂದ್ರನ ಸೂತ್ರದಿಂದಲೂ, ಮೈಸೂರಿನ ಶಿಕಾರಪುರ ನಂ. 281ನೆಯ ಶಿಲಾಲೇಖದಿಂದಲೂ 'ಶಾಲಿವಾಹನ' ಎಂಬುದು 'ಸಾತವಾಹನ' ಶಬ್ದದ ರೂಪಾಂತರ ತಾನೇ ಆದ್ದರಿಂದ ವಂಶನಾಮವಲ್ಲದೆ ವ್ಯಕ್ತಿನಾಮವಲ್ಲವೆಂಬುದು ಖಚಿತವಷ್ಟೇ. ಮೈಸೂರಲ್ಲಿಯ 'ತಾಲಗುಂಡ'ದಲ್ಲಿ[29]ಯ ಸ್ತಂಭದಲ್ಲಿರುವ ಕದಂಬರ ಶಿಲಾಲೇಖದಲ್ಲಿ 'ಸಾತಕರ್ಣಿ' ಎಂಬ ಹೆಸರಿದೆ; ಅದಾದರೂ ವ್ಯಕ್ತಿನಾಮವಲ್ಲದೆ ವಂಶನಾಮವು—ಇವೇ ಮೊದಲಾದ ಕಾರಣಗಳಿಂದ 'ಶಾತಕರ್ಣಿ' ಎಂಬುದು 'ಸಾತವಾಹನ' ಶಬ್ದದೊಂದು ರೂಪಾಂತರವಷ್ಟೇ, ಆದ್ದರಿಂದ ಅದು ವಂಶನಾಮವಲ್ಲದೆ ವ್ಯಕ್ತಿನಾಮವಲ್ಲ. ಉತ್ತರಕನ್ನಡ ಜಿಲ್ಲೆಯ ಬನವಾಸಿಯಲ್ಲಿಯೂ ಮೈಸೂರಲ್ಲಿಯ ಮಳವಲ್ಲಿಯಲ್ಲಿಯೂ ದೊರೆತಿರುವ ಶಿಲಾಲೇಖಗಳಲ್ಲಿ[30] 'ಹಾರಿತೀಪುತ ವಿನ್ಹುಕಡ ಚುಟುಕುಲನಂದ ಸಾತಕಂಣಿ' ಎಂಬ 'ವೈಜಯಂತಿ' (ಬನವಾಸಿ)ಯ ಅರಸನ ಹೆಸರಿದೆ; ಹಾಗೆಯೇ 'ಚುಟು', 'ಮುಹರಟಿ' ಎಂಬ ವಿಶೇಷಣಗಳಿಂದ ಕೂಡಿರುವ 'ಸಾತಕಂಣಿ' (ಶಾತಕರ್ಣಿ) ಎಂಬ ಅಂಕಿತವಿರುವ ಕೆಲ ಅರಸರ ಶಿಲಾಲೇಖಗಳೂ ದೊರೆತಿವೆ; ಈ ಅರಸರು ಸಾತವಾತವಾಹನವಂಶೀಯರಲ್ಲವೆಂದೂ, 'ಚುಟು' 'ಮುಹರಟಿ' ಮೊದಲಾದ ಇತರ ವಂಶದವರೆಂದೂ, ಸಾತವಾಹನವಂಶವು ಕಳೆಗುಂದಿದ ಅಥವಾ ಅಳಿದ ಬಳಿಕ ಅವರ ರಾಜ್ಯದ ಭಾಗಗಳು ಈ ಬೇರೆ ವಂಶದವರ ಕೈಸೇರಿದುವು, ಅಲ್ಲಿಂದ ಇತರ ವಂಶದವರೂ 'ಸಾತಕಂಣಿ' (ಶಾತಕರ್ಣಿ) ಎಂಬುದನ್ನು ಉಪನಾಮವನ್ನಾಗಿಯೋ ಬಿರುದನ್ನಾಗಿಯೋ ತಾಳಿಕೊಂಡರೆಂದೂ ಹಲವರ ಅಭಿಪ್ರಾಯವದೆ; ಆದರೆ ಇದು ಇನ್ನೂ ಶಂಕಾರೂಪದಲ್ಲಿದೆಯಲ್ಲದೆ ಯಥಾರ್ಥೀಕರಿಸಲ್ಪಟ್ಟಿರುವುದಿಲ್ಲವಾದ್ದರಿಂದ, ಅಂತಹ ಅನಿರ್ಧಾರಿತವಾದ ಅಭಿಪ್ರಾಯವನ್ನು ನಾನು ಅಂಗೀಕರಿಸದೆ, ಈ 'ಚುಟು', 'ಮುಹರಟಿ' ಮೊದಲಾದವರು ಸಾತವಾಹನರಿಂದ ಪೃಥಗ್ವಂಶೀಯರಲ್ಲವೆಂದೂ, ತದ್ವಂಶೀಯ ಉಪಶಾಖೆಯವರೇ ಎಂದು ಭಾವಿಸುತ್ತೇನೆ.

### ಸಾತವಾಹನರು ಆಂಧ್ರರಲ್ಲ—ಆರ್ಯರೇ.

ಸಾತವಾಹನರು ಆಂಧ್ರ (ಅಂಧ್ರ)ರಲ್ಲ—ಆರ್ಯರೇ; ಅವರನ್ನು 'ಅಂಧ್ರ' (ಆಂಧ್ರ) ರೆಂದು ತಪ್ಪುಬಗೆದು, ಆಂಧ್ರವಂಶೀಯರೆಂದು ಪುರಾಣಗಳಲ್ಲಿ ಉಲ್ಲೇಖಿಸಿರುವುದು ಕೇವಲ ವಿಕ್ಲವ (confusion) ದೋಷವಲ್ಲದೆ ಬೇರೆಯಲ್ಲವು; ಏಕೆಂದರೆ—

(1) ಇದುವರೆಗೆ ದೊರೆತಿರುವ ಇವರ ಶಿಲಾಲೇಖಗಳೆಲ್ಲವೂ, ನಾಣ್ಯಗಳೆಲ್ಲವೂ ಪ್ರಾಕೃತ ಭಾಷೆಯಲ್ಲಿಯೂ, 'ಬ್ರಾಹ್ಮೀ' ಎಂಬ ಆರ್ಯಲಿಪಿಯಲ್ಲಿಯೂ ಇವೆಯಲ್ಲದೆ ಆಂಧ್ರ (ತೆಲುಗು) ಭಾಷೆಯಲ್ಲಾಗಲೀ, ಇತರ

ಯಾವಬಗೆಯ ದ್ರಾವಿಡಭಾಷೆ ಅಥವಾ ಬರಹದಲ್ಲಾ
ಗಲೀ ಇಲ್ಲವು; (2) ಇವರ ಪ್ರಾಚೀನತರವಾದ ಶಿಲಾಲೇ
ಖಗಳೂ ನಾಣ್ಯಗಳೂ ಪಶ್ಚಿಮ ಭಾರತದಲ್ಲಿ ದೊರೆತಿರು
ತ್ತವೆ; (3) ಇವರ ಯಾವುದೊಂದು ಶಿಲಾಲೇಖದಲ್ಲಿ
ಯಾದರೂ ತಾವು ಆಂಧ್ರ ದೇಶೀಯರೆಂದಾಗಲೀ ಆಂಧ್ರ
ಜಾತಿಯವರೆಂದಾಗಲೀ ಇವರು ಹೇಳಿರುವುದಿಲ್ಲ; (4)
'ಅಂಧ್ರ' (ಆಂಧ್ರ)ರು ಅನಾರ್ಯರೆಂಬುದನ್ನು 'ಐತರೇಯ
ಬ್ರಾಹ್ಮಣ'ದಿಂದ ಕಂಡಿರುವೆವಷ್ಟೇ; ಮೌರ್ಯಚಕ್ರ
ವರ್ತಿಯಾದ ಅಶೋಕನ (ಕ್ರಿ. ಪೂ. ಸು. 274ರಿಂದ
ಸು. 236 ವರೆಗೆ ಆಳಿದುದು) ೧೩ನೆಯ ಶಿಲಾಲೇಖದಲ್ಲಿ
(Rock Edict XIII) 'ಅಂಧ್ರ'ರು ಆತನ ಪ್ರಜೆಗಳಾಗಿ
ದ್ದರೆಂದು, ಅಂದರೆ 'ಅಂಧ್ರ' 'ದೇಶವು ಆತನ ಸಾಮ್ರಾಜ್ಯ
ದಲ್ಲಿ ಒಳಪಟ್ಟಿದ್ದಿತೆಂಬುದು [31] ಸ್ಪಷ್ಟವಾಗಿ ಇದೆ. ರೋ
ಮಿಾಯ ಲೇಖಕನಾದ 'ಪ್ಲೀನಿ'ಯು (Pliny — ಕ್ರಿ. ಶ.
ಸು. 77) 'ಅಂಧ್ರ'ರು ಗೋದಾವರೀ-ಕೃಷ್ಣಾ ನದಿಗಳ
ಮಧ್ಯವರ್ತಿಯಾದ ಪ್ರದೇಶದಲ್ಲಿಯ ಜನರೆಂದು ಹೇಳಿರು
ವನು. [32] ಶ್ರೀ. ದೇವದತ್ತ ಭಾಂಡಾರಕರರು [33] ಅ
ಶೋಕನ ಕಾಲದಲ್ಲಿಯ 'ಅಂಧ್ರ' ದೇಶವು ಈಗಣ ವಿಶಾ
ಖಪಟ್ಣ ಜಿಲ್ಲೆ, ಮತ್ತು ಅದರ ನೆರೆಯಲ್ಲಿಯ ಜಯಪುರ ಜ
ಮಿಾನುದಾರಿಗಳನ್ನೂ, ಬಹುಶಃ ಗೋದಾವರೀ-ಕೃಷ್ಣಾ
ಜಿಲ್ಲೆಗಳನ್ನೂ ಮಧ್ಯಪ್ರಾಂತದ ಕೆಲವಂಶವನ್ನೂ, ನಿಜಾ
ಮರಾಷ್ಟ್ರದ ತೆಂಕಣ ಭಾಗವನ್ನೂ ಒಳಕೊಂಡಿರಬೇ
ಕೆಂದು ಊಹಿಸುತ್ತಾರೆ; ಇವೆಲ್ಲವುಗಳಿಂದ ಅಂಧ್ರ ದೇಶ
ವು ಮೂಡಣ ದೇಶವಲ್ಲದೆ ಪಡುವಣ ದೇಶವಲ್ಲವೆಂ
ಬುದು ದೃಢವಾಗುತ್ತದೆ; (5) ಕಲಿಂಗದೇಶಾಧಿರಾಜ
ನಾದ 'ಮಹಾಮೇಘವಾಹನ'ನೆಂಬ ಬಿರುದುಳ್ಳ 'ಖಾರ
ವೇಲ'ನೆಂಬ ಅರಸನ (ಕ್ರಿ. ಪೂ. ಸು. 169) 'ಹಾಥಿ
ಗುಂಫಾ' ಎಂಬ ಗವಿಯಲ್ಲಿಯ ಶಿಲಾಲೇಖದಲ್ಲಿ [34] ಆತ
ನು ದಕ್ಷಿಣಾಪಥದಲ್ಲಿಯ ಆಂಧ್ರರ ದೇಶವನ್ನು ಎರಡು
ಸಲ ಗೆದ್ದನೆಂದೂ, ಪಶ್ಚಿಮ ದಿಕ್ಕನ್ನು (ಅಂದರೆ ಪಶ್ಚಿಮ
ಭಾರತವನ್ನು) ಪಾಲಿಸುತ್ತಿದ್ದ 'ಸಾತಕಣಿ' (ಶಾತಕರ್ಣಿ)
ಎಂಬ ಅರಸನ ಮೇಲೆ ದೊಡ್ಡದೊಂದು ದಂಡನ್ನು ಕಳು
ಹಿಸಿದನೆಂದೂ [35] ಇದೆ. ಇದರಿಂದ 'ಸಾತವಾಹನ'ರು
ಬೇರೆ, ಆಂಧ್ರರು ಬೇರೆ ಎಂಬುದು ತಟ್ಟನೆ ವ್ಯಕ್ತವಾಗು
ತ್ತದೆ ಮಾತ್ರವಲ್ಲ, ಖಾರವೇಲನ ಕಾಲದಲ್ಲಿ ಸಾತವಾಹ
ನರು ಪಶ್ಚಿಮಭಾರತದಲ್ಲಿ ಆಳುತ್ತಿದ್ದರೆಂಬುದೂ, ಖಾರ
ವೇಲನು ಆಂಧ್ರರನ್ನು ಗೆದ್ದನು, ಆದರೆ ಸಾತಕರ್ಣಿಯ
ಮೇಲೆ ದೌಡನ್ನು ಕಳುಹಿಸಿದ ಕಥೆ ಮಾತ್ರ ಇದೆಯಲ್ಲದೆ
ಜಯಹೊಂದಿದ ಮಾತಿಲ್ಲದುದರಿಂದ, ಆತನನ್ನು ಗೆಲ್ಲಲಾ
ಗಲಿಲ್ಲವೆಂದೂ ಖಚಿತವಾಗುವುದರಿಂದ, 'ಸಾತವಾಹ'ನ
ರ ಸಾಮ್ರಾಜ್ಯವು ವಿಪುಲವಾಗಿದ್ದಿರಬೇಕೆಂದೂ, ಅವರ
ಶೌರ್ಯವಿಕ್ರಮಪ್ರತಾಪಾದಿಗಳು ಚಿಲ್ಲರಿಯಾಗಿದ್ದಿಲ್ಲ
ವೆಂದೂ ಬೇರೆ ಹೇಳಬೇಕೆಂದಿಲ್ಲವು; (6) 'ಹಾಥಿಗುಂ
ಫಾ', 'ಗಿರನಾರ್', 'ತಾಲಗುಂಡ' ಇವೇ ಮೊದಲಾದೆಡೆಗಳ
ಲ್ಲಿರುವ ಇತರವಂಶದರಸರ ಶಿಲಾಲೇಖಗಳಲ್ಲಿ ಇವರ
ನ್ನು 'ಸಾತವಾಹನ', 'ಸಾತಕರ್ಣಿ' ಎಂದೇ ಉಲ್ಲೇಖಿಸಿದೆ
ಯಲ್ಲದೆ, ಆಂಧ್ರರೆಂದಲ್ಲ, [36] (7) ಪುರಾಣಗಳಿಂದಲೂ,
ಇದುವರೆಗೆ ದೊರೆತಿರುವ 'ಸಾತವಾಹನ'ರ ಶಿಲಾಲೇಖ
ಮತ್ತು ನಾಣ್ಯಗಳಿಂದಲೂ ಇತಿಹಾಸಕ್ಕೆ ತಿಳಿದುಬಂದಿರುವ
ಈ ವಂಶದ ಅರಸರಲ್ಲಿ ಮೊದಲನೆಯವನಾದ 'ಸಿಮುಖ
ಸಾತಕರ್ಣಿ [37] ಎಂಬವನು ಮಗಧ ದೇಶದ 'ಶುಂಗಾನ್ವಯ'
ದ 'ಪುಷ್ಯಮಿತ್ರ'ನೆಂಬ ಅರಸಿಂದ ಅವಂತೀದೇಶವನ್ನು
ಗೆದ್ದು [38] ಕಿತ್ತುಕೊಂಡು, ಅಲ್ಲಿ ತನ್ನ ರಾಜ್ಯವನ್ನು ಸ್ಥಾಪಿ
ಸಿದನೆಂದಿದೆ; ಇವರ ರಾಜಧಾನಿಯು ಉಜ್ಜಯಿನಿ (ಅವಂ
ತೀದೇಶದಲ್ಲಿ)ಯಾಗಿದ್ದಿರಬೇಕೆಂಬುದು, ಈ 'ಸಿಮುಖ'
ನ ಮೊಮ್ಮಗನೆಂದು ಖಾರವಾಲನ ಶಿಲಾಲೇಖದಲ್ಲಿ
ಉಲ್ಲೇಖಿಸಲ್ಪಟ್ಟವನೆಂದು ಬಗೆಯಲ್ಪಡುವ 'ಶಾತಕರ್ಣಿ
ಯ ಹೆಸರು ಆ ಅವಂತೀದೇಶದಲ್ಲಿಯ 'ಸಾಂಚಿ'
(Sanchi) ಎಂಬಲ್ಲಿ ಅಶೋಕನ ಕಾಲದಿಂದಿರುವ ಬೌದ್ಧ
ಮಹಾಸ್ತೂಪದಲ್ಲಿ [39] ಕೆತ್ತಲ್ಪಟ್ಟಿರುವುದರಿಂದಲೂ, ಈ
'ಸಾತವಾಹನ' ವಂಶದ ಅರಸರ ನಾಣ್ಯಗಳಲ್ಲಿರುವ 'ಉ
ಜ್ಜಯಿನಿಯ ಚಿಹ್ನ'ವೆಂಬುದೊಂದು [40] ಲಕ್ಷಣವಿಶೇಷ
ದಿಂದಲೂ ವ್ಯಕ್ತವಾಗುತ್ತದೆ. ಈ ಅವಂತೀದೇಶವು
ಆಂಧ್ರದೇಶಕ್ಕಿಂತ ಎಷ್ಟೋ ಪಶ್ಚಿಮಕ್ಕಿದೆ. ಈ ವಂಶದ
ವರಲ್ಲಿ ಒಬ್ಬ ಅರಸನು 'ಕುಂತಲಃ ಸ್ವಾತಿಕರ್ಣಿಃ' ಎಂದು
'ಮತ್ಸ್ಯ ಪುರಾಣ'ದಲ್ಲಿ (ಅ. 273) ಉಲ್ಲೇಖಿಸಲ್ಪಟ್ಟಿರು
ವನು; ಐತಿಹಾಸಿಕರು 'ಕುಂತಲಃ ಸ್ವಾತಿಕರ್ಣಿ' ಎಂಬು
ದು ಆತನ ಸ್ವನಾಮವಾದ ಒಂದೇಹೆಸರೆಂದು ಭಾವಿಸಿರು
ವರು, ಆದರೆ ಇದು ಸರಿಯಲ್ಲ; ಯಾಕಂದರೆ ಇದು
ವ್ಯಕ್ತಿನಾಮವಾಗಿದ್ದರೆ, 'ಕುಂತಲಸ್ವಾತಿಕರ್ಣಿ' ಎಂದಿ
ರಬೇಕಿತ್ತಲ್ಲದೆ, 'ಕುಂತಲ' ಎಂಬ ಶಬ್ದಕ್ಕೆ ವಿಸರ್ಗ
ಬರಲಾಗದಿತ್ತು; ಹಾಗೆ ವಿಸರ್ಗ ಬಂದುದರಿಂದ [41] ಇವೆ
ರಡು ಒಂದೇ ಹೆಸರಲ್ಲವೆಂದೂ, 'ಕುಂತಲನೆಂಬ ಸ್ವಾತಿ
ಕರ್ಣಿ (ಸಾತಕರ್ಣಿ)' ಎಂದೂ ಆಗುತ್ತದೆ. — ಇವೆರಡೂ

ವ್ಯಕ್ತಿನಾಮಗಳಲ್ಲವೆಂಬುದನ್ನು ಹಿಂದೆ ವಿವರಿಸಿದೆಯಷ್ಟೇ; ಆದ್ದರಿಂದ ಈ ಅರಸನಿಗೆ 'ಕುಂತಲ'ನೆಂದು ಉಪನಾಮವಿರುವುದರಿಂದ ಬಹುಶಃ ಈತನ ಆಳ್ವಿಕೆಯಲ್ಲಿ ಅವಂತೀ ದೇಶದ ಉಜ್ಜಯಿನಿಯಲ್ಲಿರುತ್ತಿದ್ದ ಇವರ ರಾಜಧಾನಿಯು ಕುಂತಲ ದೇಶದಲ್ಲಿಯ ಪ್ರತಿಷ್ಠಾನ ನಗರಕ್ಕೆ ಒಯ್ಯಲ್ಪಟ್ಟಿರಬೇಕೆಂದು ನಾನು ಭಾವಿಸುತ್ತೇನೆ. ಹಾಗೆ ಕುಂತಲ ದೇಶದಲ್ಲಿ ಇವರು ತಮ್ಮ ರಾಜ್ಯದ ಕೇಂದ್ರವನ್ನು ಸ್ಥಾಪಿಸುತ್ತಲೇ, ಕುಂತಲದಿಂದ ಅನತಿದೂರವರ್ತಿಯಾದ ಆಂಧ್ರ ದೇಶ (ತೆಲುಗು ದೇಶ)ವನ್ನೂ ಇವರು ಗೆದ್ದು, ಅದನ್ನು ತಮ್ಮ ಸಾಮ್ರಾಜ್ಯದಲ್ಲಿ ಒಳಪಡಿಸಿ, 'ಆಂಧ್ರಭೃತ್ಯ'ರೆಂಬ[42] ಬಿರುದನ್ನಾಂತು, ಆ ಆಂಧ್ರ ದೇಶದಲ್ಲಿಯ 'ಧಾನ್ಯಕಟಕ'[43] ವೆಂಬಲ್ಲಿ ಇನ್ನೊಂದು ರಾಜಧಾನಿಯನ್ನೂ ನೆಲೆಯಿಸಿದರು—ಈ ಆಂಧ್ರ ದೇಶೀಯ ರಾಜಧಾನಿಯಾದ 'ಧಾನ್ಯಕಟಕ'ದಲ್ಲಿ ಯುವರಾಜನ ಆಸ್ಥಾನವಿದ್ದಿತು.[44] ಇವರಾಂತ ಈ 'ಆಂಧ್ರಭೃತ್ಯ'ರೆಂಬ ಬಿರುದು ಯಥಾರ್ಥವಾಗಿ ಬಹುವ್ರೀಹಿಯಾದರೂ, ಷಷ್ಠೀತತ್ಪುರುಷವೆಂದು ಅನ್ಯಥಾ ಗ್ರಹಿಸಲ್ಪಟ್ಟು, ಇವರು ಆಂಧ್ರರ ಭೃತ್ಯರೆಂದೂ, ಪಶ್ಚಿಮಭಾರತದಿಂದ ಇವರು ಇಳಿತಂದು ಮೂಡಣಸೀಮೆಯಲ್ಲಿಯ ಆಂಧ್ರ ದೇಶದಲ್ಲಿ ರಾಜಧಾನಿಯನ್ನು ಸ್ಥಾಪಿಸಿದುದರಿಂದ ಕ್ರಮೇಣ ಆಂಧ್ರರೆಂದೂ, ಪುರಾಣಗಳಲ್ಲಿಯೂ ಜನಶ್ರುತಿಯಲ್ಲಿಯೂ ಅಯಥಾವತ್ ಭಾವಿಸಲ್ಪಟ್ಟಿರಬೇಕಲ್ಲದೆ, ಐತಿಹಾಸಿಕದೃಷ್ಟ್ಯಾ ಇದೆಂದಿಗೂ ವಾಸ್ತವವಲ್ಲವು; (೮) 'ಅಂಧ್ರ' (ಆಂಧ್ರ) ಎಂಬೀ ಶಬ್ದವು ಪ್ರಾಕೃತದಲ್ಲಿ 'ಅಂಧ' ಎಂದಾಗುತ್ತದೆ. ಭಾರತದ ಪಶ್ಚಿಮಕರಾವಳಿಯಲ್ಲಿ ನೆಲಸಿದ 'ಸಾತ್ತ್ವತ'ರಲ್ಲಿಯ ಬಹುಶಃ 'ಅಂಧ(ಕ)' ಕುಲದವರಾದೀ[45] ಸಾತವಾಹನರ 'ಅಂಧ' ಎಂಬೀ ಕುಲನಾಮವು 'ಅಂಧ್ರ' ಶಬ್ದದ ಪ್ರಾಕೃತರೂಪವಾದ 'ಅಂಧ' ಎಂಬ ಶಬ್ದದೊಂದಿಗೆ ಭ್ರಮಿಸಲ್ಪಟ್ಟು, ಅದರಿಂದ ಇವರು 'ಆಂಧ್ರ'ರೆಂದು ಬಗೆಯಲ್ಪಡಲಾದರೂ ಶಕ್ಯವೇ. ಇವೇ ಮೊದಲಾದ ಕಾರಣಗಳಿಂದ ಸಾತವಾಹನರು ಅಂಧ್ರ (ಆಂಧ್ರ)ರಲ್ಲ; ಮತ್ತಿವರು ಇತರ ದ್ರಾವಿಡಕುಲದವರಾಗಿರಲಿಕ್ಕೂ, ಅಥವಾ ಹಾಗೆ ಶಂಕಿಸಲ್ಪಡಲಾದರೂ ಏನೂ ಕಾರಣವಿಲ್ಲದುದರಿಂದ, ಇವರು ಆರ್ಯರೆಂಬುದೇ ಸರಿ.

**ತುಳುನಾಡು ಇವರ ಮೂಲಸ್ಥಾನವಾಗಿರಬೇಕು.**

'ಸತ್ತ್ವತ'ರು (ಸಾತ್ತ್ವತರು) ದಕ್ಷಿಣಾಪಥದಲ್ಲಿ ನೆಲಸಿದರೆಂಬುದನ್ನು ಈ ಮುಂಚೆ ಹೇಳಿದೆಯಷ್ಟೇ; ಬಹುಶಃ ಆ ಸಾತ್ತ್ವತರಲ್ಲಿಯ 'ಅಂಧ(ಕ)' ಕುಲದವರಾಗಿದ್ದುದರಿಂದ, 'ಸಾತವಾಹನ'ರು 'ಅಂಧ್ರ' (=ಅಂಧ) ರೆಂದು ಬಗೆಯಲ್ಪಟ್ಟಿರಬೇಕೆಂದೂ ಹೇಳಿಯದೆ. ಆ ಸಾತ್ತ್ವತರಲ್ಲಿಯ 'ಅಂಧಕ' ಕುಲದವರಾದೀ 'ಸಾತವಾಹನ'ರ ಹಿರಿಯರು ಆರ್ಯಾವರ್ತದಿಂದ ದಕ್ಷಿಣಾಪಥಕ್ಕೆ ಇಳಿತಂದು ನಮ್ಮಾ ತುಳುನಾಡಿನಲ್ಲಿ ನೆಲಸಿರಬೇಕು; ಮತ್ತೀ ತುಳುನಾಡಿಂದಲೇ ಅವರ ಕುಲದಲ್ಲಿಯ ಈ 'ಸಾತವಾಹನ' ವಂಶವು ಮೊಳೆತಿರಬೇಕು, ಅಂದರೆ 'ಸಾತವಾಹನ' ಎಂಬೀ ವಂಶದ ಮೂಲಸ್ಥಾನವು ಈ ತುಳುನಾಡಾಗಿರಬೇಕು; ಏಕೆಂದರೆ

(1) ಅರಸು ಇಲ್ಲದೊಂದು ರಾಜ್ಯದಲ್ಲಿ (ಅಂದರೆ 'ಅರಾಜ್ಯಕರಾಜ್ಯ'ವೆಂದಲ್ಲ, 'ಪ್ರಜಾಸತ್ತಾತ್ಮಕವಾದ ರಾಜ್ಯ'ವೆಂದು ಅರ್ಥ) 'ಸಾತವಾಹನ'ರ ಆದಿಮಪುರುಷನು (ಈತನ ಹೆಸರಿಲ್ಲ-ಈತನು 'ಸಿಮುಖ'ನಿಗಿಂತ ಎಷ್ಟೋಹಿಂದಾಗಿಹೋದವನಾಗಿರಬೇಕು) ರಾಜನಾದನೆಂದು 'ಭವಿಷ್ಯ ಪುರಾಣ'ದಲ್ಲಿದೆ ಎಂದೂ, ಅದೇ ಆದಿಮ ಸಾತವಾಹನನು ಅರಸಾಗಿ ನೆಲೆತ ರಾಜ್ಯವು 'ಕೇರಲ' ದೇಶದ ನೆರೆಯಲ್ಲಿತ್ತೆಂದು ಒಂದು ಜೈನ ಆಖ್ಯಾಯಿಕೆಯಲ್ಲಿದೆ ಎಂದೂ ಶ್ರೀ ಕಾಶೀಪ್ರಸಾದ ಜಾಯಸವಾಲರು[46] ಬರೆದಿರುವರು. ಆದರೆ ಆ ಆದಿಮ ಸಾತವಾಹನನು, ರಾಜ್ಯನಿಲ್ಲದ ರಾಜ್ಯದಲ್ಲಿ ಕಾಲೂರುವ ಮುಂಚೆಯೇ ಆತನ ಹೆಸರು 'ಸಾತವಾಹನ'ನೆಂದಿತ್ತೋ, ಅಥವಾ ಆತನು ರಾಜನಾದ ಮೇಲೆ ತಾನೇ ಈ ಹೆಸರನ್ನು ತಾನು ಬಂದು ನೆಲಸಿರುವ ದೇಶನಾಮದಿಂದಾಗಲೀ, ತದ್ದೇಶೀಯರ ಹೆಸರಿಂದಾಗಲೀ ಆಂತುಕೊಂಡನೋ ಎಂಬುದು ತಿಳಿಯಬರುವುದಿಲ್ಲ. ಯಃಕಶ್ಚಿತ್ ಒಬ್ಬ ಮನುಷ್ಯನು ಒಂದು ದೇಶಕ್ಕರಸಾದರೆ, ಅಥವಾ ಆ ದೇಶೀಯರಿಂದ ಅರಸಾಗಿಮಾಡಿಕೊಳ್ಳಲ್ಪಟ್ಟರೆ, ಆ ದೇಶದವರು ತನಗಿತ್ತ ಹೆಸರನ್ನು ಧರಿಸಿಕೊಳ್ಳುವನಲ್ಲದೆ, ತನ್ನ ಪೂರ್ವನಾಮವನ್ನೇ ಇಟ್ಟುಕೊಳ್ಳನು;[47] ಅದಲ್ಲದೆ ಪ್ರಜಾಸತ್ತಾತ್ಮಕವಾದ ರಾಜ್ಯದಲ್ಲಿ ಅರಸಾದುದರಿಂದ ಆತನು ಅವರಲ್ಲಿಯವನೊಬ್ಬನಾದರೂ, ಅಥವಾ ಹೊರಸೀಮೆಯಿಂದ ಬಂದವನಾದರೂ, ಅವರ ಇಷ್ಟವಿಲ್ಲದೆ ಪಟ್ಟವನ್ನೇರಲಾರನಾದ್ದರಿಂದ, ಅವರು ಕೊಡುವ ಹೆಸರ

ನ್ನೇ ತಾಳಿಕೊಳ್ಳಿರಬೇಕೆಂಬುದು ಸರಿಯೆಂದು ಕಾಣುತ್ತದೆ. ಆದ್ದರಿಂದ ಆದಿಮ ಸಾತವಾಹನನ 'ಸಾತವಾಹನ' ಎಂಬ ಹೆಸರು, ಆತನು ತಾನರಸಾದ ದೇಶದ ಅಥವಾ ದೇಶೀಯರ ಹೆಸರಿಂದ ತಾಳಿಕೊಂಡ ಹೆಸರಾಗಿರಬೇಕು; ಅದಲ್ಲದೆ ಆಗಣ ಕಾಲದಲ್ಲಿ ಅರಸರು ತಮ್ಮ ದೇಶದ ಅಥವಾ ಕುಲ ನಾಮುಗಳಿಂದಲೇ ಹೆಸರಿಸಲ್ಪಡುತ್ತಿದ್ದರಲ್ಲದೆ[48] ಸ್ವಕೀಯನಾಮುದಿಂದಲ್ಲವಾದ್ದರಿಂದ, 'ಸಾತವಾಹನ' ಎಂಬುದು ಸ್ವಕೀಯನಾಮುವಲ್ಲ; ಹೊಸದಾಗಿ ಅರಸಾದವನು ಇನ್ನು ಮುಂದೆ ಕುಲಸ್ಥಾಪಕನಾಗಬೇಕಷ್ಟೇ, ಆದ್ದರಿಂದ 'ಸಾತವಾಹನ' ಎಂಬ ಹೆಸರು ದೇಶನಾಮುದಿಂದಲೇ ಹೊಂದಿರುವ ಹೆಸರೆಂದಾಗುತ್ತದೆ; (2) 'ಸಾತಿಯ(ಪುತ)'ರ ಸ್ವತಂತ್ರ ದೇಶವು[49] 'ಕೇರಲ(ಪುತ)'ರ ದೇಶದ ನೆರೆಯ ದೇಶವೆಂಬುದು ಅಶೋಕನ ದ್ವಿತೀಯ ಶಿಲಾಶಾಸನದಿಂದ ವ್ಯಕ್ತವಾಗುತ್ತದೆ. ಮೌರ್ಯಚಕ್ರವರ್ತಿಯಾದ ಚಂದ್ರಗುಪ್ತನ ಆಸ್ಥಾನದಲ್ಲಿದ್ದ ಯವನರಾಯಭಾರಿಯಾದ 'ಮೆಗಸ್ತನೀಸ (Megasthenes)ನು (ಕ್ರಿ. ಪೂ. ಸು. 302) ಭಾರತವರ್ಷದಲ್ಲಿಯ ಜನಪದಗಳಲ್ಲಿ 'ಸಾತೇ' (Satae) ಎಂಬ ಜನರಿದ್ದರೆಂದು ಹೇಳಿರುವನು; ರೋಮಾಯ 'ಪ್ಲೀನಿ' (Pliny)ಯು ದಕ್ಷಿಣಾಪಥದಲ್ಲಿಯ 'ಆಂಧ್ರ'ರನ್ನು ವರ್ಣಿಸಿ, ಆ ಬಳಿಕ ಈ 'ಸಾತೇ' ಎಂಬವರನ್ನು ಹೇಳಿರುವದರಿಂದ, ಈ 'ಸಾತೇ' ಎಂಬವರು ದಕ್ಷಿಣಾಪಥದ ಪಡುಪಕ್ಕದವರೆಂದು ಊಹಿಸಲಾಗುತ್ತದೆ. ಗ್ರೀಕ್ ಭೌಗೋಲಿಕನಾದ 'ಪ್ತೊಲೆಮಾಯು'[50] (Ptolemy ಕ್ರಿ. ಶ. ಸು. 150)ನು ಭಾರತವರ್ಷದ ಪಡುಕರಾವಳಿಯ ತೆಂಕಣ ಭಾಗದಲ್ಲಿ 'ಸಾತೋಇ' (Satoi)[51] ಎಂಬ ಜನರಿರುವ ದೇಶವನ್ನು ಉಲ್ಲೇಖಿಸಿರುವನು. ಈ 'Satoi' ಎಂಬುದು ಪ್ರಥಮಾವಿಭಕ್ತಿಯ ಬಹುವಚನವಾಗಿರುವುದರಿಂದ (ಇದರ ಏಕವಚನ ರೂಪವು 'Satos' ಎಂದು– ಅಂದರೆ ಸಂಸ್ಕೃತದಲ್ಲಿ 'ಸಾತಃ' ಎಂದು) ಈ ಶಬ್ದವು ಜನಪದದಿಂದ ದೇಶಕ್ಕೆ ಬಂದ ಹೆಸರು; ಅಂದರೆ ಇದರ ಏಕವಚನವಾದ 'ಸಾತ' (Satos) ಎಂಬುದು ದೇಶದ ಹೆಸರನ್ನೂ, ಬಹುವಾಚಿಯಾದ 'ಸಾತಾ' (Satoi) ಎಂಬುದು ತದ್ದೇಶೀಯ ಜನಪದವನ್ನೂ ಸೂಚಿಸುತ್ತವೆ; ಆದ್ದರಿಂದ ನನ್ನ ವಿಚಾರದ ರೀತ್ಯಾ[52] ಪ್ತೊಲೆಮಾಯನ 'Satoi' ಎಂಬವರು ಸಂಸ್ಕೃತದಲ್ಲಿ 'ತಾಲಾಃ' ಎಂದೂ, ಪ್ರಾಕೃತದಲ್ಲಿ 'ಸಾತಾ' (='ಸಾತಿಯ'—'ತಾಲೀಯ' ಎಂಬ ಸಂ. ಶಬ್ದದಿಂದ) ಎಂದೂ ಹೆಸರುಗಳುಳ್ಳ 'ತಾಲವನ' ದೇಶದ ಜನರೇ–ಅಂದರೆ ನಮ್ಮಾ ತುಳುನಾಡಿನ ಆಗಣ ಜನರೇ. 'ಸಾತವಾಹನ' ಎಂಬ ಹೆಸರು ಕೇರಳದ ನೆರೆಯಲ್ಲಿ ರಾಜನಿಲ್ಲದ ರಾಜ್ಯದಲ್ಲಿ ರಾಜನಾದ ಆದಿಮ 'ಸಾತವಾಹನ'ನ ಸ್ವಕೀಯ ಅಥವಾ ಪೃಥಜ್ಞಾಮುಮಾತ್ರನೆಂದಾದರೆ, ಹಾಗೆಯೇ ಆತನ ಅಂತಹ ನಾಮುವಿಶೇಷದಿಂದಲೇ ಮೊದಲಾಗಿ ಆತನ ವಂಶಕ್ಕೆ ಬಂದ ಹೆಸರೆಂದಾದರೆ, ಆತನಿಗಿಂತ ಎಷ್ಟೋ ಶತಕಗಳ ಬಳಿಕ ಪ್ತೊಲೆಮಾಯನ ಕಾಲದಲ್ಲಿ (ಕ್ರಿ. ಶ. 150) ಯಾದರೂ ಈ ತುಳುನಾಡಿನ ಜನರಿಗೆ 'Satoi' (=ಸಾತರು) ಎಂಬ ಹೆಸರು ಹಿಂದುಳಿಯುತ್ತಿದ್ದಿಲ್ಲ; ಪ್ತೊಲೆಮಾಯನು ತನ್ನ ಸಮಕಾಲೀನನಾದ ಸಾತವಾಹನವಂಶದ ಅರಸನ ಹೆಸರು 'Siro Polemaios' ('ಸಿರೊ ಪೊಲೆಮಾಯಿಯೊಸ್') ಎಂದರೆ 'ಶ್ರೀ ಪುಳುಮಾಯ' ಎಂದೂ, ಆತನ ರಾಜಧಾನಿಯು 'ಬಯ್ಥನ' (Baithan) ಎಂದರೆ 'ಪೈಠಣ' (ಪ್ರತಿಷ್ಠಾನ)ದಲ್ಲಿತ್ತೆಂದೂ[53] ಹೇಳಿರುವನು. ಅಶೋಕನು ಕಾಲವಾದ (ಕ್ರಿ. ಪೂ. ಸು. 236) ಕೆಲಕಾಲದಲ್ಲಿಯೇ 'ಸಾತವಾಹನ' ರಾಜನೊಬ್ಬನು ಪುಷ್ಯಮಿತ್ರ ಶುಂಗನಿಂದ ಅವಂತೀದೇಶವನ್ನು ಕಿತ್ತುಕೊಂಡನೆಂಬುದರಿಂದಲೂ, ಆತನ ಬಳಿಕ 'ಸಾತಕರ್ಣಿ' ಎಂಬವನು ಪಶ್ಚಿಮಭಾರತದಲ್ಲಿ (ಅವಂತೀದೇಶದಲ್ಲಿ) ಆಳುತ್ತಿದ್ದನೆಂದು ಖಾರವೇಲನ (ಕ್ರಿ. ಪೂ. ಸು. 169) ಶಿಲಾಲೇಖದಲ್ಲಿರುವುದರಿಂದಲೂ, 'ಸಾತವಾಹನ'ರು ತಮ್ಮ ಆದಿಮ ಪೂರ್ವಜನು ಕೇರಲದೇಶದ ನೆರೆಯಲ್ಲಿ ಸ್ಥಾಪಿಸಿದ, ಅಂದರೆ ಅವಂತಿಯಿಂದ ಎಷ್ಟೋ ದೂರದಲ್ಲಿ ದಕ್ಷಿಣಭಾರತದಲ್ಲಿ ಇದ್ದ ತಮ್ಮ ಮೂಲಸ್ಥಾನದಿಂದ ಹೊರಟು ಕ್ರಮಶಃ ಅಲ್ಲಲ್ಲಿ ರಾಜ್ಯಗಳನ್ನು ಗೆದ್ದುಕೊಂಡು ಮುಂದರಿಯುತ್ತಿರಬೇಕು; ಹೀಗೆ ಮಾಡುತ್ತಾ ಅವಂತಿಯನ್ನು ಸೇರಿ ಅಲ್ಲಿ ರಾಜ್ಯವನ್ನು ಸ್ಥಾಪಿಸುವಾಗ, ಅವರು ಮೂಲಸ್ಥಾನವನ್ನು ಬಿಟ್ಟು ಕಡಿಮೆಯಿಂದ ಕಡಿಮೆ ಎಂದರೂ ಒಂದೆರಡು ಶತಕಗಳು ದಾಟಿಹೋಗಿರಬೇಕು; ಆದರೂ ಅಶೋಕನ ಶಿಲಾಲೇಖದಲ್ಲಿ 'ಕೇರಲಪುತ'

ದೇಶದ ನೆರೆಯ ದೇಶಕ್ಕೆ 'ಸಾತಿಯ (ಪುತ)' ಎಂದೇ ಹೆಸರಿರುತ್ತದೆ. ಈ ಕಾರಣಗಳಿಂದ ಆದಿಮ ಸಾತ ವಾಹನನು 'ಕೇರಲಪುತ' ದೇಶದ ನೆರೆಯಲ್ಲಿ, ಅಂದರೆ 'ತಾಲವನ' ಅಥವಾ 'ಸಾತಿಯ (ಪುತ)' ಎಂಬೀ ತುಳು ನಾಡಿನಲ್ಲಿ ರಾಜನಾದಾಗ, ತನ್ನ 'ಸಾತವಾ(ಹ)ನ' ಎಂಬ ಹೆಸರನ್ನು ಈ ದೇಶದ ಹೆಸರಿಂದಲೇ ಆಂತುಕೊಂಡು ದಲ್ಲದೆ, ಅದು ಆತಗೆ ಅದಕ್ಕಿಂತ ಮುಂಚಿತವಾಗಿ ಇದ್ದ ಹೆಸರಲ್ಲ; ಇದು ಹೇಗಂದರೆ–'ತಾಲವನ' ದೇಶ—'ತಾಲ ವಾನರು' ಎಂದರೆ ತದ್ದೇಶೀಯರು; 'ತಾಲವಾನ'= 'ಸಾತವಾನ'='ಸಾತವಾ(ಹ)ನ';[54] ಸಂಸ್ಕೃತಶಬ್ದವೆಂದು ಭಾವಿಸಲ್ಪಟ್ಟಿರುವ ಈ 'ಸಾತವಾ(ಹ)ನ' ಶಬ್ದವು, 'ತಾಲ ವನ' ಎಂಬುದರಿಂದಲೇ ಉಂಟಾದ ಪ್ರಾಕೃತಶಬ್ದವೆಂಬುದು ಯತಾರ್ಥವೆಂದು ಕಾಣುತ್ತದೆ. (3) ಕಡಲೂರಿಂದ (ದಕ್ಷಿಣ ಆರ್ಕಾಡು ಜಿಲ್ಲೆ) ಮದರಾಸುವರೆಗಣ ಮೂಡಣ ಕರಾವಳಿಯಲ್ಲಿ ಸಾತವಾಹನರ ನಾಣ್ಯಗಳು ದೊರೆತಿವೆ; ಇವುಗಳ ಒಂದು ಪಕ್ಕದಲ್ಲಿ 'ಸಿರಿ ಪುಳುಮಾವಿ' ಎಂಬ 'ಬ್ರಾಹ್ಮೀ' ಬರಹದ ಅಕ್ಷರಗಳೂ ಮತ್ತು ಉಜ್ಜಯಿನಿಯ ಚಿಹ್ನವೂ, ಮತ್ತೊಂದು ಪಕ್ಕದಲ್ಲಿ ಎರಡು ಕೂಕಂಬ ಗಳುಳ್ಳ ಹಡಗಿನ ಚಿತ್ರವೂ ಇವೆ. ಉಜ್ಜಯಿನೀ ಚಿಹ್ನವು ಆಪಾತತಃ 'ಸಾತವಾಹನ'ವಂಶಸೂಚಕವು.[55] ಇವರ ಪಶ್ಚಿಮಭಾರತದಲ್ಲಿ ದೊರಕಿರುವ, ಮತ್ತು ಮೇ ಲಣ ನಾಣ್ಯಗಳಿಗಿಂತ ಪ್ರಾಚೀನತರವಾದ ನಾಣ್ಯಗಳೆಂದು ಬಗೆಯಲ್ಪಟ್ಟಿರುವುವುಗಳಲ್ಲಿ 'ಸಿರಿ ಸಾತೋ' ಎಂಬ 'ಬ್ರಾಹ್ಮೀ' ಅಕ್ಷರಗಳೂ, ಹೊಳೆಯ ಮತ್ತು ಆನೆಯ ಚಿತ್ರವೂ ಇವೆ.[55a] ಹಡಗಿನ ಚಿತ್ರವು ಈ ಸಾತ ವಾಹನರಿಗೆ ಸಮುದ್ರತೀರದ ದೇಶಗಳೊಂದಿಗೆ ಇದ್ದಿರ ಬೇಕಾದ ಸಂಬಂಧವನ್ನು ಸೂಚಿಸುತ್ತದೆಂಬುದರಲ್ಲಿ ಸಂಶಯವಿಲ್ಲ. ಪುಳುಮಾಯಿಯ ಕಾಲದಲ್ಲಿ ಆಂಧ್ರ ದೇಶವೂ ದಕ್ಷಿಣ ಭಾರತದ ಮೂಡು ಕರಾವಳಿಯ ಭಾಗಗಳೂ ಇವರ ಆಳಿಕೆಯಲ್ಲಿದ್ದುವೆಂಬುದು ನಿಜ; ಆದರೆ ಪುಳುಮಾಯಿಯ ರಾಜಧಾನಿಯು ಒಳಸೀಮೆ ಯಲ್ಲಿಯ 'ಪೈಠಣ'ವಾಗಿದ್ದಿತಲ್ಲದೆ, ಮೂಡುಕರಾ ವಳಿಯಲ್ಲಿಯ ಊರಲ್ಲವಾದ್ದರಿಂದ, ಪೂರ್ವಸಮು ದ್ರ ತೀರದಲ್ಲಿ ಇವರ ನಾಣ್ಯಗಳೆ ದೊರೆತಿರುವೆನೆಂಬುದ ರಿಂದಲೇ ಅವುಗಳಲ್ಲಿಯ ಹಡಗಿನ ಚಿತ್ರವು ಮೂಡುಗಡಲ ತೀರದಲ್ಲಿಯ ದೇಶಗಳೊಂದಿಗೆ ಇವರಿಗಿರತಕ್ಕ ಸಂಬಂಧ ವನ್ನು ಸೂಚಿಸುತ್ತದೆಂದು ಅನುಮಾನಿಸುವುದಕ್ಕಿಂತಲೂ ಈ ವಂಶದವರ ಮೂಲಸ್ಥಾನವಾದ ಪಡುಗಡಲ ತೀರ ದಲ್ಲಿಯ ದೇಶಗಳೊಂದಿಗೆ ಇವರಿಗೆ ಪ್ರಥಮತಃ ಇರು ತ್ತಿದ್ದ ಸಂಬಂಧವು ಮರೆತು ಹೋಗದಂತೆ ಅದರ ಚಿರ ಸ್ಮಾರಕವಾಗಿ ಎರಕಹುಯ್ದ ಚಿತ್ರವೆಂದು ನಿರ್ಧರಿಸು ವುದು ಉಚಿತವೆಂದು ನಾನೆಣಿಸುತ್ತೇನೆ. ಪಶ್ಚಿಮ ಕರಾ ವಳಿಯಲ್ಲಿರುವಂತೆ ಗಟ್ಟಗಳೂ, ಕಾಡುಗಳೂ (ಬಾಹುಳ್ಯತೆ ಯಿಂದ) ಹೊಳೆಗಳೂ ಪೂರ್ವಕರಾವಳಿಯಲ್ಲಿಲ್ಲವು— ಈ ಕರಾವಳಿಯ ಕಾಡುಗಳಲ್ಲಿ ಆನೆಗಳು ಈಗಲಾದರೂ ತುಂಬಾ ಇವೆ; ಆದ್ದರಿಂದ ಹೊಳೆಯ ಮತ್ತು ಆನೆಯ ಚಿತ್ರವುಳ್ಳ ನಾಣ್ಯಗಳಿಂದ ಪಡುಗಡಲ ತೀರದಲ್ಲಿಯ ದೇಶಗಳೊಂದಿಗೆ ಇವರಿಗೆ ಮೂಲತಃ ಇದ್ದ ಸಂಬಂಧವನ್ನು ಅಂದರೆ ಇವರು ಮೂಲದಲ್ಲಿ ಪಶ್ಚಿಮ ಸಮುದ್ರತೀರ ನಿವಾಸಿಗಳಾಗಿದ್ದಾರೆಂಬುದನ್ನು ಇನ್ನೂ ಸ್ಫುಟೀಕರಿಸು ತ್ತದೆ. (4) ಮೈಸೂರಿನ ಮಳವಳ್ಳಿಯಲ್ಲಿಯೂ, ಉತ್ತರ ಕನ್ನಡದ ಬನವಾಸಿಯಲ್ಲಿಯೂ ಇರುವ ಶಿಲಾ ಲೇಖಗಳಲ್ಲಿ 'ಹಾರಿತೀಪುತ ವಿನ್ಹುಕಡ ಚುಟುಕುಲನಂದ ಸಾತಕಂಣಿ' ಎಂದಿದೆಯಷ್ಟೇ; ಇವುಗಳಲ್ಲಿ ಬನವಾಸಿಯ ಕಲ್ಲಿನಲ್ಲಿ ಐದು ಹೆಡೆಗಳ ನಾಗಚಿತ್ರವಿದೆ;[56] ಮತ್ತು ಆ ನಾಗ ವಿಗ್ರಹವನ್ನು ಆ ಅರಸನ ಮಗಳಾದ 'ನಾಗ ಸಿರಿ' (=ನಾಗಶ್ರೀ)ಯೂ, ಆಕೆಯ ಮಗನಾದ 'ಸಾತ ಸಿವಖದ (=ಸಾತ ಶಿವಸ್ಕಂದ')ನೂ ದತ್ತಿಮಾಡಿದರೆಂದಿದೆ. ಮಲ ವಳ್ಳಿ–ಬನವಾಸಿಗಳನ್ನೊಳಕೊಂಡಿರುವ ಪ್ರದೇಶಕ್ಕೆ ಹಿಂದ ಣ ಕಾಲದಲ್ಲಿ 'ನಾಗಖಂಡ'–'ನಾಗರಖಂಡ'ಗಳೆಂಬ ಹೆಸ ರಿದ್ದುವು.[57] 'ನಾಗ'ನೆಂಬ ಹೆಸರಿಂದ ಸರ್ಪಗಳನ್ನು ಪೂಜಿಸುವುದು ಸಮಗ್ರದಕ್ಷಿಣಭಾರತದಲ್ಲಿ[58] ಸರ್ವತ್ರ ಇದೆ; ಅದರಲ್ಲಿಯೂ ನಮ್ಮಾ ತುಳುನಾಡಿನಲ್ಲಿ (ಮತ್ತು ಕೇರಳ ದೇಶದಲ್ಲಿ ಕೂಡಾ,) ನಾಗನ ಕಲ್ಲಿಲ್ಲದ ಠಾವಿಲ್ಲ, ನಾಗಬನಗಳಿಲ್ಲದ ಹಳ್ಳಿಯಿಲ್ಲ—ಮನೆಮನೆಯಲ್ಲಿಯೂ ನಾಗಪ್ರತಿಮೆಗಳಿವೆ, ನಾಗಪೂಜೆಯಿದೆ; ನಾಗರಪಂಚ ಮಿಯ ಹಬ್ಬವನ್ನಾಚರಿಸದ ಹಿಂದುವಿನ ಮನೆಯಿಲ್ಲ. ಬೇರೆ ನಾಡುಗಳಲ್ಲಿಯೂ ಹೀಗಿರಬಹುದಾದರೂ, ಈ ನಾಗಪೂಜೆಯನ್ನು ಕುರಿತು ನಮ್ಮಾ ನಾಡಿನಲ್ಲಿ ವಿಶೇಷವಾ ದೊಂದು ವಿಷಯವಿದೆ, ಅದೇನಂದರೆ—ಸ್ಕಂದನೆಂಬ ಕಾ ರ್ತಿಕೇಯನನ್ನು ನಾಗ (=ಸರ್ಪ) ರೂಪದಿಂದ, 'ಸುಬ್ರ ಹ್ಮಣ್ಯ'ನೆಂಬ[59] ಹೆಸರಿಂದ ಆರಾಧಿಸುವ ವಿಧಾನವು ನಮ್ಮಾ

ತುಳುನಾಡಿನಲ್ಲಿರುವಂತೆ ಇತರತ್ರ ಎಲ್ಲಿಯೂ ಇಲ್ಲ—(i) ನಮ್ಮಾ ಜಿಲ್ಲೆಯಲ್ಲಿ ಊರೂರುಗಳಲ್ಲಿರುವ 'ಸಾಸ್ತಾವು'ಗಳೆಂಬ ಕಲ್ಲುಗಳು ನಾಗರೂಪಿಯಾದ ಸುಬ್ರಹ್ಮಣ್ಯನ ವಿಗ್ರಹಗಳು; (ii) ಈ ಜಿಲ್ಲೆಯಲ್ಲಿಯು, 'ಸುಬ್ರಹ್ಮಣ್ಯ–ಮಂಜೇಶ್ವರ, ಬಳ್ಳಮಂಜ, ಕಾಡುಕುಕ್ಕೆ, ಕುಡುಪು' ಮೊದಲಾದ ಊರುಗಳಲ್ಲಿಯ ಸುಪ್ರಸಿದ್ಧವಾದ ಸುಬ್ರಹ್ಮಣ್ಯಾಲಯಗಳಲ್ಲಿ ಸುಬ್ರಹ್ಮಣ್ಯನೆಂದು ಪೂಜಿಸಲ್ಪಡುವುದು ನಾಗ (ಸರ್ಪ) ವಿಗ್ರಹವೇ; ಮತ್ತು ಇವೆಲ್ಲಾ ಎಡೆಗಳಲ್ಲಿ ವರ್ಷಾವಧಿಯ ರಥೋತ್ಸವವಾಗುವುದು ಮಾರ್ಗಶಿರ ಶುಕ್ಲ ಷಷ್ಠಿ ಅಂದರೆ 'ಸ್ಕಂದಷಷ್ಠಿ'ಯ ದಿನವೇ (ಈ ದಿನಕ್ಕೆ ಉತ್ತರ ದೇಶದಲ್ಲಿ 'ಚಂಪಾಷಷ್ಠಿ' ಎಂದಲ್ಲದೆ, 'ಸ್ಕಂದ ಷಷ್ಠಿ' ಎಂದು ಹೆಸರಿಲ್ಲ); (iii) ನವಗ್ರಹಗಳಲ್ಲಿಯ 'ರಾಹು' ಎಂಬ ಗ್ರಹದ ಪೀಡಾಪರಿಹಾರಾರ್ಥವಾಗಿ ದಾನ ಮಾಡುವುದು 'ನಾಗ (ಸರ್ಪ)' ಪ್ರತಿಮೆಯನ್ನು, ಮತ್ತು ಅಬಗ್ಗೆ ಆರಾಧಿಸುವುದು 'ಸುಬ್ರಹ್ಮಣ್ಯ'ನೆಂಬ ಸ್ಕಂದನನ್ನು; (IV) ತಮಿಳುನಾಡಿನಲ್ಲಿ ಸ್ಕಂದನಿಗೆ 'ಸುಬ್ರಹ್ಮಣ್ಯ'ನೆಂಬ ಹೆಸರಿದೆ; ಆದರೆ ಆತನ ವಿಗ್ರಹವು ಸರ್ಪರೂಪಿಯಲ್ಲ, ನವಿಲನ್ನೇರಿರುವ ಆರುಮೋರೆಯದು (ಮಯೂರಾಸನ–ಷಣ್ಮುಖ); (V) 'ಅತ್ತಾವರ ದೈಯ್ಯೊಂಗುಳೆ ಪಾಡ್ದನ' ಎಂಬ ತುಳು ಭೂತಪ್ರಾರ್ಥನೆ (ಅಥವಾ ಭೂತದ ಹಾಡು)ಯಲ್ಲಿ 'ಕುಕ್ಕೆ ಸುಬ್ರಾಯ ದೇವೆರ್' ಎಂದಿದೆ; 'ಸ್ಕಂದಷಷ್ಠಿ'ಯ ದಿನಕ್ಕೆ ತುಳುವಿನಲ್ಲಿಯೂ ಕನ್ನಡದಲ್ಲಿಯೂ ಈ ಜಿಲ್ಲೆಯಲ್ಲಿ ವಾಡಿಕೆಯಾಗಿ ಹೇಳುವುದು 'ಕುಕ್ಕೆ ಸಟ್ಟಿ' ಅಥವಾ 'ಕುಕ್ಕೆ ಷಷ್ಠಿ' ಎಂದೇ; 'ಕುಕ್ಕೆ' ಎಂಬ ತುಳು ಶಬ್ದಕ್ಕೆ 'ಮಗು', 'ಮಗ' ಎಂದರ್ಥವು. ಆದ್ದರಿಂದ 'ಕುಕ್ಕೆ' ಎಂಬುದು ಸ್ಕಂದನ 'ಕುಮಾರ' ಎಂಬ ಹೆಸರಿನ ಅಚ್ಚ ತುಳುಭಾಷೆಯ ರೂಪು; ಹೀಗಾದುದರಿಂದ 'ಕುಕ್ಕೆ ಸುಬ್ರಾಯ ದೇವೆರ್' ಅಂದರೆ 'ಸರ್ಪ (ರೂಪ)ನಾದ ಕುಮಾರ ದೇವರು' ಎಂದಾಗುತ್ತದೆ, ಈಗ 'ಸಾತವಾಹನ' ವಂಶೀಯರಲ್ಲಿ 'ಸ್ಕಂದ' ಎಂಬ ಹೆಸರಿನ ಕೆಲ ಅರಸರು ಪುರಾಣಗಳಲ್ಲಿ ಹೇಳಲ್ಪಟ್ಟಿರುವರು ('ಸ್ಕಂದಸ್ತಂಭಿ', 'ಸ್ಕಂದಸ್ವಾತಿ', 'ಶಿವಸ್ಕಂದ);' ಕುಮಾರ ಸ್ವಾಮಿಯ ವರದಿಂದ ಸಾತವಾಹನ ಅರಸೊಬ್ಬನು ಸರ್ವ ವಿದ್ಯಾವಿಶಾರದನಾದರೆಂದು 'ಕಥಾಸರಿತ್ಸಾಗರ'ದಲ್ಲಿ ತೋರುವುದನ್ನು ಹಿಂದೆ ಹೇಳಿಯದೆ; ಇದರಿಂದ ಇವರಿಗೆ ಸ್ಕಂದಾರ್ಚನದಲ್ಲಿ ಪಕ್ಷಪಾತವಿದ್ದಿತೆಂದೂ, ಮೇಲೆ ಹೇಳಿದ ಶಿಲಾಲೇಖಗಳಲ್ಲಿಯ ನಾಗವಿಗ್ರಹದಿಂದಲೂ, ಸಾತವಾಹನರಾಯನ ದತ್ತಿಬಿಟ್ಟ ಮಗಳ ಹೆಸರು 'ನಾಗಶ್ರೀ', ಅವಳ ಮಗನ ಹೆಸರು 'ಶಿವಸ್ಕಂದ'ನೆಂಬುದರಿಂದಲೂ, ಆ ಸಾತವಾಹನರಾಯನ ಹೆಸರೇ 'ವಿಷ್ಣುಸ್ಕಂದ' (ವಿನ್ಹುಕಡ) ನೆಂಬುದರಿಂದಲೂ, ಇವರು ನಾಗರೂಪಿಯಾದ ಸ್ಕಂದನ ಆರಾಧಕರೆಂದೂ ಕಾಣುತ್ತದೆ. ಇಷ್ಟೇ ಅಲ್ಲ; ನಮ್ಮ ಜಿಲ್ಲೆಯಲ್ಲಿ ಎಲ್ಲೆಲ್ಲಿಯೂ ಕಾಣಸಿಗುವ 'ಸಾಸ್ತಾವು'[60] ಗಳೆಂಬೀ ಕಲ್ಲುಗಳು ಯಾವುವು? 'ಸಾಸ್ತಾವು' ಎಂಬ ಶಬ್ದದ ಯಥಾರ್ಥರೂಪವು 'ಸಾತಾವು' ಎಂದೇ; ಇದು ಸಂಸ್ಕೃತ ಶಬ್ದವೆಂಬ ಭ್ರಮೆಯಿಂದಾಗಲೀ ಅಥವಾ ಸಂಸ್ಕೃತ ಶಬ್ದದ ರೂಪೋಚ್ಚಾರಗಳನ್ನು ಅನುಕರಿಸುವುದಕ್ಕೆಂದಾಗಲೀ ಇದನ್ನು 'ಸಾಸ್ತಾವು' ಎಂದು ಉಚ್ಚಾರಿಸಲೂ ಬರೆಯಲೂ ಕಾರಣವಾಗಿರಬೇಕು. ಈ 'ಸಾತಾವು' ಎಂಬುದು 'ಸಾತ(ನ) + ಕಾವು' ಎಂದೇ. ನಾಗಬನಗಳಿಗೆ ದ್ರಾವಿಡ ಭಾಷೆಯ ಹೆಸರು 'ಕಾವು' ಎಂದೇ; ಈಗಲೂ ತಮಿಳು ಜಿಲ್ಲೆಗಳಲ್ಲಿಯೂ[61] ಮಲೆಯಾಳ ಸೀಮೆಯಲ್ಲಿಯೂ 'ನಾಗಬನ'ಗಳಿಗೆ 'ಕಾವು' ('ನಾಗನ್ ಕಾವು' 'ನಾಗತ್ತಾನ್ ಕಾವು,' 'ಪಾಂಬನ್ ಕಾವು')[62] ಎಂಬುದೇ ಹೆಸರು. ನಮ್ಮಾ ಜಿಲ್ಲೆಯ ತುಳು ಮತ್ತು ಕನ್ನಡ ಭಾಷೆಗಳಿಂದ 'ಕಾವು' ಎಂಬೀ ಅರ್ಥದ ಶಬ್ದವು ಬಹುಶಃ ಲುಪ್ತವಾಗಿಹೋಗಿ, ಅದರ ಬದಲಾಗಿ 'ನಾಗಬನ'ವೆಂಬ ಶಬ್ದವೇ ವ್ಯವಹಾರದಲ್ಲಿದೆಯಾದರೂ, ಈ ಜಿಲ್ಲೆಯ ಕೆಲ ಹಳ್ಳಿಗಳ ಹೆಸರುಗಳಲ್ಲಿ ಇದು ಈಗಲೂ ಕಾಣಬರುತ್ತದೆ. ಉದಾ (1) ಪುತ್ತೂರು ತಾಲೂಕಿನಲ್ಲಿಯ 'ಕಾವು' ಎಂಬ ಹಳ್ಳಿಯು 'ನಾಗಕಾವು' ಎಂಬುದರಿಂದಲೇ "ಕಾವು"ಎಂಬ ಹೆಸರನ್ನು ಹೊಂದಿರಬೇಕು; (2) ಕುಂಬಳೆಯಿಂದ ಕೊಂಚ ಮೂಡಲಲ್ಲಿ 'ನಾಯಕಾಪು' ಎಂಬ ಹಳ್ಳಿಯಿದೆ; ಇದು 'ನಾಗಕಾವು'[63] ಎಂಬುದರ ತುಳುರೂಪವು; ನಾಯಕಾಪಿನಲ್ಲಿ ನಾಗಬನವೂ 'ಸಾತಾವು' ಕಲ್ಲುಗಳೂ ಇವೆ. 'ನಾಗನ + ಕಾವು' = 'ನಾಗಕಾವು ಎಂಬಂತೆಯೇ, 'ಸಾತನ + ಕಾವು' = 'ಸಾತಕಾವು;' ಈ 'ಸಾತಕಾವು' ಎಂಬುದರಿಂದ ನಡುವಣ ಪರುಷಕಂಠ್ಯವಾದ

'ಕ' ಸ್ವರವು ಲೋಪವಾಗಿ,[64] 'ಸಾತಕಾವು' ಎಂಬುದು 'ಸಾತಾವು' ಎಂದಾಯಿತು; ಆದ್ದರಿಂದ ಆ ದೇವತೆಯ ಹೆಸರು 'ಸಾತ'ನೆಂಬುದು ವ್ಯಕ್ತವಾಗುತ್ತದೆ. 'ತಾಲವನ' (=ಸಾತಬನ) ದೇಶದ ಜನರಾದ 'ತಾಲ' (ಸಾತ) ಅಥವಾ 'ತಾಲೀಯ' (=ಸಾತೀಯ)ರ ದೇವತೆಯಾದ್ದರಿಂದ, 'ಸಾತ'ನೆಂದು ಹೆಸರುಬಂದಿತು. ಕೇರಲದೇಶದ ನೆರೆಯಲ್ಲಿಯ ತುಳುನಾಡಿನಲ್ಲಿ ಸಾತವಾಹನವಂಶವನ್ನು ಪ್ರಥಮತಃ ಸ್ಥಾಪಿಸಿದ ತದ್ವಂಶದ ಆದಿಮಪುರುಷನು, ಈ ಸಾತನೆಂಬ ದೇವತೆಯ (ಅಂದರೆ ಸುಬ್ರಹ್ಮಣ್ಯನ=ನಾಗರೂಪಿಯಾದ ಸ್ಕಂದನ) ಆರಾಧಕನಾಗಿರಬೇಕಾದುದರಿಂದ, ಅದೇ ಐದು ಹೆಡೆಯ ನಾಗವಿಗ್ರಹವನ್ನು ತನ್ನ 'ವಾಹನ' (ಅಂದರೆ 'ಲಾಂಛನ',=ಧ್ವಜ)ವಾಗಿ ಮಾಡಿಕೊಂಡು 'ಸಾತವಾಹನ'ನೆಂಬ ಹೆಸರನ್ನು ತಾಳಿರಲೂ ಬಹುದು. (5) ನಮ್ಮಾ ಜಿಲ್ಲೆಯಲ್ಲಿರುವ 'ಹಾಲಾಡಿ' (ಹಾಲರ ಹಾಡಿ),[65] 'ಹಾರಾಡಿ' (ಹಾರ=ಹಾಲರ ಹಾಡಿ), 'ಶಾಸ್ತ್ರಾನ' ('ಸಾತರ ಸ್ಥಾನ') 'ಸಾಂತಾರ'(=ಸಾತಾರ=ಸಾತರ ಹಾರ)[66]– ಇವೇ ಮೊದಲಾದ ಹಳ್ಳಿಗಳ ಹೆಸರುಗಳು ಈ ತುಳುನಾಡಿನಲ್ಲಿ 'ಸಾತವಾಹನರು' ನೆಲೆಗೆಯ್ದು ಇದ್ದರೆಂಬುದನ್ನೇ ದೃಢೀಕರಿಸುತ್ತವೆ. [67]

### ಅನೂಪ—ಅಲೂಪ.

'ಹರಿವಂಶ'ದಲ್ಲಿಯ 'ವಿಷ್ಣುಪರ್ವ' [68] ದಲ್ಲಿ ಈ ಕಥೆಯಿದೆ—ಹರ್ಯಶ್ವನೆಂಬೊಬ್ಬರಾಯನು 'ಮಧುವನ' (ಮಥುರಾ ನಗರದ ಪ್ರದೇಶ)ದ ಅರಸಾದ ಮಧುವೆಂಬ ದೈತ್ಯನ ಮಗಳಾದ ಮಧುಮತಿಯನ್ನು ಮದಿವೆಯಾಗಿ, ಆತನಿಂದ 'ಅನೂಪ' [69] ವಿಷಯದಲ್ಲಿಯ 'ಆನರ್ತ್ತ' [70] ವೆಂಬ ರಾಜ್ಯವನ್ನು ಹೊಂದಿ, ಅಲ್ಲಿ ಅರಸುಗೆಯ್ದನು; ಆತನ ಮಗನಾದ 'ಯದು' ಎಂಬವನು ಧೂಮ್ರವರ್ಣನೆಂಬ ನಾಗರಾಜನ ಐದು ಮಗಳಂದಿರನ್ನು ಮದುವೆಯಾಗಿ ಅವರಲ್ಲಿ ಐದು ಮಗಂದಿರನ್ನು ಪಡೆದನು. ಅವರಲ್ಲಿ 'ಮಾಧವ'ನೆಂಬವನನ್ನು ತನ್ನ ರಾಜಧಾನಿಯಿದ್ದ ಆನರ್ತ್ತದೇಶಕ್ಕೆ ಮುಂದಣ ಅರಸೆಂದು ನೇಮಿಸಿ, ಇತರರನ್ನು ಬೇರೆಬೇರೆಡೆಗಳಲ್ಲಿ ಹೊಸ ರಾಜ್ಯಗಳನ್ನು ಸ್ಥಾಪಿಸಿ ಆಳಿರೆಂದು ಕಳುಹಿಸಿದನು. ಇವರಲ್ಲಿ 'ಮುಚುಕುಂದ'ನೆಂಬವನು ಅನೂಪದೇಶದಲ್ಲಿ 'ಮಾಹಿಷ್ಮತಿ' ಎಂಬ ನಗರವನ್ನು ನಿರ್ಮಿಸಿ, ಅದನ್ನು ತನ್ನ ರಾಜಧಾನಿ ಮಾಡಿದನು; 'ಪದ್ಮವರ್ಣ'ನೆಂಬವನು 'ಸಹ್ಯಪರ್ವತ'ದ ಪಾರ್ಶ್ವದಲ್ಲಿ 'ಪದ್ಮಾವತ'ವೆಂಬ ರಾಜ್ಯವನ್ನು ರಚಿಸಿ, ಅದರಲ್ಲಿ 'ಕರವೀರ' (ಈಗಣ 'ಕೊಲ್ಲಾಪುರ') ವೆಂಬ ನಗರವನ್ನು ಸ್ಥಾಪಿಸಿದನು; 'ಸಾರಸ'ನೆಂಬವನು 'ವನವಾಸಿ' [71] ಎಂಬ ಜನಪದವನ್ನು ನೆಲೆಯಿಸಿ, ಅಲ್ಲಿ 'ಕ್ರೌಂಚಪುರ'ವೆಂಬುದನ್ನು ಸ್ಥಾಪಿಸಿದನು; 'ಹರೀತ'ನೆಂಬವನು ಸಮುದ್ರ ದ್ವೀಪದಲ್ಲಿ ರಾಜ್ಯವನ್ನು ಸ್ಥಾಪಿಸಿದನು—ಈತನ ರಾಜ್ಯದಲ್ಲಿ 'ಮುದ್ಗರಾಃ' ಎಂಬ ದಾಶರು (ಬೆಸ್ತರು) [72] ಇದ್ದರು. ಯುವರಾಜನಾದ ಮಾಧವನ ಮಗನು 'ಸಾತ್ತ್ವತ'ನು; ಈ ಸಾತ್ತ್ವತನ ವಂಶದವರು ಸಾತ್ತ್ವತರೆಂದು ಪ್ರಸಿದ್ಧರಾದರು; [72] ಸಾತ್ತ್ವತನ ಮಗನಾದ ಭೀಮನೆಂಬವನು ಆನರ್ತ್ತದೇಶದಲ್ಲಿ ಆಳುತ್ತಿರುವಾಗ ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿ ಆಳುತ್ತಿದ್ದನು. ಶ್ರೀರಾಮನ ತಮ್ಮನಾದ ಶತ್ರುಘ್ನನು ಮಧುದೈತ್ಯನ ಮಗನಾದ ಲವಣನೆಂಬವನನ್ನು ಕೊಂದು, ಮಧುವನದಲ್ಲಿ ನೂತನವಾಗಿ ಸ್ಥಾಪಿಸಿದ್ದ ಮಥುರಾ ನಗರವನ್ನು, ಶ್ರೀರಾಮಾವತಾರವು ಸಮಾಪ್ತವಾದ ಬಳಿಕ, ಭೀಮನು ತನ್ನ ಮಾತೃಸಂಬಂಧದಿಂದ ಗೆದ್ದುಕೊಂಡು, ತನ್ನ ಸೋದರ ಮಾವನಾದ ಲವಣನಿಗೆ ಮಕ್ಕಳಿಲ್ಲದುದರಿಂದ, ತನ್ನ ಅರವೀಡನ್ನು ಅಲ್ಲಿಗೊಯ್ದನು ..... ..... ಇತ್ಯಾದಿ.

ಈ ಕಥೆಯಲ್ಲಿ ಹರೀತನು ಬಂದು ನೆಲೆಯಾದ ದೇಶದ ಹೆಸರಾಗಲೀ, ಆತನು ಅದಕ್ಕಿತ್ತ ಹೆಸರಾಗಲೀ, ಆತನ ರಾಜಧಾನಿಯ ಹೆಸರಾಗಲೀ ಹೇಳಿಲ್ಲ (ಇತರ ಸೋದರರು ಸ್ಥಾಪಿಸಿದ ದೇಶಗಳ ಹಾಗೂ ರಾಜಧಾನಿಗಳ ಹೆಸರುಗಳು ಹೇಳಲ್ಪಟ್ಟಿವೆ.) ; ಆದರೂ ಈತನು ಸಮುದ್ರದ್ವೀಪದಲ್ಲಿ [74] ತನ್ನ ರಾಜ್ಯವನ್ನು ಸ್ಥಾಪಿಸಿದನೆಂಬುದರಿಂದಲೂ, ಆತನ ರಾಜ್ಯವು ಕರವೀರದಿಂದ ದಕ್ಷಿಣದಲ್ಲಿರುವ ಬನವಾಸಿಯನ್ನು ಹೇಳಿದ ಬಳಿಕ ಹೇಳಲ್ಪಟ್ಟಿರುವುದರಿಂದಲೂ, ಅದು ಪಡುಗಡಲ ತೀರದಲ್ಲಿ ಬನವಾಸಿಯ ತೆಂಕಣ ಭಾಗದಲ್ಲಿರಬೇಕೆಂಬುದು ನಿಶ್ಚಯ; ಅದರಲ್ಲಿ 'ಮುದ್ಗರ' ಎಂಬ ಬೆಸ್ತರಿದ್ದರೆಂಬುದರಿಂದ, ಅದು ನಮ್ಮಾ ತುಳುನಾಡೇ ಎಂಬುದನ್ನು ಸುಲಭವಾಗಿ ಗೊತ್ತುಹಚ್ಚಬಹುದು. 'ಮುದ್ಗರ' ಎಂಬುದು ತುಳು (ದ್ರಾವಿಡ) ಭಾಷೆಯ 'ಮೊಗೇರ್' ಎಂಬುದರಿಂದ ಸಂಸ್ಕೃತದಲ್ಲಿ ಎತ್ತಿಕೊಂಡ ಶಬ್ದವು—'ಮೊಗೇರ್' ಎಂಬ ತುಳು ಶಬ್ದದಿಂದ ಸಂಸ್ಕೃತ 'ಮುದ್ಗರ' ಎಂಬ ಶಬ್ದವು ಸಂಸ್ಕೃತದಲ್ಲಿ ಕಲ್ಪಿಸಿಕೊಳ್ಳಲ್ಪಟ್ಟಿತಲ್ಲದೆ,

'ಮುದ್ಗರ' ಎಂಬುದರಿಂದ ತುಳು 'ಮೊಗೇರ್' ಎಂಬುದು ಉಂಟಾದುದೆಂದಿಗೂ ಅಲ್ಲ. 75 'ಮೊಗೇರ್' ಎಂಬುದು ತುಳು ಬೆಸ್ತರ ಹೆಸರೆಂಬುದನ್ನು ಬೇರೆ ಹೇಳಬೇಕೆಂದಿಲ್ಲ ವಷ್ಟೇ.

ಹರೀತನು ನರ್ಮದಾನದಿಯ ತೀರದಲ್ಲಿಯ 'ಅನೂಪ' ಎಂಬ ಪ್ರದೇಶದಿಂದ ಬಂದುದೆಂದು ಮೇಲೆ ಹೇಳಿಯದೆ. 'ಅನೂಪ' ಎಂದರೆ 'ಜಲಪ್ರಾಯ'— 'ಜಲಬಹುಲ'ವಾಗಿರುವ ಅಂದರೆ 'ನೀರು ತುಂಬಾ ಇರುವ' ದೇಶವೆಂದರ್ಥವು. ನರ್ಮದಾತೀರದಲ್ಲಿಯ 'ಅನೂಪ' ಪ್ರದೇಶವು ಹಾಗಿದ್ದುದರಿಂದಲೇ ಅದಕ್ಕೆ ಆ ಹೆಸರು ಬಂದಿತು. 'ಜಲಪ್ರಾಯಮನೂಪಂ ಸ್ಯಾತ್' ('ಅಮರಕೋಶ' — II. 1. 10.), 'ಅನೂಪಸ್ತು ಸ್ಯೈರಿಭೇ ಜಲಪ್ರಾಯೇಪಿ' (ಹೇಮಚಂದ್ರನ 'ಅನೇಕಾರ್ಥಸಂಗ್ರಹ'— 1037), 'ಅನೂಪೋ ಮಹಿಷೇ ಚಾಂಬುಪ್ರಾಯದೇಶೇ' ('ಮೇದಿನೀಕೋಶ')— ಎಂಬುದರಿಂದ, 'ಅನೂಪ' ಎಂಬ ಹೆಸರು ನರ್ಮದಾತೀರದಲ್ಲಿದ್ದ 'ಹೈಹಯ'—'ಮಹಿಷ' 76 ವೆಂಬ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿರುವ ಅದೊಂದು ದೇಶಕ್ಕೆ ಮಾತ್ರವಲ್ಲ, ನೀರು ಸಮೃದ್ಧಿಯಾಗಿರುವ, ತೊರೆಕೆರೆ ಕುಂಟೆಗಳಿಂದ ತುಂಬಿರುವ ಯಾವ ದೇಶಕ್ಕಾದರೂ ಬರುತ್ತದೆಂದಾಗುತ್ತದೆ. 77 ಆದ್ದರಿಂದ ಹರೀತನು ನರ್ಮದಾತೀರದಲ್ಲಿಯ 'ಅನೂಪ' ವಿಷಯದಿಂದ ಇಲ್ಲಿಗೆ ಬರುತ್ತಲೇ, ಈ ದೇಶಕ್ಕೆ 'ಅನೂಪ'ವೆಂಬ ಹೆಸರು ಅಕ್ಷರಶಃ ಅಚ್ಚುಕಟ್ಟಾಗಿ ಒಪ್ಪುತ್ತದೆಂಬುದರಿಂದ ತನ್ನ ಜನ್ಮಪ್ರದೇಶದ ಹೆಸರನ್ನೇ ತನ್ನೀ ಹೊಸನೆಲೆಗೆ ಇತ್ತಿರುವಲ್ಲಿ ಅಸಮಂಜಸವೇನೂ ಇಲ್ಲ; ಅಥವಾ ಹರೀತನೂ ಆತನೊಂದಿಗೆ 'ಅನೂಪ' ವಿಷಯದಿಂದ ಇಲ್ಲಿಗೆ ಬಂದಿರಬೇಕಾದ ಅನೇಕರೂ, 'ಅನೂಪ'ದೇಶದಿಂದ ಬಂದಿರುವುದರಿಂದ 'ಅನೂಪರು' ಆದ್ದರಿಂದ, ಅವರನ್ನೆಂತೋ, ಅಂತೆಯೇ ಅವರು ನೆಲಸಿ ಆಳುತ್ತಿರುವ ದೇಶವನ್ನೂ 'ಅನೂಪ' ಎಂದು ಸಾಮಂತ ಪ್ರದೇಶದವರು ಕರೆದುದಾದರೂ ಸಮಂಜಸವೇ.

ಈ ತುಳುನಾಡಿಗೆ 'ಅಲುವ' (ಅಥವಾ 'ಅಲುವಖೇಡ') ಎಂಬ ಹೆಸರಿತ್ತೆಂದು 'ಪ್ರಪಂಚಹೃದಯ' 78 ವೆಂಬ ಗ್ರಂಥದಲ್ಲಿದೆ. ಪಶ್ಚಿಮ ಸಮುದ್ರ ತೀರದ ಪ್ರದೇಶಗಳಿಗೆ 'ಸಪ್ತಕೊಂಕಣ'ವೆಂದು ಹೆಸರಿತ್ತು; ಅವು ಯಾವವೆಂದರೆ— 'ಸಹ್ಯಪಾದೇ ಪರಶುರಾಮ ಭೂಮಿಃ। ಸಾ ಸಪ್ತಕೋಂಕಣಾಖ್ಯಾ 79 । ಕೂಪಕ ಕೇರಲ ಮೂಷಿಕ 80 ಅಲುವ ಪಶು 81 ಕೋಂಕಣ ಪರಕೋಂಕಣ 82 ಭೇದೇನ ದಕ್ಷಿಣೋತ್ತರಯಾಮೇನ ಚ ವ್ಯವಸ್ಥಿತಾ ॥' ('ಅಲುವಖೇಡ'ವೆಂಬುದರಲ್ಲಿಯ 'ಖೇಡ' ಎಂಬ ಪರಪದಕ್ಕೆ 'ಖೇಟ' ಅಂದರೆ 'ತಪ್ಪಲು', ಬೆಟ್ಟಗಳ ಉಪತ್ಯಾಕಾದೇಶವು ಎಂದರ್ಥವು.)

ಪ್ಟೊಲೆಮಾಯನು 'ಒಲೊಖೊಇರ'(Olokhoira)83 ಎಂದು ಉಲ್ಲೇಖಿಸಿರುವ ದೇಶವು 'ಅಲುವ ಖೇಡ'ವೆಂಬೀ ತುಳುನಾಡೇ; ಇದಕ್ಕೆ 'ಆಲುವಖೇಡ'ವೆಂದೂ 'ಅಲ್ವಖೇಡ'ವೆಂದೂ ಹೆಸರುಗಳಿತ್ತೆಂದು ಶಿಲಾಲೇಖಗಳಿಂದ ತೋರುತ್ತದೆ; ಮತ್ತೀ ಹೆಸರುಗಳಿಂದ ಈ ದೇಶವು ಹಲವು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿರುತ್ತದೆ.

ಆದರೆ 'ಅನೂಪ'ವೆಂಬ ಶಬ್ದವು 'ಅಲೂಪ'ವೆಂದು ಹೇಗಾಯಿತು? ಈ ರೀತಿಯ 'ನ—ಲ' ಕಾರಗಳ ಪರಸ್ಪರ ಸ್ವರವಿನಿಮಯವು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಪ್ರಾಯಿಕವಾಗಿದೆ ಎಂಬುದು ಈ ಕೆಳಗಿನ ದೃಷ್ಟಾಂತಗಳಿಂದ ವ್ಯಕ್ತವಾಗುತ್ತದೆ; ಉದಾ: ಸಂಸ್ಕೃತ—(1) 'ಮಲಿನ'=ಪ್ರಾ. 'ಮಯಿಲ'; (2) 'ವನಿತಾ'='ವಿಲಯಾ'; (3) 'ಲಲಾಟ'='ನಲಾಟ'; (4) 'ನಿಂಬ'='ಲಿಂಬ' (5) 'ಲಾಂಗಲ'='ನಂಗಲ'-ಇತ್ಯಾದಿ; ಕನ್ನಡ—(1) ನೆತ್ತ=ಲೆತ್ತ; (2) ಅಣಿಲ್=ಅಳಿಲ್; (3) 'ಮುನಿ'-='ಮುಳಿ'; (4) 'ನೆಕ್ಕಿ=ಲೆಕ್ಕಿ'; (5) 'ಒನಕೆ'='ಒಲಕೆ'; (6) 'ನೊಣ=ನೊಳ'; ಹಾಗೆಯೇ (1) ಸಂ. 'ಪನಸ'= ಕ. 'ಹಲಸು'; (2) ಸಂ. 'ಮರೀಚಿ' (ರ=ಲ) ಕ.-'ಮೆಣಸು'; (3) ಸಂ. 'ಅಂಗಣ'=ಕ. 'ಅಂಗಳ';

ಹೀಗಾಗಿ 'ಅನೂಪ' ಎಂಬುದು 'ಅಲೂಪ'ವೆಂದಾಗಿ, ಅದರಿಂದ 'ಪ—ವ' ಸ್ವರಗಳ ತುಲ್ಯತೆಯಿಂದ, 'ಅಲೂವ'-'ಅಲುವ'ವೆಂದು ರೂಪಾಂತರಿಸಿತು.

ಇಲ್ಲಿ ನನಗೆ ಇನ್ನೊಂದು ಸಂಶಯವು ಮೊಳೆದೋರುತ್ತದೆ. ತಮಿಳು ಭಾಷೆಯಲ್ಲಿ 'ಅಱುವ' 84 ಎಂಬ ಶಬ್ದವಿದೆ; ಅದರ ಅನೇಕಾರ್ಥಗಳಲ್ಲಿ (1) ಕಡಲು (sea) (2) ಕುಣಿ ಅಥವಾ ಗುಳಿ (pit), (3) (ಕಾಡಿನ) ಹಬ್ಬು (extension, as of a forest), (4) ಬಯಲು ಭೂಮಿ (extended level plain), (5) ನಾಡು (country, district), ಎಂಬೀ ಅರ್ಥಗಳೂ ಇವೆ.

ಆದ್ದರಿಂದ 'ಅಲುವ' ಎಂಬ ಶಬ್ದವು ಈ ತಮಿಳು 'ಅಱು ವ' ಎಂಬುದರಿಂದ ಸಂಸ್ಕೃತದಲ್ಲಿ ಎತ್ತಿಕೊಂಡ ಶಬ್ದವಾಗಿರಬಹುದೇ? ಯಾಕೆಂದರೆ ಈ 'ಅಲುವ' ಎಂಬ ಶಬ್ದವು ಮೂಲ ದ್ರಾವಿಡದಿಂದ ತಮಿಳಲ್ಲಿ ಬಂದ ಶಬ್ದವೆಂದಾದರೆ ಅದೇ ಶಬ್ದವು ಕನ್ನಡ-ತುಳು ಭಾಷೆಗಳಲ್ಲಿಯೂ ಪ್ರಾಚೀನಕಾಲದಲ್ಲಿದ್ದಿರಬೇಕು; ಹಾಗೆಯೇ ಹಳಗನ್ನಡದಲ್ಲಿಯ 'ಅಱಿವೆ' (ಈಗ 'ಅಳವೆ' ಅಥವಾ 'ಅರವೆ'=ಸಮುದ್ರವನ್ನು ಸೇರುವ ನದೀ ಮುಖ). ಮತ್ತು 'ಹಱುವ' (=ಕಾಡು) ಇವು ತಮಿಳು 'ಅಱುವ' ಎಂಬುದರ ರೂಪಾಂತರಗಳಂತೆ ಭಾಸವಾಗುತ್ತವೆ. ಆದುದರಿಂದ ಈ ಶಂಕೆಯು ಹೊಳ್ಳೆಂದು ಹೇಳಲಾಗುವುದಿಲ್ಲ.

ಈ ತುಳುದೇಶದಲ್ಲಿ ಆಳಿದ 'ಅಲೂಪ' (ಅಥವಾ 'ಆಲೂಪ', 'ಆಳುವ') ರೆಂಬವರು ತಮ್ಮ ಹೆಸರನ್ನು ಈ ದೇಶದ 'ಅಲೂಪ' (ಅಥವಾ 'ಅಲುವ') ಎಂಬ ನಾಮದಿಂದಲೇ ತಳೆದುಕೊಂಡಿರಬೇಕು. ಈ ಅಲೂಪರ ಶಿಲಾಲೇಖಗಳಲ್ಲಿ ಐದು ಹೆಡೆಯ ನಾಗನ ವಿಗ್ರಹವಿರುವುದರಿಂದಲೂ, ಇವರು ಸುಬ್ರಹ್ಮಣ್ಯನ ಆರಾಧಕರೆಂದೂ ಇವರ ಕಾಲದಲ್ಲಿ ಈ ದೇಶದಲ್ಲಿ ಹಲವು ಸುಬ್ರಹ್ಮಣ್ಯಾಲಯಗಳು ಸ್ಥಾಪಿತವಾದುವೆಂದೂ ಕಂಡುಬರುವುದರಿಂದಲೂ, ಮಹಾಕೂಟಸ್ತಂಭದಲ್ಲಿಯ ಚಳುಕ್ಯರ ಶಾಸನದಲ್ಲಿ ಇವರು ನಾಗವಂಶೀಯರೆಂದಿರುವುದರಿಂದಲೂ, [85] ಇವರು ನಾಗರಾಜನಾದ ಹರೀತನವಂಶದವರಾಗಿರಬಹುದೆಂದೂ, ಬಹುಶಃ ಆ ಕಾರಣದಿಂದ ಈ ವಂಶದವರು ನಾಗಜಾತಿಯವರೊಂದಿಗೆ ಆಗ್ಗಾಗೆ ಶರೀರಸಂಬಂಧವನ್ನು ಮಾಡಿಕೊಂಡಿದ್ದು ಇವರೂ ನಾಗವಂಶೀಯರೆಂದೇ ಭಾವಿಸಲ್ಪಟ್ಟಿರಬೇಕೆಂದೂ ಕಾಣುತ್ತದೆ. ಇವರ ಶಾಸನಗಳಲ್ಲಿ ಐದು ಹೆಡೆಗಳ ನಾಗನ ವಿಗ್ರಹವಿರುವಂತೆಯೇ, ಬನವಾಸಿಯ 'ಹಾರಿತೀ ಪುತ ವಿನ್ಹುಕಡ ಚುಟುಕುಲನಂದ ಸಾತಕಣ್ಣಿ' ಎಂಬ ಅರಸನ ಶಿಲಾಲೇಖವಲ್ಲಿಯೂ ಇರುವುದರಿಂದ, ಈ ಅಲೂಪರು 'ಸಾತವಾಹನ' ವಂಶದವರೆಂದೇ ನಾನು ಊಹಿಸಿರುವ 'ಚುಟುಕುಲ'ದವರು, ಅಥವಾ 'ಚುಟುಕುಲ'ದಿಂದ ವೊಳೆತ ಒಂದು ಶಾಖೆಯವರು ಆಗಿರಬೇಕೆಂದು ಕಾಣುತ್ತದೆ.

## ಚುಟು—ತುಳು.

ಬನವಾಸಿಯಲ್ಲಿಯೂ ಮಲವಳ್ಳಿಯಲ್ಲಿಯೂ ದೊರೆತಿರುವ ಶಾಸನಗಳ 'ಹಾರಿತೀಪುತ—ವಿನ್ಹುಕತ—ಚುಟುಕುಲನಂದ—ಸಾತಕಂಣಿ'ಯು ಬನವಾಸಿಯ (ವೈಜಯಂತಿ'ಯ) ಅರಸನಷ್ಟೇ. ಈತನ ಹೆಸರು 'ವಿನ್ಹುಕಡ' ಎಂದರೆ 'ವಿಷ್ಣು ಸ್ಕಂದ' ನೆಂದು, 'ಹಾರೀತೀ ಪುತ್ರ' ನೆಂಬುದರಿಂದ ಈತನ ತಾಯಿಯು ತವರ್ಮನೆಯವರು ಹಾರೀತ ಋಷಿಯ ಸಂತತಿಯವರಾಗಿರಬಹುದು, ಅಥವಾ 'ಹರಿವಂಶ' ದಿಂದ ಮೇಲೆ ಉದ್ಧರಿಸಿರುವ ಆಖ್ಯಾಯಿಕೆಯಲ್ಲಿಯ 'ಹರೀತ' ರಾಯನ ವಂಶದಲ್ಲಿ ಈತನು ಹುಟ್ಟಿದುದರಿಂದಲೇನೋ 'ಹಾರೀತೀಪುತ್ರ' ನೆಂದೂ ಈತನಿಗೆ ಹೆಸರಾಗಬಹುದು; 'ಸಾತಕಂಣಿ' (ಶಾತಕರ್ಣಿ) ಎಂಬುದರಿಂದ, ಈ ಮೇಲೆ ನಾನು ವ್ಯಕ್ತೀಕರಿಸಿರುವ ನನ್ನ ಊಹೆಯಂತೆ, ಈತನು 'ಸಾತವಾಹನ' ವಂಶದವನಾಗಿರಬೇಕು; 'ಚುಟುಕುಲಾನಂದ' ನೆಂಬುದರಿಂದ 'ಚುಟು' ಎಂಬ ಹೆಸರಿನ ಕುಲಕ್ಕೆ ಆನಂದದಾಯಕನೆಂದೇ; ಆದ್ದರಿಂದ 'ಸಾತವಾಹನ' ವಂಶೀಯನಾದೀತನು ಆ ವಂಶದ 'ಚುಟು' ಎಂಬ ಹೆಸರಿನದೊಂದು ಶಾಖೆಯವನಾಗಿರಬೇಕು.

ಈ 'ಚುಟು' ಎಂಬ ಶಬ್ದದಿಂದಲೇ 'ತುಳು' [85] ಎಂಬುದು ಬಂದಿರಬೇಕು; ಈ ವರ್ಣ ವಿನಿಮಯವು ಹೇಗಂದರೆ—

(i) 'ಚ' ಕಾರಕ್ಕೆ 'ತ' ಕಾರಾದೇಶ—ಇದು ಸಂಸ್ಕೃತ ಭಾಷೆಯಲ್ಲಿ ವಿರಳವಾದರೂ (ಉದಾ-ಸಂ 'ಚಿಕಿತ್ಸಾ'= ಪಾಲಿ. 'ಚಿಕಿಚ್ಛಾ;' ಜೈನಪ್ರಾಕೃತ-'ತೇಗಿಚ್ಛಾ'), ಕನ್ನಡದಲ್ಲಿಯೂ ಇತರ ದ್ರಾವಿಡ ಭಾಷೆಗಳಲ್ಲಿಯೂ ತುಂಬಾ ಇದೆ; ಉದಾ—'ಮಿಡಿಚೆ'='ಮಿಡಿತೆ'; 'ಚಗಚೆ'='ತಗಚೆ'; 'ಚಟಕ್ಕನೆ'='ತಟಕ್ಕನೆ'; 'ಚಪ್ಪಳಿಸು'='ತಪ್ಪಳಿಸು'; ಕನ್ನಡ. 'ಚೂಪು'=ತುಳು. 'ತೂಪಿನಿ'; ತುಳು. 'ಚೋಲಿ'=ಕನ್ನಡ. 'ತೋಲ್' ('ತೊವಲ್', 'ತೊಗಲು') ಇತ್ಯಾದಿ. (ii) 'ಟ' ಕಾರಕ್ಕೆ 'ಳ' ಕಾರಾದೇಶ —ಸಂ. 'ಸ್ಫಟಿಕ'=ಕ. 'ಪಳಿಕ' (ಪಳಕು); ಸಂ. 'ಪಟಹ'=ಕ. 'ಪಱಿಹ' (ಪಳಹ); 'ಪಾಟು'='ಪಾಱಿ'

# ಮದ್ರಾಸು-ಮುಂಬಾಯಿ-ಮೈಸೂರು

ವಿದ್ಯಾ ಇಲಾಖೆಗಳ ಪಾಠಪಟ್ಟಿಗಳಿಗೆ ಅನುಸಾರವಾಗಿಯೂ ಆಯಾ ತರಗತಿಗಳ ವಿದ್ಯಾರ್ಥಿಗಳಿಗೆ ಉಪಯೋಗವಾಗುವಂತೆಯೂ ಅನುಭವವುಳ್ಳವರಿಂದ ರಚಿಸಿ ಸುಲಭ ಬೆಲೆಗೆ ದೊರೆಯುಲಾಗುವ ಯೋಗ್ಯಶೈಲಿಯ, ನವೀನ ಧೋರಣೆಯ, ಉತ್ತಮ ಮುದ್ರಣದ

## ಶಾಲಾ ಪುಸ್ತಕಗಳು

ಇವುಗಳಲ್ಲಿ ಸರಕಾರೀ ಶಾಲಾ ಪುಸ್ತಕಗಳನ್ನು ಮಂಜೂರ್ಮಾಡುವ ಕಮ್ಮಿಟಿಯವರೂ, ಜಿಲ್ಲಾ ಶಿಕ್ಷಣ ಸಂಸ್ಥೆಯವರೂ ಅಂಗೀಕರಿಸಿ ನಮೂದಿಸಿರುವ ಪುಸ್ತಕಗಳು ಸೇರಿವೆ. ಇವುಗಳಲ್ಲಿ ಕೆಲವು ಇದು ಮೊದಲೇ ಮುಂಬಾಯಿ, ಮೈಸೂರು, ಮತ್ತು ಮದ್ರಾಸು ಸರಕಾರಗಳ ಪರೀಕ್ಷೆಗಳಿಗೆ ನಿಯಮಿತವಾದುವು.

## ಉಪಪಠ್ಯ ಪುಸ್ತಕಗಳು

ಕನ್ನಡ ಪದ್ಯಪಾಠಗಳು .... .... .... .... ಬೆಲೆ ೮ ಆಣೆ.
ಕನ್ನಡ ಪದ್ಯಪಾಠಗಳ ಟಿಪ್ಪಣಿ .... .... .... .... ,, ೪ ,,
ಕನ್ನಡ ಕಾವ್ಯವಲ್ಲರಿ .... .... .... .... .... ,, ೧೨ ,,

ಸಾಧಾರಣವಾಗಿ ಆರನೆಯ ತರಗತಿ (I ಫೋರ್ಮ್)ನಿಂದ ಸ್ಕೂಲ್ ಫೈನಲ್ ತರಗತಿಯ ವರೆಗೆ, ಏ ಮತ್ತು ಸೀ ವಿಭಾಗಗಳಲ್ಲಿ ಕನ್ನಡ ಪದ್ಯಗಳನ್ನೋದುವವರಿಗೆ ಅವಶ್ಯವಾದ ಪದ್ಯಸಂಗ್ರಹವಿದೆ.

## ಗದ್ಯ ಪುಸ್ತಕಗಳು

1. ಆರ್ಯಮತೋಪಾಖ್ಯಾನ .... .... ೪ನೇ ತರಗತಿಗೆ ಬೆಲೆ ೬ ಆಣೆ
2. ಬಾಲಕರ ಮಹಾಭಾರತ .... .... ೫ನೇ ತರಗತಿಗೆ ,, ೪ ,,
3. ಕರ್ಣನ ಕಥೆ .... .... ೬ನೇ ತರಗತಿಗೆ ,, ೬ ,,

| | | | | |
|---|---|---|---|---|
| 4. ನಾಗಾನಂದ | .... | .... | ೭ನೇ ತರಗತಿಗೆ | ಬೆಲೆ ೪ ಆಣೆ |
| 5. ಗದಾಯುದ್ಧ ಕಥೆ | .... | .... | ೮ನೇ ತರಗತಿಗೆ | ,, ೮ ,, |

ಇವು ಐದು ಪುಸ್ತಕಗಳು ಕ್ರಮವಾಗಿ ಐದು ವರ್ಷಗಳ ಓದಿಗೆ ಅನುಕೂಲವಾಗಿವೆ. ಜಿಲ್ಲಾ ಎಡ್ಯುಕೇಶನಲ್ ಕಾನ್ಸಿಲಿನವರು ಆಯಾ ತರಗತಿಗೆ ಇದನ್ನು ಶಿಫಾರಸು ಮಾಡಿರುತ್ತಾರೆ; ಮಾತ್ರವಲ್ಲದೆ ಸರಕಾರದ ವಿದ್ಯಾ ಇಲಾಖೆಯೂ ಇದನ್ನು ಅಂಗೀಕರಿಸಿದೆ.

ನವೀನ ಧೋರಣೆಯ

# ಗಣಿತ ಕೈಪಿಡಿಗಳು

| | | | | | | | | |
|---|---|---|---|---|---|---|---|---|
| ಒಂದನೆಯ ಗಣಿತ ಕೈಪಿಡಿ | | .... | .... | .... | .... | .... | (ಅಚ್ಚಿನಲ್ಲಿದೆ) |
| ಎರಡನೆಯ | ,, | ,, | .... | .... | .... | .... | .... | ( ,, ) |
| *ಮೂರನೆಯ | ,, | ,, | .... | .... | .... | .... | .... | ೦—೪—೦. |
| *ನಾಲ್ಕನೆಯ | ,, | ,, | .... | .... | .... | .... | .... | ೦—೮—೦. |
| ಐದನೆಯ | ,, | ,, | .... | .... | .. | .... | .... | ೦—೧೨—೦. |
| | | | | | | | ಉತ್ತರ ಸಹಿತ | ೦—೧೪—೦. |

ಇವು ಮೂಲಶಾಲೆಗಳ ಹಾಗೂ ಸೆಕೆಂಡರಿ ಶಾಲೆಗಳ ಸಿಲೆಬಸನ್ನು ಅತಿ ಕೂಲಂಕಷವಾಗಿ ಅನುಸರಿಸಿ, ಧಾರಾಳವಾಗಿ ಉದಾಹರಣೆಗಳೊಂದಿಗೆ (ಮಾನಸಿಕ, ಪ್ರತ್ಯಕ್ಷ ಮತ್ತೂ ವ್ಯಾವಹಾರಿಕ) ಬಲುಸಾಂಗವಾಗಿ ಬರೆದ ಪುಸ್ತಕಗಳು. *ಅಂಗೀಕೃತವಾಗಿವೆ

# ಕರ್ಣಾಟಕ ಸಾಹಿತ್ಯ ಪ್ರಚಾರ

ಕರ್ಣಾಟಕ ಪ್ರಾಂತ್ಯದೊಳಗಣ ಗ್ರಂಥಕರ್ತರೂ, ಮುದ್ರಣಾಲಯಗಳ ಅಧಿಕಾರಿಗಳೂ, ಗ್ರಂಥಪ್ರಕಾಶಕರೂ, ತಾವು ಪ್ರಕಟಿಸುವ ಪ್ರತಿಯೊಂದು ಕನ್ನಡ ಪುಸ್ತಕದ ಒಂದೊಂದು ಪ್ರತಿಯನ್ನು ಮಾದರಿಗಾಗಿ ನಮಗೆ ಕಳುಹಿಕೊಟ್ಟಲ್ಲಿ, ಅದನ್ನು ಪ್ರಚಾರಗೊಳಿಸುವುದಕ್ಕೆ ಅಗತ್ಯವಾಗುವಷ್ಟು ಪರಿಶ್ರಮವನ್ನು ಮಾಡುವುದಕ್ಕೆ ನಾವು ಸಿದ್ಧರಾಗಿರುವೆವು. ಗ್ರಂಥಕರ್ತರಿಗೆ ಬೇಕಾದ ಸಲಹೆಗಳನ್ನಾಗಲಿ, ಸಲಕರಣೆಗಳನ್ನಾಗಲಿ ಯೋಗ್ಯರೀತಿಯಲ್ಲಿ ಕೊಡಬೇಕೆಂದು ನಮ್ಮ ಉದ್ದೇಶವಿದೆ. ಸಾಹಿತ್ಯಸೇವಕರೆಲ್ಲರ ಸಹಕಾರವನ್ನು ಪ್ರಾರ್ಥಿಸಿಕೊಳ್ಳುತ್ತೇವೆ.

ಶೆಣ್ಯೈ ಬ್ರದರ್ಸ್ ಮತ್ತು ಕಂಪೆನಿ,
ರಥಬೀದಿ, ಮಂಗಳೂರು.

ಸರಸ್ವತೀ ಪ್ರಿಂಟಿಂಗ್ ವರ್ಕ್ಸ್ ಲಿಮಿಟೆಡ್, ಮಂಗಳೂರು.

(ಹಾಳು); 'ಮಬಿ'='ಮಟಿ'; ಕ. 'ದಟ್ಟೆ'=ತುಳು 'ದಳ'; ಕ. 'ಬೆಟ್ಟು'=ಕ. 'ಬೆರಳ್', ತುಳು. 'ಬಿರೆಳ್'; ತಮಿಳು, 'ಕೇಟ್ಪ್'=ಕ. 'ಕೇಳ್'; ಕ. 'ಪುಟ್ಟೆ'=ತಮಿಳು. 'ಪಿಳ್ಳೈ', 'ಪುಳ್ಳೈ'; ಕ. 'ಹೊಟ್ಟು'='ಹೊಳ್ಳು' ಇತ್ಯಾದಿ.

ಆದ್ದರಿಂದ 'ಚುಟು' ಎಂಬ ಮೂಲ ಶಬ್ದದಿಂದಲೇ 'ತುಳು' ನಾಡೆಂದು ಈ ದೇಶಕ್ಕೆ ಹೆಸರು ಬಂದಿರಬೇಕು. ಆದರೆ 'ಚುಟು' ಎಂದರೇನು, ಅದು ಯಾವುದರಿಂದ, ಮತ್ತು ಹೇಗೆ ಬಂತೆಂದು ಕಂಡುಹಿಡಿವರೆ ಇದುವರೆಗೆ ನನಗೆ ಆಧಾರವೇನೂ ದೊರಕಿರುವುದಿಲ್ಲ; ಹಾಗೆಯೇ ಆ 'ಚುಟು' ಕುಲದವರು ಇಲ್ಲಿ ಆಳಿದುದರಿಂದಲೇ ಅವರು ಆಳಿದೀ ದೇಶಕ್ಕೆ 'ಚುಟು' (ತುಳು) ದೇಶವೆಂದು ಹೆಸರು ಬಂದಿತೋ, ಅಥವಾ 'ಸಾತವಾಹನ' ವಂಶದ ಶಾಖೆಯವರಾದ ಆ ಅರಸರು ಇಲ್ಲಿ ಆಳುವಂದು, ಅವರ ಕಾಲಕ್ಕಿಂತ ಮುಂಚಿನಿಂದಲೇ ಈ ದೇಶಕ್ಕೆ ಇರಬಹುದಾದ 'ಚುಟು' (ತುಳು) ಎಂಬ ಹೆಸರನ್ನೇ ಅವರಾಯ್ದು ಕೊಂಡು, ಅದನ್ನು ತಮ್ಮ ಕುಲನಾಮವಾಗಿ ತಳೆದು ಕೊಂಡರೋ ಎಂಬುದನ್ನು ಇತ್ಯರ್ಥಿಸಲಿಕ್ಕಾದರೂ ಆಧಾರವೇನೂ ನನಗೆ ದೊರಕಿಲ್ಲ.

ಉಳ್ಳಾಲ—ಮೂಡುಬಿದರೆಗಳಲ್ಲಿ ಕ್ರಿ. ಶ. 12ನೆಯ ಶತಕದಿಂದ ಆಳಿದ 'ಚೌಟರು' ಎಂಬವರ ಹೆಸರು ಪ್ರತ್ಯಕ್ಷತಃ 'ಚುಟು' ಎಂಬುದರಿಂದಲೇ ಬಂದಿರಬೇಕು, ಈ 'ಚೌಟ'ರಿಗೂ 'ಚುಟುಕುಲ'ದ 'ಸಾತವಾಹನ'ರಿಗೂ ಏನೂ ಸಂಬಂಧವಿದ್ದಂತೆ ತೋರುವುದಿಲ್ಲ; ಆದ್ದರಿಂದ 'ಚೌಟ'ರ 'ಚೌಟ' ಎಂಬ ಹೆಸರು ಸಾತವಾಹನರ 'ಚುಟು' ಕುಲದಿಂದ ಬಂದಿರಬಹುದೆಂದು ಊಹಿಸಲಾದರೂ ಕಾರಣವಿಲ್ಲ; ಹೀಗಾಗಿ 'ಚುಟು' ಕುಲದವರಿಗೂ 'ಚೌಟ'ರಿಗೂ ಸಾಮಾನ್ಯವಾಗಿರುವ ಈ 'ಚುಟು' ಎಂಬುದು ಇತ್ತಂಡದವರಿಗೂ ಅವರು ಆಳಿದ 'ಚುಟು' ಎಂಬ ಹೆಸರಿನ ದೇಶದಿಂದಲೇ ಬಂದುದಾಗಿರಬೇಕು; ಹೀಗಾದರೆ ಈ ದೇಶಕ್ಕೆ 'ಚುಟು' ದೇಶವೆಂದು ಹೆಸರಿದ್ದು, ಅದರಿಂದಲೇ ಅಂದಿನಿಂದ ಈಗಲೂ ಈ ದೇಶದ ಹೆಸರಾಗಿರುವ 'ತುಳು'ದೇಶವೆಂಬ ಹೆಸರು ಇದಕ್ಕೆ ಬಂದಿರಬೇಕು.

ಮಂಜೇಶ್ವರ,
ಪ್ರಭವ ಸಂ। ಶ್ರೀರಾಮನವಮಿ,
10—4—1927.

ಗೋವಿಂದ ಪೈ.

---

1 ಏತೇಂಧ್ರಾ: ಪುಂಡ್ರಾ: ಶಬರಾ: ಪುಲಿಂದಾ ಮೂತಿಬಾ ಇತ್ಯುದಂತ್ಯಾ ಬಹವೋ ಭವಂತಿ। ವೈಶ್ವಾಮಿತ್ರಾ ದಸ್ಯೂನಾಂ ಭೂಯಿಷ್ಠಾ: ॥' (ಐ. ಬ್ರಾ. VII 18). ಇದರಲ್ಲಿಯ 'ಮೂತಿಬ' ಎಂಬ ಶಬ್ದಕ್ಕೆ 'ಶಾಂಖ್ಯಾಯನ ಶ್ರೌತಸೂತ್ರ'ದಲ್ಲಿ 'ಮೂಚೀಪ' ಎಂದು ಪಾಠಾಂತರವಿದೆ. 'ತ-ಚ' ಸ್ವರಗಳ ಪರಸ್ಪರ ವ್ಯತ್ಯಯವು ಆರ್ಯ ಭಾಷೆಗಳಲ್ಲಿ ಅತ್ಯಂತ ವಿರಳವು (Gray's 'Indo-Iranian Philology'-pp. 63, & 78); ಆದರೆ ದ್ರಾವಿಡ ಭಾಷೆಗಳಲ್ಲಿ ಇದು ಸರ್ವಸಾಧಾರಣವಾಗಿದೆ.

2 'ಏತಸ್ಯಾಂ ದಕ್ಷಿಣಸ್ಯಾಂ ದಿಶಿ ಯೇಕೇ ಚ ಸತ್ತ್ವತಾಂ ರಾಜಾನೋ ಭೌಜ್ಯಾಯೈವ ತೇಭಿಷಿಚ್ಯಂತೇ।' (ಐ. ಬ್ರಾ. VIII. 14.)

3 ಭೌಜ್ಯ=(1) 'republican constitution' (ಪ್ರಜಾಸತ್ತಾತ್ಮಕ ಶಾಸನಕ್ರಮ)- ('Modern Review' — January 1915. P. 82); (2) 'paramount rule' (ಸರ್ವಾಧಿಕಾರವುಳ್ಳ ಶಾಸನಕ್ರಮ) ('Rigveda Brahmanas'—P-330.)

4 'ವಿಷ್ಣುಪುರಾಣ' IV. 12. ('ಸತ್ತ್ವತಾದೇತೇ ಸಾತ್ತ್ವತಾ:'); 'ಮತ್ಸ್ಯ ಪುರಾಣ', ಅ. 44. ('ಸಾತ್ತ್ವತ'); 'ಭಾಗವತ ಪುರಾಣ' IX. 24 ('ಸಾತ್ತ್ವತ'); 'ಲಿಂಗಪುರಾಣ', ಅ. 68 ('ಸಾತ್ತ್ವತ'); 'ಹರಿವಂಶ' I. 36 (ಸತ್ತ್ವಾನ); II. 38 ('ಸಾತ್ತ್ವತಾತ್ ಸಾತ್ತ್ವತಾ: ಸ್ಮೃತಾ:) ಹೀಗೆ ಈ ಅರಸನ ಹೆಸರಿಗೆ ಹಲವು ರೂಪಾಂತರಗಳು ದೊರಕುತ್ತಿವೆ; ಅದಲ್ಲದೆ 'ಐತರೇಯ ಬ್ರಾಹ್ಮಣ'ದಲ್ಲಿ ಹೇಳಿರುವ ಜನರ ಹೆಸರು 'ಸತ್ತ್ವತ' ಎಂದಲ್ಲದೆ 'ಸಾತ್ತ್ವತ' ಎಂದಲ್ಲವಾದುದರಿಂದ, ಈ ವ್ಯತ್ಯಾಸಕ್ಕೆ ಕಾರಣವೇನೆಂಬುದು ವಿಚಾರಣೀಯವು.

5 'ವನಪರ್ವ'-ಅ. 14; 20; 22.

6 ಭಾರತವರ್ಷದ ಪಡುಗಡಲ ಕರಾವಳಿಯ 'ಅಪರಾಂತ' ಪ್ರದೇಶಗಳಲ್ಲಿ (ಸಾತ್ತ್ವತ ವಂಶದವರಾದ) ಅಂಧಕ-ವೃಷ್ಣಿ ಮೊದಲಾದ ಜನರ ಪ್ರಜಾ ಸತ್ತಾತ್ಮಕ ರಾಜ್ಯ (republics) ಗಳ ಸಂಘಟನಗಳು (confederacies) ಇದ್ದುವೆಂದೂ, ಇವೇ

'ಮಹಾಭಾರತ'ದಲ್ಲಿ ಹೇಳಲ್ಪಟ್ಟಿರುವ 'ಭೌಜ್ಯ'ವೆಂಬುದೆಂದೂ ಶ್ರೀ ಕಾಶಿಪ್ರಸಾದ ಜಾಯಸವಾಲರು ಹೇಳಿರುವರು. (Modern Review'—January 1915 P–82).

7 (1) 'ಸಭಾಪರ್ವದಲ್ಲಿಯ ಸಹದೇವನ ದಕ್ಷಿಣ ದಿಗ್ವಿಜಯ ವರ್ಣನೆ (ಅ. 31)ಯಲ್ಲಿ—

'ತತ: ಶೂರ್ಪಾರಕಂ ಚೈವ ತಾಲೀಕಟ ಮಥಾಪಿ ಚ ॥ ೬೯ ॥
ಪಾಂಡ್ಯಾಂಶ್ಚದ್ರವಿಡಾಂಶ್ಚೈವ ಸಹಿತಾಂಶ್ಚೋಡ್ರ ಕೇರಲೈ: ।
ಅಂಧ್ರಾಂಸ್ತಾಲವನಾಂಶ್ಚೈವ ಕಲಿಂಗಾನುಷ್ಟ್ರಕರ್ಣಕಾನ್ ॥ ೭೧ ॥'

(2) 'ಭೀಷ್ಮಪರ್ವ' (ಅ. 9.)ದಲ್ಲಿ—

ಅಥಾಪರೇ ಜನಪದಾ ದಕ್ಷಿಣಾ ಭರತರ್ಷಭ ।
ದ್ರವಿಡಾ: ಕೇರಳಾ: ಪ್ರಾಚ್ಯಾಮೂಷಿಕಾ ವಾನವಾಸಿಕಾ: ॥ ೫೮ ॥
ಕರ್ಣಾಟಕಾ ಮಾಹಿಷಕಾ: ॥ ೫೮ ॥
ಕೌಕುಟ್ಟಕಾಸ್ತಥಾ ಚೋಲಾ: ಕೋಂಕಣಾಸ್ತಾಲ
ವಾನಕಾ: ॥ ೬೦ ॥'

8 ಮಾರ್ಕಂಡೇಯ ಪುರಾಣ (ಅ. 57).

'ದಾಕ್ಷಿಣಾತ್ಯಾಸ್ತ್ವಿಮೇ ದೇಶಾ ಅಪರಾಂತಾನ್ನಿಬೋಧ ಮೇ ।
ಸಾಪಾರ್ರಕಾ: ಕಾಲನದಾ ದುಲ್ಲಾಸ್ತಾಲೀಯಕೈ: ಸಹ ॥'
('ಅಪರಾಂತಾನ್' = ಪಶ್ಚಿಮ ದಿಕ್ಕಿನಲ್ಲಿರುವ ದೇಶಗಳನ್ನು)

9 'ಅಥದಕ್ಷಿಣೇನ ಲಂಕಾ ಕಾಲಾಜಿನ
ಸೌರಿಕೀರ್ಣ ತಾಲಿಕಟಾ: ॥' (ಅ. 14. ೧೧.)

10 ಶ್ರೀ ಕೃಷ್ಣನ ಜನ್ಮಸ್ಥಾನವಾಗಿರುವ 'ಮಧುರಾನಗರ' (ಶೌರಸೇನ ದೇಶ)ದ ಬಳಿಯಲ್ಲಿರುವ 'ಗೋವರ್ಧನಗಿರಿ'ಯ ಬಡಗಲಲ್ಲಿ ಯಮುನಾ ನದಿಯ ತೀರದಲ್ಲಿ 'ತಾಲವನ'ವೆಂಬುದೊಂದು ಕಾಡಿತ್ತೆಂದೂ, ಆ ಕಾಡಿನಲ್ಲಿ ಶ್ರೀ ಕೃಷ್ಣನು ಧೇನುಕಾಸುರನನ್ನು ಕೊಂದನೆಂದೂ 'ಭಾಗವತ ಪುರಾಣ' (X. 15)ದಲ್ಲಿಯೂ, 'ಹರಿವಂಶ' (II. 12)ದಲ್ಲಿಯೂ ಇದೆ; ಆದರೆ ಅದೊಂದು ಕಾಡಲ್ಲದೆ, ಪ್ರತ್ಯೇಕವಾದೊಂದು ದೇಶವಲ್ಲ. ಶ್ರೀ ಕೃಷ್ಣನು ಜರಾಸಂಧನ ಬಾಧೆಯಿಂದ ಮಧುರೆಯನ್ನು ತ್ಯಜಿಸಿ, ಪಡುಗಡಲ ದಂಡೆಯಲ್ಲಿಯ 'ಆನರ್ತ' ದೇಶದಲ್ಲಿ ದ್ವಾರಕಾಪುರಿಯನ್ನು ನಿರ್ಮಿಸಿ, ಅಲ್ಲಿ ನೆಲೆಗೆಯ್ದಂದು, ಸಾತ್ತ್ವತ ವಂಶದವರು ಆತನೊಂದಿಗೆ ಬಂದು ಆನರ್ತದೇಶದಲ್ಲಿ ಉಳಕೊಂಡರು; ಅಲ್ಲಿಂದಲೇ ಸಾತ್ತ್ವತರು ಪಶ್ಚಿಮ ಕರಾವಳಿಯ ತೆಂಕಣ ಪ್ರದೇಶಗಳಲ್ಲಿ ಉಪನಿವೇಶಗಳನ್ನು ಮಾಡಿಕೊಂಡಿರಬೇಕು. ಪಶ್ಚಿಮ ಕರಾವಳಿಯಲ್ಲಿರುವ ಈ ತುಳುನಾಡಿನಲ್ಲಿಯೂ ಸಾತ್ತ್ವತರ ಉಪನಿವೇಶವಿದ್ದಿರಬೇಕೆಂದು ಬೇರೆ ಹೇಳಬೇಕೆಂದಿಲ್ಲ. ಈ ತುಳುನಾಡಿನಲ್ಲಿಯ ತಾಳೇಮರಗಳ ದಪ್ಪಾನೆ ಸಮೃದ್ಧಿಯನ್ನು ನೋಡುತ್ತಲೇ, ಆ ಕಾರಣದಿಂದಲೇ ಅವರಿದನ್ನು 'ತಾಲವನ'ವೆಂದು ತಟ್ಟನೆ ಕರೆದಿರಬೇಕು ಮಾತ್ರವಲ್ಲ, ಅದರೊಂದಿಗೆ ತಮ್ಮ ಮೂಲಸ್ಥಾನವಾದ ಮಧುರೆಯಲ್ಲಿಯ 'ತಾಲವನ'ವು ಹಠತ್ತಾಗಿ ನೆನಪಿಗೆ ಬಂದು, ಅದರ ಪ್ರತಿನಾಮವನ್ನು, ತಮ್ಮ ಮೂಲಸ್ಥಾನದೊಂದಿಗಿದ್ದ ಪೂರ್ವ ಸಂಬಂಧದ ಸ್ಮಾರಕವೆಂದೂ, ಈ ಪ್ರದೇಶಕ್ಕೆ ಆ ಹೆಸರು ಅಚ್ಚುಕಟ್ಟಾಗಿ ಒಪ್ಪುತ್ತದೆಂದೂ, ಈ ದೇಶಕೆ ಅವರೇ ಕೊಟ್ಟಿರಬೇಕೆಂದು ಊಹಿಸಲು ಬಲವಿದೆ. ಹೀಗೆ ಪೂರ್ವಸಂಬಂಧವನ್ನೂ ಹಳೆಯ ನೆನವನ್ನೂ ಎಚ್ಚರವಿರಿಸಲೆಂದು, ಆರ್ಯಾವರ್ತದಲ್ಲಿಯ ಆರ್ಯರು ದಕ್ಷಿಣಾಪಥಕ್ಕೆ ಇಳಿತಂದು ಅಲ್ಲಿ ರಚಿಸಿದ ತಮ್ಮ ಹೊಸ ಉಪನಿವೇಶಗಳಿಗೆ ಆರ್ಯಾವರ್ತದಲ್ಲಿಯ ತಮ್ಮ ಮೂಲಸ್ಥಾನಗಳ ಹೆಸರಿನ್ನಿತ್ತಿರುವುದಕ್ಕೆ ತುಂಬಾ ದೃಷ್ಟಾಂತಗಳಿವೆ. ಉದಾ—(1) ಗಂಗಾನದಿಯ ಮೂಡಲಲ್ಲಿರುವ 'ಉತ್ತರ ಪಂಚಾಲ' ದೇಶದಲ್ಲಿಯ ಆರ್ಯರು ದಕ್ಷಿಣಕ್ಕೆ ಬಂದು ಗೋದಾವರಿಯ ತೀರದಲ್ಲಿ ಹೊಸ ಉಪನಿವೇಶವನ್ನು ಕಲ್ಪಿಸುತ್ತಲೇ, ಅದಕ್ಕೆ ತಮ್ಮ ಮೂಲರಾಜಧಾನಿಯಾದ 'ಅಹಿಚ್ಛತ್ರ' ಎಂಬ ಹೆಸರನ್ನಿತ್ತರು; (2) 'ಶೌರಸೇನ' ದೇಶದಿಂದ ಬಂದು ದಕ್ಷಿಣ ಸಮುದ್ರ ತೀರದಲ್ಲಿ ಉಪನಿವಿಷ್ಟರಾದ ಪಾಂಡ್ಯರು, ತಮ್ಮ ಹೊಸ ನೆಲೆಯನ್ನು 'ಮಧುರೆ' (Madura) ಎಂದು ಕರೆದರು; (3) ಅದೇ (ಶೌರಸೇನ ದೇಶದ) ಮಧುರೆಯಿಂದ ದಕ್ಷಿಣವನ್ನು ಸೇರಿ, ಗಟ್ಟದ ಸೀಮೆಯಲ್ಲಿ 'ಪೊಂಬುಚ್ಚ' ಪುರವನ್ನು ಸ್ಥಾಪಿಸಿ ಅರಸುಗೆಯ್ದ 'ಜಿನದತ್ತ' ರಾಯನು, ತನ್ನ ಹೊಸ ರಾಜ್ಯದಲ್ಲಿಯ ಒಂದು ಪರ್ವತಕ್ಕೆ 'ಗೋವರ್ಧನಗಿರಿ' (ಮೈಸೂರು ಸೀಮೆಯ ಸಾಗರ ತಾಲೂಕಿನಲ್ಲಿ) ಎಂದು ಹೆಸರಿಟ್ಟನು ('Mysore & Coorg from Inscriptions'—P–139) ಇತ್ಯಾದಿ.

11 'ಐತರೇಯ ಬ್ರಾಹ್ಮಣ'ದಲ್ಲಿ ಹೇಳಿರುವ 'ಸತ್ತ್ವತ' ಎಂಬ ಶಬ್ದವೇ 'ಸತಿಯ' ಎಂದು ಪರಿಣಮಿಸಿರಬೇಕೆಂದೂ, ಆ 'ಸತ್ತ್ವತರೇ ಅಶೋಕ ಶಿಲಾಲೇಖದಲ್ಲಿಯ 'ಸತಿಯ (ಪುತ)'ರೆಂದೂ, ಅದೇ 'ಸತ್ತ್ವತ'ರು, ತತ್ಪಶ್ಚಾತ್‌ಕಾಲೀನರಾದ 'ಸಾತವಾಹನ'ರೆಂಬವರೆಂದೂ ಶ್ರೀ ಜಾಯಸವಾಲರು ಅಭಿಪ್ರಾಯ ಪಡುತ್ತಾರೆ. ('Modern Review' — January 1925—P–82). ಈ ಅಭಿಪ್ರಾಯವು ವಿಚಾರಣೀಯವೇ ಸರಿಯಾದರೂ, ನಾನು ಇದನ್ನು ಈ ಲೇಖದಲ್ಲಿ 'ಅಧಿಕ ಪ್ರಸಂಗ'ವಾದೀತೆಂಬ ಭೀತಿಯಿಂದ ವಿಮರ್ಶಿಸುವುದಿಲ್ಲ; ಆದರೂ, 'ಸಾತವಾಹನ'ವೆಂಬುದು 'ಸತ್ತ್ವತ' ಅಥವಾ ಸತಿಯ 'ಶಬ್ದ'ದಿಂದ ಬಂದಿತೆಂದಾದರೆ, 'ವಾಹನ'ವೆಂಬ ಪದವು ಎಲ್ಲಿಂದ ಮತ್ತು ಹೇಗೆ ಬಂದಿರಬಹುದು? ಹಾಗೆಯೇ 'ಸಾತಕಣಿ'—'ಸಾತ (ಶಾತ)ಕರ್ಣಿ'—'ಸಾಲಹಣ'—'ಸಾಲನ'—'ಹಾಲ' ಇತ್ಯಾದಿ ರೂಪಾಂತರಗಳು 'ಸತ್ತ್ವತ' ಅಥವಾ 'ಸತಿಯ' ಶಬ್ದದಿಂದ ಹೇಗೆ ಬರಲಾಪವು? ಇದನ್ನೇನೂ ಶ್ರೀ ಜಾಯಸವಾಲರು ತರ್ಕಿಸಿರುವದಿಲ್ಲ.

12 ಗಂಗಾ–ಯಮುನಾ ನದಿಗಳ ಸಂಗಮದಲ್ಲಿ ಚಂದ್ರವಂಶೀಯ ಅರಸರ ಪ್ರಾಚೀನತಮವಾದ ರಾಜ್ಯವು ಸ್ಥಾಪಿತವಾಗಿ, ಅದರ ರಾಜಧಾನಿಯು 'ಪ್ರತಿಷ್ಠಾನಪುರ'ವೆಂದು ಪುರಾಣಗಳಲ್ಲದೆ ಈ 'ಪ್ರತಿಷ್ಠಾನ'ವು ಪ್ರಯಾಗದ ಇದಿರುದಡದಲ್ಲಿರುವ 'ಝೂಂಸಿ' ಎಂಬುದು. ಆದ್ದರಿಂದ ಗೋದಾವರೀ ತೀರದಲ್ಲಿ ಸಾತವಾಹನರಿಂದಾಗಲೀ, ಅಥವಾ ಅವರ ಹಿಂದಾಗಿ ಹೋದ ಇತರ ವಂಶೀಯರಿಂದಾಗಲೀ ಸ್ಥಾಪಿತವಾದ ಪ್ರತಿಷ್ಠಾನಪುರವು

ಚಂದ್ರವಂಶೀಯರಿಂದಲೇ ಸ್ಥಾಪಿತವಾಗಿರಬೇಕು. 13 'ಸಾತೇನ ಯಸ್ಮಾದೂಢೋಭೂತ್ತಸ್ಮಾತ್ತಂ ಸಾತವಾಹನಂ' (ಕಥಾಸ. I. 6. ೧೦೫) 14 ಕಥಾಸ.—I. 6. ೧೬೩. 15 = 'ಹಾಲನೆಂಬ ಹೆಸರು ಸಾತವಾಹನ (ವಂಶದ ಅರಸ)ನಿಗೆ ಬರುತ್ತದೆ' 16 = "ಶಾಲ" ಎಂಬ ಶಬ್ದವು 'ಹಾಲ'ನೆಂಬ ಅರಸನಿಗೂ, ಒಂದು ಬಗೆಯ ಮೀನಿಗೂ ಬರುತ್ತದೆ" 17 'ಹಾಲ' ಎಂಬ ಶಬ್ದವು ಸಾತವಾಹನ ರಾಯನಿಗೆ ಬರುತ್ತದೆ." 18 = "'ಅತಸೀ' (ಅಗಸಿ) ಮತ್ತು 'ಸಾತವಾಹನ' ಎಂಬ ಶಬ್ದಗಳಲ್ಲಿಯ 'ತ' ಕಾರವು 'ಲ'ಕಾರವಾಗುತ್ತದೆ" — ಆದ್ದರಿಂದ ಇವು 'ಅಲಸಿ' 'ಸಾಲವಾಹನ' ಎಂದಾಗುತ್ತವೆ. (ಈ 'ಸಾತವಾಹನ' ಅರಸರ ಹೆಸರುಗಳನ್ನು ಪುರಾಣಗಳಲ್ಲಿ ಹೆಸರಿಸುವಲ್ಲಿ ಇವರಲ್ಲಿ ಒಬ್ಬನ ಹೆಸರು 'ಅಪೀಲವ' ಎಂದು 'ವಾಯುಪುರಾಣ'ದಲ್ಲಿದೆ, ಆದರೆ ಅದೇ ಅರಸನ ಹೆಸರು 'ಅಪೀತಕ' ಎಂದು 'ಮತ್ಸ್ಯಪುರಾಣ'ದಲ್ಲಿದೆ; ಆದ್ದರಿಂದ ಇದರಿಂದಲೂ 'ತ'ಕಾರ 'ಲ'ಕಾರಗಳು ಪರಸ್ಪರ ವ್ಯತ್ಯಯ ಹೊಂದುತ್ತವೆಂದು ದೃಢವಾಗುತ್ತದೆ.) 19 ಹೇಮಚಂದ್ರನ 'ಶಬ್ದಾನುಶಾಸನ'ದ 'ಢುಂಢಿಕಾ' ಎಂಬ ಟೀಕೆಯಲ್ಲಿ 'ಸಾಲಾಹಣೀ' ಭಾಷೆಯೆಂದರೆ 'ಸಾತವಾಹನೋ ದೇವತಾ ಅಸ್ಯಾ ಇತಿ ಸಾಲಾಹಣೀ' ( = ಈ ಭಾಷೆಗೆ 'ಸಾತವಾಹನ'ನೆಂಬ ದೇವತೆಯಾದುದರಿಂದ ಇದಕ್ಕೆ 'ಸಾಲಾಹಣಿ' ಎಂದು ಹೆಸರು ") ಎಂದಿರುವುದರಿಂದ, 'ಸಾತವಾಹನ' ಎಂಬ ಶಬ್ದವು ಒಂದು ದೇವತೆಯ ಹೆಸರೆಂದು ಭಾವಿಸಿದಂತಾಯಿತು; ಆದರೆ ಈ ದೇವತೆಯು ಯಾರು ಎಂದೇನೂ ಹೇಳಿಲ್ಲ. 'ಸಾತವಾಹನ' ಎಂಬುದೊಂದು ದೇವತೆಯ ಹೆಸರೆಂಬುದು ನಿಸ್ಸಂದೇಹವಾದರೆ ಆ ದೇವತೆಯು 'ಸ್ಕಂದ' (ಕುಮಾರ)ನಾಗಿರಬಹುದೇ? ರಾಜಶೇಖರ (ಕ್ರಿ. ಶ. 9ನೆಯ ಶತಕ)ನ 'ಕಾವ್ಯಮೀಮಾಂಸೆ'ಯಲ್ಲಿ 'ಕುಂತಲೇಷು ಸಾತವಾಹನೋ ನಾಮರಾಜಾ। ತೇನ ಪ್ರಾಕೃತ ಭಾಷಾತ್ಮಕಮಂತಃಪುರ ಏವ ॥' (ಕುಂತಲ ದೇಶದರಸನಾರ ಸಾತವಾಹನನ ಅಂತಃಪುರದಲ್ಲಿ ಕೂಡಾ ಪ್ರಾಕೃತ ಭಾಷೆಯೇ ಆಡಲ್ಪಡುತ್ತಿತ್ತು) ಎಂಬುದರಿಂದ 'ಸಾಲಹಣೀ' ಭಾಷೆಯೆಂದರೆ 'ಸಾತವಾಹನ'ರ ಆಸ್ಥಾನದಲ್ಲಿಯ ಪ್ರಾಕೃತ ಭಾಷೆಯಿಂದಾಗುವುದು. 20 'Early History of the Dekkan' P. 29. 2I 'The Coins of India' (Heritage of India Series') Plate III No. 1.

22 Jouvean— Dubreil's 'Ancient History of the Dekkan'—p. 1. s. 23 'ಶಕ' ಪುರುಷನೆಂದು ಪ್ರಸಿದ್ಧನಾಗಿರುವ 'ಶಾಲಿವಾಹನ'ನ ಹೆಸರಾದರೂ ಏಕಮಾತ್ರ ಅರಸನ ಹೆಸರಲ್ಲ, ಆತನ 'ಸಾತವಾಹನ' ಎಂಬ ವಂಶನಾಮ ತಾನೇ ಎಂಬುದು ಇದರಿಂದ ವ್ಯಕ್ತವಾಗುತ್ತದೆ; ಇಷ್ಟೇ ಅಲ್ಲ, ಮೈಸೂರು ಸೀಮೆಯ ಷಿಕಾರಪುರ ನಂ. 281ನೆಯ ಶಿಲಾಲೇಖ (ಕ್ರಿ.ಶ. 1368) ದಲ್ಲಿ, 'ಶಾಲಿವಾಹನಶಕ' ವೆಂದಿಲ್ಲ — 'ಶಾತವಾಹನಶಕ'ವೆಂದಿದೆ = (Mysore & Coorg from Inscriptions'—p. 16. ಇದರಿಂದ 'ಶಾಲಿವಾಹನ' ವೆಂಬುದು ವ್ಯಕ್ತಿವಿಷಯಕವಾದ ಹೆಸರಲ್ಲ; ವಂಶದ ಹೆಸರೇ ಎಂಬುದು ದೃಢವಾಗುತ್ತದೆ. 24 ಸಂಸ್ಕೃತದಲ್ಲಿ 'ಅಲಕ' ( = ಆಳಕ) = 'ಕುಂತಲ' = ಕನ್ನಡ 'ಕೂದಲು' (ಕನ್ನಡ ಜೈಮಿನಿ ಭಾರತ'ವನ್ನೋದಿದವರು ಚಂದ್ರಹಾಸನನ್ನು ಆತನ ದಾಯಿಯು 'ಕುಂತಲ' ದೇಶಕ್ಕೆ ಕೊಂಡು ಹೋದುದೂ ಆತನು ಆ ದೇಶದಲ್ಲಿಯೇ ಅನೇಕ ಕಷ್ಟಗಳನ್ನನುಭವಿಸಿ, ಕಡೆಗೆ ಆ ದೇಶದ ರಾಜನಾದುದೂ ಬಲ್ಲರಷ್ಟೇ,) ಈ 'ಸಾತವಾಹನ' ವಂಶದ 'ಹಾಲ'ನೆಂಬೊಬ್ಬ ಅರಸಿಂದ ರಚಿತವಾದ 'ಗಾಥಾಸಪ್ತಶತಿ' ಎಂಬ ಪ್ರಾಕೃತ ಕಾವ್ಯದ ಕೊನೆಯ ಆರ್ಯೆಯು ಹೀಗದೆ—

'ರಾಏಣ ವಿರಇಆಏ ಕುಂತಲಜಣವಅಇಣೇಣ ಹಾಲೇಣ ।

ಸತ್ತಸಈ ಅ ಸಮತ್ತಂ ಸತ್ತಮವ:ಜ್ಜಾಸಅಂ ಏಅವ್ ॥'—

ಅದರ ಮುಂದೆಯೇ 'ಇತಿ ಶ್ರೀಮತ್ ಕುಂತಲ ಜನಪದೇಶ್ವರ—ಪ್ರತಿಷ್ಠಾನ ಪತ್ತನಾಧೀಶ—ಶತಕರ್ಣೋಪನಾಮಕ .. ಹಾಲಾದ್ಯುಪನಾಮಕ —ಶ್ರೀ ಸಾತವಾಹನನರೇಂದ್ರನಿರ್ಮಿತಾ . . . . ಸಪ್ತಶತ್ಯವಸಾನಮಗಾತ್!! 'ಎಂದಿದೆ (ಗಾಥಾಸಪ್ತಶತಿ'— Nirnayasagara Press Ed. Introd. p. 1) 25 'ಕಾಮಸೂತ್ರ'—II. VII. 28 26 'ರಾಜಶೇಖರನ' ಕಾವ್ಯಮೀಮಾಂಸೆ'ಯಿಂದ ಮೇಲೆ ಉದ್ಧರಿಸಿರುವ ವಾಕ್ಯವನ್ನು ನೋಡಿಕೊಳ್ಳುವುದು—27 ಈ ಹೆಸರು ಇವರ ನಾಣ್ಯಗಳಲ್ಲಿಯೂ ಶಿಲಾಲೇಖಗಳಲ್ಲಿಯೂ 'ಸಾತಕಂಣಿ' 'ಸಾತಕಂಣಿ,' 'ಸಾಟಕಂಣಿ', 'ಹಾತಕಣಿ', 'ಸತಕಣಿ', 'ಸದಕನ' ಇತ್ಯಾದಿ ರೂಪಾಂತರಗಳಿಂದ ಕಾಣಸಿಗುತ್ತವೆ. 28 Madras Govt. G. O. No. 99 of 29th August 1916 (p. 112) 29 'The North-west of Mysore was in possession of the kings who bore the general name of Satakarni' (Mysore Coorg from Inscriptions p. 15.)

30 Mysore Coorg from Insciptions'— p.p.14 —45; Dubreil's 'Ancient Hist. of the Dekkan'—p.p. 48–49.

30 Dubreil's Ancient Hist. of Dekkan' (N. 48) 31 "ಏವಮೇವ ಇಧ ರಾಜವಿಸಯಮ್ಹಿ ಯೋನಕಂಬೋಜೇಷು ನಾಭಕೇ ನಾಭಪಂತಿಷು ಭೋಜಪಿತಿನಕೇಷು, ಅಂಧಪುಲಿ (ಂ) ದೇಷು . . . . " (ಇಧ' = ಇಲ್ಲಿ; 'ರಾಜವಿಸಯಮ್ಹಿ' = ರಾಜನ, ಅಂದರೆ ಸ್ವಯಂ ಅಶೋಕನ ರಾಜ್ಯದಲ್ಲಿ) 32 Vincent Smith's 'Asoka' (p. 175—F n. 1)

33 D. R. Bhandarkar's 'Asoka' (p. 34)
34 Cambridge History of India—(Kharavela) vol, I.

35 'ಅಭಿತಮಿತಾ ಸಾತಕಣಿ ಪಛಿಮದಿಸಂ' = ಪಶ್ಚಿಮ ದಿಕ್ಕನ್ನು ಪಾಲಿಸುತ್ತಿರುವ ಶಾತಕರ್ಣಿ.

36 ಈ 'ಸಾತವಾಹನ'ರಲ್ಲಿ ಕೆಲ ಅರಸರಿಗೆ 'ಪುಳುಮಾಯಿ' 'ಪುಳುಮಾವಿ' ಎಂಬ ಹೆಸರುಗಳಿವೆ; ಈ ಹೆಸರುಗಳನ್ನು ಅನೇಕ ಐತಿಹಾಸಿಕರು ದ್ರಾವಿಡ (ಆಂಧ್ರ) ಭಾಷೆಯವೆಂದು ಶಂಕಿಸಿರು

ವರು—ಆದರೆ ಇವು ಕೇವಲ ವೈದಿಕ ನಾಮಧೇಯುಗಳೇ. ಋಗ್ವೇದದಲ್ಲಿ ಇಂದ್ರನು 'ಪುರುಮಾಯು'ನೆಂದು ಹೊಗಳಲ್ಪಟ್ಟಿರುವನು; 'ಪುರುಮಾಯು' ಎಂದರೆ 'ಬಹುಕರ್ಮಾ' (= ಅನೇಕ ಕಾರ್ಯಗಳನ್ನು ಮಾಡುವ)', 'ಬಹುವಿಧಾಶ್ಚರ್ಯಕರ್ಮಾ' (= ಅನೇಕ ಅದ್ಭುತವಾದ ಕೃತ್ಯಗಳನ್ನು ಮಾಡುವ) ಎಂದರ್ಥವು. (ಋಗ್ವೇದ — I. 119. 1; III 51. 4. ಇತ್ಯಾದಿ) ಈ 'ಪುರುಮಾಯು' ಎಂಬ ಶಬ್ದವೇ ಹೆಸರಾಗಿ ಉಪಯೋಗಿಸಲ್ಪಡಬಹುದು; ಅಥವಾ ಇದರಿಂದ ಉಂಟಾಗುವ ನಾಮವಾಚಿಯಾದ 'ಪುರುಮಾಯಿಋ' (= ಅನೇಕ ಕಾರ್ಯಗಳನ್ನು ಮಾಡುವವನು) ಎಂದೂ ಆಗಬಹುದು. ವೈದಿಕ ಭಾಷೆಯಲ್ಲಿ 'ಪುರು' (= ಬಹು) ಎಂಬ ಶಬ್ದವು 'ಪುಲು' ಎಂದೂ ರೂಪಾಂತರಿಸುತ್ತದೆ; ಉದಾ— 'ಪುಲುಕಾಮೋ (= ಪುರುಕಾಮೋ) ಹಿಮರ್ತ್ಯ: (ಋಗ್ವೇದ I. 179. 5.) ಸಂಸ್ಕೃತ 'ರ'ಕಾರವು ಪ್ರಾಕೃತದಲ್ಲಿ 'ಲ'ಕಾರವಾಗುತ್ತದೆ (ಸಂ. 'ರಾಜಾ' = ಪ್ರಾ. 'ಲಾಜಾ'); ಪ್ರಾಕೃತದಲ್ಲಿ 'ಲ— ಳ'ಕಾರಗಳು ಸಮಾನವೇ. ಸಂಸ್ಕೃತದಲ್ಲಿಯ 'ಯ' ಕಾರವು ಪ್ರಾಕೃತದಲ್ಲಿ 'ವ' ಆದೇಶವನ್ನು ಹೊಂದುವುದುಂಟು—ಉದಾ. ಸಂ. 'ಆಯುಧ' = ಪ್ರಾ 'ಆವುಧ'. ಹೀಗಾಗಿ ಸಂ. 'ಪುರುಮಾಯಿಋ' ಎಂಬುದು 'ಪುಳುಮಾಯಿ', 'ಪುಳುಮಾವಿ' ಆಯಿತಲ್ಲದೆ, ಇದು ಆಂಧ್ರ ಅಥವಾ ಇತರ ಯಾವ ದ್ರಾವಿಡ ಭಾಷೆಯ ಶಬ್ದವಾದರೂ ಅಲ್ಲವೆಂಬುದು ಖಂಡಿತವೆಂದು ನನಗೆ ತೋರುತ್ತದೆ. 37 ಈ 'ಸಿಮುಖ'ನೆಂಬ ಹೆಸರಿಗೆ 'ಶಿಶುಕ' 'ಶಿಪ್ರಕ' 'ಸಿಂಧುಕ' ಎಂಬಿವೇ ಮೊದಲಾದ ಹಲವು ಪಾಠಾಂತರಗಳು ಪುರಾಣಗಳಲ್ಲಿಯೇ ಇವೆ. (Pargiter's 'Purana text of the deynasties of the Kali age' p. 38) ಇವರ ನಾಣ್ಯಗಳಲ್ಲಿ 'ಸಿಮುಖ'ನೆಂಬೀ ಪ್ರಾಕೃತ ಭಾಷೆಯ ಹೆಸರಿದೆ. ಇದು ಬಹುಶಃ '(ಶ್ರೀಮುಖ' = ಸಿರಿಮುಖ = ಸಿಮುಖ) ಅಥವಾ 'ಷಣ್ಮುಖ' (= ಛಮುಖ = ಚಿಮುಖ = ಸಿಮುಖ) ಎಂಬುದರ ಪ್ರಾಕೃತ ರೂಪಾಗಿರಬೇಕೆಂದು ನನ್ನ ಊಹೆ. 38 Cambridge Hist of India'—Vol. I.

39 Dubreil 'Ancient Hist. of Dekkan' (pp. 14—15) 40 Ibid—p. 55 (ಈ 'ಉಜ್ಜಯಿನಿಯ ಚಿಹ್ನೆ'ವೆಂಬುದು ಹೀಗದೆ— o+o (with o above and below) Vide Rapson's 'Indian Coins' plate IV. No. 6) 41 Pargiter—p. 40.

42 'ಆಂಧ್ರಭೃತ್ಯ' ಎಂಬೀ ಶಬ್ದವನ್ನು ಅನೇಕರು ಷಷ್ಠೀ ತತ್ಪುರುಷವೆಂದು ಭಾವಿಸಿ 'ಆಂಧ್ರರ ಭೃತ್ಯರು' ಎಂದು ಅರ್ಥ ಮಾಡಿಕೊಂಡಿರುವರು; ಆದರೆ ಇದು ಸರಿಯಲ್ಲ; ಏಕೆಂದರೆ 'ಆಂಧ್ರಭೃತ್ಯ' ಎಂಬುದು ಬಹುವ್ರೀಹಿಯು, ಅದರ ಅರ್ಥವು 'ಆಂಧ್ರರು ಯಾರ ಭೃತ್ಯರೊ ಅವರು; ಅಥವಾ 'ಆಂಧ್ರರೇ ತಮ್ಮ ಭೃತ್ಯರಾಗಿ ಉಳ್ಳವರು' ಎಂದೇ.

43 'ಧರಣೀಕೋಟ' ಎಂಬ ಈ ಊರು ಮದ್ರಾಸಾಧಿಪತ್ಯದ ಗುಂಟೂರು ಜಿಲ್ಲೆಯಲ್ಲಿದೆ. 44 ಕಾಲಾಂತರದಲ್ಲಿ 'ಸಾತವಾಹನ'ರು ತಮ್ಮ ಮುಖ್ಯ ರಾಜಧಾನಿಯನ್ನು 'ಧಾನ್ಯಕಟಕ'ಕ್ಕೆ ಒಯ್ದು, ಪೈಠಣದಲ್ಲಿ (ಪ್ರತಿಷ್ಠಾನ) ಯುವರಾಜನ ಆಸ್ಥಾನವನ್ನು ಇಟ್ಟಿರುವಂತೆ ತೋರುತ್ತದೆ. (Rapson's 'Indian Coins'—p. 25; and Early Hist. of the Dekkan p. 16.)

45 'ಅಂಧ' ಎಂಬುದೂ 'ಅಂಧಕ' ಎಂಬುದೂ ಒಂದೇ ಶಬ್ದವು—ಕೊನೆಯಲ್ಲಿಯ 'ಕ'ಪ್ರತ್ಯಯವು ಅರ್ಥವನ್ನೇನೂ ಪಲ್ಲಟಿಸುವುದಿಲ್ಲ (ಸ್ವಾರ್ಥೇ 'ಕನ್') ಈ ಸಂಸ್ಕೃತ 'ಅಂಧ' ಎಂಬ ಶಬ್ದವು ಪ್ರಾಕೃತದಲ್ಲೂ 'ಅಂಧ' ಎಂದೇ ಆಗುತ್ತದೆ.

46 'Modern Review'— (i) Dec. 1913: pp. 622—23; (2) Jany. 1915: p. 82. 47 ಇತ್ತೀಚೆಗೆ 'ಡೆನ್ಮಾರ್ಕ್' (Dermark) ದೇಶದರಸನ ಒಬ್ಬ ಮಗನನ್ನು 'ನೋರ್ವೆ' (Norway) ಯ ಜನರು ತಮ್ಮ ರಾಜನನ್ನಾಗಿಯೂ, ಇನ್ನೊಬ್ಬನನ್ನು 'ಗ್ರೀಸ್' (Greece) ದೇಶದವರು ತಮ್ಮ ರಾಜನನ್ನಾಗಿಯೂ ಮಾಡಿಕೊಂಡಾಗ ಇವರು ಆಯಾ ದೇಶದ ಜನರು ತಮಗಿತ್ತ ಹೊಸ ಹೆಸರುಗಳನ್ನೇ ಧರಿಸಿ, ಆ ಹೆಸರುಗಳಿಂದಲೇ ರಾಜ್ಯವಾಳಿದರು. ಇಷ್ಟೇ ಅಲ್ಲ, ಅರಸನಿಗೆ ಪಟ್ಟವಾಗುವಾಗ ಪಟ್ಟದ ಹೆಸರೆಂದು ಹೊಸ ಹೆಸರನ್ನು ಕೊಡುವುದು ಪೂರ್ವದಿಂದ ಈಗಲೂ ನಡೆದು ಬರುತ್ತಿದೆ.

48 ಉದಾ—'ಜರಾಸಂಧನಿಗೆ ಮಾಗಧ'ನೆಂದೇ ಹೆಸರು; ಜಯದ್ರಥನಿಗೆ 'ಸೈಂಧವನೆಂದೇ; ದ್ರುಪದನಿಗೆ 'ಪಾಂಚಾಲ'ನೆಂದು; ಇತ್ಯಾದಿ; ಹಾಗೆಯೇ ಸುಯೋಧದನನು 'ಕೌರವ'ನೆಂಬ ಕುಲನಾಮದಿಂದ ಪ್ರಸಿದ್ಧನಾಗಿರುವಂತೆ 'ಸುಯೋಧನ'ನೆಂಬ ಸ್ವನಾಮದಿಂದಲ್ಲ— ಇತ್ಯಾದಿ. 49 'ಸಾತಿಯಪುತರ ದೇಶವು ಅಶೋಕನ ಸಾಮ್ರಾಜ್ಯಕ್ಕೆ ಒಳಪಟ್ಟಿರಲಿಲ್ಲ; ಅದು ಸ್ವತಂತ್ರ ದೇಶವಾಗಿದ್ದಿತು. (ಅಶೋಕನ ದ್ವಿತೀಯ ಶಿಲಾಶಾಸನ) 50 ಈ ಪ್ತೊಲೆಮಾಯನು ಭಾರತವರ್ಷಕ್ಕೆ ಬಂದುದ್ದಿಲ್ಲ; ಈತನು ಬರೆದಿರುವ ಭಾರತ ವರ್ಷದ 'ಭೂಕೋಶ' (geography) ವು ಅನೇಕ ಬಗೆಯ ತಪ್ಪುಗಳಿಂದ ತುಂಬಿದೆ. (Ptolemy's geographical knowledge is strikingly imperfect')— Imperial gazetteer of India; Indian Empire' vol II. p. 77. 51 ಪ್ತೊಲೆಮಾಯನ ಗ್ರೀಕ್ ಭಾಷೆಯಲ್ಲಿಯ ಗ್ರಂಥದಲ್ಲಿ ಈ ಶಬ್ದವು 'Aioi' ಎಂದಿದೆ (Satoi' ಎಂದಿಲ್ಲ); ಇದನ್ನೇ ಐತಿಹಾಸಿಕರು 'ಅಹಿ (= ಸರ್ಪ)ಗಳ ದೇಶ'ವಾಗಿರಬೇಕೆಂದು ಭಾವಿಸಿ, ಇದು ಕೇರಳದೇಶದ ಹೆಸರಾಗಿರಬೇಕೆನ್ನುವರು— ಆದರೆ ಇದು ಸರಿಯಲ್ಲವೆಂದು ನನ್ನ ಆಕ್ಷೇಪ. ಕೇರಳ ದೇಶವು ನಾಗವಂಶದವರ ರಾಜ್ಯವಾಗಿತ್ತೆಂದು ಅಲ್ಲಿಯ ಸ್ಥಳಪುರಾಣಗಳಲ್ಲಿದೆ [ಹಾಗೆಯೇ ಮೈಸೂರಿನ ಚಿತ್ರದುರ್ಗ ಜಿಲ್ಲೆ, ಉತ್ತರ ಕನ್ನಡದ ಬನವಾಸಿ ಪ್ರಾಂತ—ಇವುಗಳನ್ನು ಒಳಕೊಂಡಿರುವ ಪ್ರದೇಶಕ್ಕೆ ಮುಂಚೆ 'ನಾಗಖಂಡ—ನಾಗರ ಖಂಡ'ವೆಂದು ಹೆಸರಿತ್ತು— Mysore & Coorg from Inscriptions p. 202; ನಮ್ಮ ತುಳು ನಾಡೂ ಒಂದಾನೊಂದು ಕಾಲದಲ್ಲಿ ನಾಗರಾಜ್ಯವಾಗಿತ್ತೆಂದು ತಿಳಿಯಬರುತ್ತದೆ—ಸರ್ವತ್ರಕಾಣ ಸಿಗುವ ನಾಗಕಲ್ಲುಗಳೂ, ನಾಗ ಬನಗಳೂ, ಸರ್ಪರೂಪಿಯಾದ ಸ್ಕಂದನೆಂಬ ಸುಬ್ರಹ್ಮಣ್ಯನ ದೇವಾಲಯಗಳು ಇದಕ್ಕೆ ತುಂಬಾ ಸಾಕ್ಷಿಯಾಗಿವೆ.] ಆದ್ದರಿಂದ ಅಹಿ = ಸರ್ಪ = ನಾಗ ಎಂಬ ಭಾವನೆಯಿಂದ (Aioi) ಎಂಬುದನ್ನು 'ಅಹಿದೇಶ = ಸರ್ಪದೇಶ = ನಾಗದೇಶ' ವೆಂದೆಣಿಸಿರುವರು. '(Aioi)'— ಎಂಬುದು ಜನರನ್ನು ಸೂಚಿಸುವ ಬ

ಹುವಾಚಿಯುಲ್ಲದೆ; ದೇಶವನ್ನು ಸೂಚಿಸುವ ಏಕವಚನ ಶಬ್ದವಲ್ಲ) ಆದರೆ 'ಅಹಿ' ಎಂಬುದು ವೈದಿಕಶಬ್ದವು, ಅದು ಋಗ್ವೇದದಲ್ಲಿ 'ಸರ್ಪ' ಎಂಬಂರ್ಥದಿಂದಿದ್ದೆ, ಮತ್ತು ಇಂದ್ರ ಶತ್ರುವಾದ ವೃತ್ರಾಸುರ'ನ ಹೆಸರು; ಇಷ್ಟೇ ಅಲ್ಲ ಇದು 'ಅಜಿ' ಎಂಬ ರೂಪಿಂದ 'ಅವಸ್ತಾ' (Avesta) ಭಾಷೆಯುಲ್ಲಿಯೂ ಇರುವ ಮೂಲ-ಆರ್ಯಶಬ್ದವು. 'ನಾಗ' ಶಬ್ದವು 'ಹಾಗಲ್ಲ-ಇದು ವೇದಗಳಲ್ಲಿ ಇಲ್ಲ; ಪ್ರಥಮತಃ 'ಬೃಹದಾರಣ್ಯಕೋಪನಿಷತ್ತಿನಲ್ಲಿ ಕಾಣಸಿಗುವಾಗಲೂ 'ಆನೆ' ಎಂಬ ಅರ್ಥದಿಂದಲ್ಲದೆ 'ಸರ್ಪ' ಎಂಬ ಅರ್ಥದಿಂದಲ್ಲ;-ಆದ್ದರಿಂದ 'ನಾಗ' ಎಂಬ ಶಬ್ದವು ಅನಾರ್ಯ ಭಾಷೆಗಳಿಂದ ಆರ್ಯ ಸಂಸ್ಕೃತದಲ್ಲಿ ಸೇರಿರಬೇಕೆಂಬುದು ಖಚಿತವಾದ್ದರಿಂದ, ಪ್ರಾಚೀನಕಾಲದ ಕೇರಳ ದೇಶದಲ್ಲಿಯು ಅಥವಾ ದಕ್ಷಿಣಾಪಥದಲ್ಲಿಯು ಇತರ ಯಾವಲ್ಲಿಯು 'ನಾಗ' ವಂಶದವರನ್ನು ಅಹಿ' ಎಂದು ಕರೆವುದು ತಪ್ಪು— ಈಗಣ ಕಾಲದಲ್ಲಿ 'ಅಹಿ' ಎಂಬುದೂ ನಾಗ ಎಂಬುದೂ 'ಸರ್ಪ' ಎಂಬರ್ಥದಲ್ಲಿ ಸಮಾನವಾಗಿ ಪ್ರಯೋಗಿಸಲ್ಪಡುತ್ತವಾದರೂ, ಆಗಣ ಪ್ರಾಚೀನ ಕಾಲದಲ್ಲಿ, ಅವೆಂದಿಗೂ ಹಾಗಾಗವು; ಆದ್ದರಿಂದ ನಾಗರು ನಾಗರೇ, ಅಹಿ ಎಂಬುದು ಅಹಿಯೇ, ಅಲ್ಲದೆ ನಾಗರು ಅಹಿಗಳಾಗಲಾರರು. ಪ್ಟೊಲೆಮಾಯುನ ಭಾರತ ಭೂಕೋಷದಲ್ಲಿ ಅನೇಕ ಬಗೆಯು ತಪ್ಪುಗಳಿವೆ.—ಆದ್ದರಿಂದ ಆತನ 'Aioi' ಎಂಬುದು 'Satoi' ಎಂಬ ಗ್ರೀಕ್ ಶಬ್ದದ ಅಪಭ್ರಂಶವಾದ ಪಾಠಾಂತರವೆಂದೇ ನನಗೆ ತೋರುತ್ತದೆ; ಇಂಥಾ ಅಪಭೃಷ್ಟ ಪಾಠಾಂತರಗಳು ಗ್ರೀಕ್ ಭೌಗೋಲಿಕರು ಭಾರತೀಯ ಹೆಸರುಗಳನ್ನು ಗ್ರೀಕ್ ಭಾಷೆಯುಲ್ಲಿ ಪರಿವರ್ತಿಸುವುದರಲ್ಲಿ ತುಂಬಾ ಸಿಗುತ್ತದೆ; ಭಾರತೀಯ ಹೆಸರುಗಳ ಆದಿಮ ಊಷ್ಮವರ್ಣ (initial sibilant) ಗಳನ್ನು ಲೋಪಿಸಿ ಬಿಡುವುದು ಅವರಲ್ಲಿ ಸಾಮಾನ್ಯವಿದೆ (ಉದಾ-ಸಂ. ಚಂದ್ರಗುಪ್ತ=Gk. 'Sandrakottos' Andrakottos) ಆದ್ದರಿಂದ Satoi ಎಂಬುದು 'Atoi' ಆಯಿತು. ಗ್ರೀಕ್ ಅಕ್ಷರ ಮಾಲೆಯುಲ್ಲಿಯು 't' ಮತ್ತು 'i' ಅಕ್ಷರಗಳು ಅತ್ಯಂತ ಸದೃಶವಾಗಿರುವುದರಿಂದ ಆಗಣ ಕಾಲದಲ್ಲಿ ಹಸ್ತಲೇಖನಗಳನ್ನೋದುವಾಗ 't' ಯು 'i' ಎಂದು ಓದಲ್ಪಟ್ಟು, ಈ Atoi ಎಂಬುದು Aioi ಎಂದು ವಿಕಾರವಾದ ರೂಪಾಂತರ ಹೊಂದಿದುದೇನೂ ಸೋಜಿಗವಲ್ಲ.

52 My aforesaid article in the C. H. S. magazine 53 Early History of the Dekkan'—p. 20. 54 'ಶಾಲಿವಾಹನ' ಎಂಬ ಶಬ್ದವು ಹೀಗೆಯೇ 'ತಾಲೀವನ' ಎಂಬ ಮೂಲ ಶಬ್ದದಿಂದುಂಟಾದುದು. ತಾಲವನ = ತಾಲೀವನ; 'ತಾಲೀವನ' ದೇಶದ ಜನರು 'ತಾಲೀವಾನ'ರು; 'ತಾಲೀವಾನ' = 'ಸಾ (ಶಾ) ಲಿ (ೀ) ವಾ (ಹ)ನ' = 'ಶಾಲಿವಾಹನ'. 'ಶಾಲಿವಾಹನ'ನು ಪ್ರಸಿದ್ಧ 'ಶಕ' ಪುರುಷನೆಂಬ ಪ್ರತೀತಿಯುಂಟಷ್ಟೇ. ನವಿಸ್ಸಾ ಜಿಲ್ಲೆಯುಲ್ಲಿ ಯಾರೊಬ್ಬನು ಶ್ರೇಷ್ಠನಾದವನಿದ್ದರೆ, ಆತನಿಗೆ 'ತಾಲೀವಾನ'ವೆಂದು ಹೇಳುವುದು ಈಗಲೂ ಪ್ರಚಾರದಲ್ಲಿದೆ; ಈ ಅರ್ಥದ 'ತಾಲೀವಾನ' ಎಂಬ ಶಬ್ದವು 'ಶಾಲಿವಾಹನ' ಎಂಬರ್ಥದಲ್ಲಿಯೂ, ಅದರ ಬದಲಾಗಿಯೂ ಬರುತ್ತದೆಂಬುದು ಪ್ರತ್ಯಕ್ಷವು; ಆದ್ದರಿಂದ ಈ 'ತಾಲೀವಾನ' ಎಂಬುದರಿಂದ 'ಶಾಲಿವಾಹನ' ಹಾಗೂ 'ಸಾತವಾಹನ' ಎಂಬ ಶಬ್ದಗಳ ಮೂಲವೂ (ಅಂದರೆ 'ತಾಲೀವನ' ಎಂಬುದರಿಂದ ಇವುಗಳ ನಿಷ್ಪತ್ತಿಯೂ) 'ಸಾತವಾಹನ'ರಿಗೆ 'ತಾಲೀವನ' ದೇಶದೊಂದಿಗೆ ಇರತಕ್ಕ ಸಂಬಂಧವೂ ವಿವೇಚಿಸಲ್ಪಡವೇ?

55 'Dubreil's Ancient Hist. of Dekkan' (p. 47) 55*a* Ibid—p. 15. 56 Dubreil (p. p. 48—49): Mysore Coorg from Inscriptions (pp. 14—15) 57 Ibid. p. 50; ibid. p. 202. ('ನಾಗಾನಂದ' ನಾಟಕದ ಕಥಾಕ್ಷೇತ್ರವು ಮಲಯ ಪರ್ವತದ ಪಾರ್ಶ್ವವರ್ತಿಯಾಗಿರುವ, ಮತ್ತು ಬನವಾಸಿಯಿಂದ ಅನತಿದೂರದಲ್ಲಿರುವ, ಪಶ್ಚಿಮ ಸಮುದ್ರ ತೀರದಲ್ಲಿರುವ ಗೋಕರ್ಣ ಕ್ಷೇತ್ರದ ನಿಕಟ ಪ್ರದೇಶವು, = 'ಚತುರ್ಥಾಂಕ).

58 'ನಾಗ'ಎಂಬ ಶಬ್ದವಾಗಲೀ, 'ನಾಗ (ಸರ್ಪ) ಪೂಜೆ'ಯಾಗಲೀ ವೇದಗಳಲ್ಲಿ ಅಥವಾ ಬ್ರಾಹ್ಮಣಗಳಲ್ಲಿ ಹೇಳಿಲ್ಲವೆಂಬುದನ್ನು ಈ ಮುಂಚೆ ಹೇಳಿಯುದೆ. ಚಂದ್ರಗುಪ್ತನ ಮಂತ್ರಿಯಾದ ಚಾಣಕ್ಯನ (ಕ್ರಿ. ಪೂ. 4ನೆಯ ಶತಕದಲ್ಲಿ) 'ಅರ್ಥಶಾಸ್ತ್ರದಲ್ಲಿ 'ನಾಗಪ್ರತಿಮೆ'ಗಳನ್ನೂ, ಸರ್ಪದ ಹುತ್ತುಗಳನ್ನೂ ಕುರಿತು ಹೇಳಿಯುದೆ—'ನಾಗಪ್ರತಿಮಾಯಾ ಮಂತಶ್ಛಿದ್ರಾಯಾಂ ಚೈತ್ರಚ್ಛಿದ್ರೇ ವಲ್ಮೀಕಛಿದ್ರೇ ವಾ ಸರ್ಪದರ್ಶನ ಮಾಹಾರೇಣ ಪ್ರತಿಬಂಧ ಸಂಜ್ಞಂ ಕೃತ್ವಾ . . . . (V. 2. 90—p. 244. 2nd Ed: Mysore University Oriental library Publ.)

59 'ಮಹಾಭಾರತ'ದ ವನಪರ್ವದಲ್ಲಿ (ಅ. 230) 'ಕಾರ್ತಿಕೇಯ'ನ ಕಥೆಯನ್ನು ವರ್ಣಿಸಿರುವಲ್ಲಿ ಆತನ 51 ಹೆಸರುಗಳನ್ನು ಕೊಟ್ಟಿದೆ—ಅದರಲ್ಲಿ 'ಸುಬ್ರಹ್ಮಣ್ಯ'ನೆಂಬ ಹೆಸರಿಲ್ಲ; ದಕ್ಷಿಣ ಭಾರತದಲ್ಲಿ ತುಳುನಾಡು (ಬಹುಶಃ ಕೇರಳ ಕೂಡಾ) ವಿನಾ ಇತರತ್ರ 'ಸುಬ್ರಹ್ಮಣ್ಯ'ನೆಂದು ಕಾರ್ತಿಕೇಯುನಿಗೆ ಹೆಸರದೆಯಾದರೂ, ಆತನಿಗೆ 'ನಾಗ (ಸರ್ಪ) ವಿಗ್ರಹ'ವೂ ಇಲ್ಲ, 'ನಾಗ'ನಿಗೆ 'ಸುಬ್ರಹ್ಮಣ್ಯ'ನೆಂಬ ಹೆಸರೂ ಇಲ್ಲ; ಆರ್ಯಾವರ್ತ (ಉತ್ತಾರಾಪಥ)ದಲ್ಲಿ 'ಕಾರ್ತಿಕೇಯ'ನಿಗೆ 'ಸುಬ್ರಹ್ಮಣ್ಯ'ನೆಂಬ ಹೆಸರೇ ಇಲ್ಲ. ಈ 'ಸುಬ್ರಹ್ಮಣ್ಯ' ಎಂಬ ಹೆಸರು 'ಸುಬ್ಬರ+ಮಣಿ' ಎಂಬ ದ್ರಾವಿಡ ಅಲುಕ್ಸಮಾಸ ಶಬ್ದದಿಂದ ಸಂಸ್ಕೃತದಲ್ಲಿ ಎತ್ತಿಕೊಂಡುದಾಗಿರ ಬೇಕು; 'ಸುಬ್ಬ' ಎಂದರೆ ದ್ರಾವಿಡ ಭಾಷೆಯುಲ್ಲಿ 'ನಾಗ' (= ಸರ್ಪ)ಕ್ಕೆ ಹೆಸರು; 'ಮಣಿ' ಎಂದರೆ ದ್ರಾವಿಡ ಭಾಷೆಯುಲ್ಲಿ 'ರತ್ನ' ಎಂದರ್ಥ ('ಮಣಿ' ಎಂಬುದು ಮೂಲ ದ್ರಾವಿಡದಿಂದಲೇ ಸಂಸ್ಕೃತದಲ್ಲಿ ಕೊಂಡ ಶಬ್ದವಲ್ಲದೆ,

ಮೂಲ ಸಂಸ್ಕೃತವಲ್ಲ); ಅಥವಾ 'ಮಹಾಭಾರತ'ದ 'ಉದ್ಯೋಗಪರ್ವ'ದಲ್ಲಿ 'ದಕ್ಷಿಣ ಭಾರತ'ದಲ್ಲಿಯ ನಾಗಜಾತಿಯ ವಿವಿಧ ಕುಲಗಳನ್ನು ಹೆಸರಿಸುವಲ್ಲಿ 'ಮಣಿ' ಎಂಬುದೊಂದು ನಾಗ ಕುಲವನ್ನೂ ಹೇಳಿರುವುದರಿಂದ (ಅಧ್ಯಾಯ–102), 'ಮಣಿ' ಎಂಬ ಕುಲಕ್ಕೆ ಸೇರಿದ 'ಸುಬ್ಬ' (ಸರ್ಪ) ಅಥವಾ 'ಸರ್ಪದಲ್ಲಿಯ ಮಣಿ ಕುಲದವನು' ಎಂದು ಅರ್ಥವಾಗುತ್ತಿವೆ— ಇದೇ ಸರಿಯೆಂದು ನನಗೆ ತೋರುತ್ತಿದೆ.

60 ಈ 'ಸಾಸ್ತಾವು' ಕಲ್ಲುಗಳಲ್ಲಿ ನಾಗರೂಪಿಯಾದ ಸುಬ್ರಹ್ಮಣ್ಯನ ವಿಗ್ರಹವಿದೆ. ('ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ'–ಪುಟ 12).

61 'Manual of the administration of Madras Presidency.'—Vol: III Glossary P—139. 62 Malabar District Gazetteer'— pp. —140; 155. 63 'ಗ' ಕಾರಕ್ಕೆ 'ಯ' ಕಾರಾದೇಶವು ತುಳುವಿನಲ್ಲಿ ಪ್ರಾಯಿಕವಾಗಿದೆ. ಉದಾ. ಕನ್ನಡ 'ನೇಗಿಲು' = ತುಳು 'ನಾಯರ್', 'ಮಾಗಿ = ತು. 'ಮಾಯಿ' ಹಾಗೆಯೇ 'ವ–ಪ'ಕಾರಗಳ ಪರಸ್ಪರ ವ್ಯತ್ಯಯವು ಎಲ್ಲಾ ದ್ರಾವಿಡ ಭಾಷೆಗಳಲ್ಲಿ ಪ್ರಾಯಿಕವೆಂಬುದನ್ನು ಹೇಳಬೇಕೆಂದಿಲ್ಲವಷ್ಟೇ.

64 ಇದಕ್ಕೆ ಉದಾ— ಕನ್ನಡ. 'ಕಾರ್ಕಳ' = ತುಳು 'ಕಾರ್ಲ;'–ಕ. 'ಹರಿಕಳ' = ತು. 'ಪರಿಯಾಳ'; ಕನ್ನಡ (ಮತ್ತು ತುಳು) 'ಕೋಟಿಕಾರ' = ತುಳು 'ಕೋಟಾರ', 'ಬೇವುಕುಂಜ' = 'ಬೇವುಂಜ' ಇತ್ಯಾದಿ.

65 'ಹಾಡಿ' ಅಥವಾ 'ಹಾಡು' = a settlement 66 ಹಾರ = a region or a district. 67 ಬಳ್ಳಾರಿ ಜಿಲ್ಲೆಯ 'ಹಿರಹಡಗಳ್ಳಿ'ಯ ದತ್ತಿಯಲ್ಲಿ 'ಸಾತಾಹನಿರಟ್ಟ'ವೆಂಬ ಪ್ರದೇಶವೂ, ಅದೇ ಜಿಲ್ಲೆಯ 'ಮ್ಯಾಕದೋನಿ'ಯಲ್ಲಿಯ ಶಿಲಾಲೇಖದಲಿ 'ಸತವಘನಿಹಾರ'ವೆಂಬುದೂ ಉಲ್ಲೇಖಿಸಲ್ಪಟ್ಟಿವೆ. ಇವಾದರೂ ಬಹುಶಃ 'ಸಾತವಾಹನ'ರ ನೆಲೆಗಳನ್ನು ಸೂಚಿಸುತ್ತವಾದ್ದರಿಂದ, ತುಳುನಾಡಿನಲ್ಲಿಯ ಅವರ ಮೂಲಸ್ಥಾನದಿಂದ ಅವರು ಬನವಾಸಿ ಮಳವಲ್ಲಿ ಪ್ರದೇಶದ ದಾರಿಯಿಂದ ಬಳ್ಳಾರಿ ಜಿಲ್ಲೆಯಲ್ಲಿಯೂ ಕೆಲಕಾಲ ತಂಗಿದ್ದು, ಅಲ್ಲಿಂದ ಉತ್ತರಕೆ ಉಜ್ಜಯಿನಿಯತ್ತ ಕಡೆಗೆ ಸರಿದಿರಬೇಕೆಂದು ತೋರುತ್ತದೆ. 68 ಅಧ್ಯಾಯ 37-38. 69 'ಅನೂಪವಿಷಯೇ ಚೈವ ವೇಲಾವನ ವಿಭೂಷಿತಂ' (II. 37. ೪೦) ಇದು ನರ್ಮದಾ ನದಿಯ ತಟದಲ್ಲಿಯ ರಾಜ್ಯ; ಇದಕ್ಕೆ 'ಹೈಹಯ'ವೆಂದೂ, 'ಮಹಿಷ' ಎಂದೂ 'ಮಾಹಿಷಕ' ಎಂದೂ ಹೆಸರಿವೆ; ಇದರ ರಾಜಧಾನಿಯು 'ಮಾಹಿಷ್ಮತಿ' ಯು. (ರಘುವಂಶ VI. 37–43). ಪುರಾಣಗಳಲ್ಲಿ ಇದು 'ಕಾರ್ತವೀರ್ಯಾರ್ಜುನ'ನೆಂಬ ಚಕ್ರವರ್ತಿಯ ರಾಜ್ಯವೆಂದು ಹೇಳಿಯದೆ. 70 ಇದು ಶ್ರೀ ಕೃಷ್ಣನ ರಾಜಧಾನಿಯಾದ ದ್ವಾರಕಾನಗರವಿದ್ದ ರಾಜ್ಯವು. 71 'ವನವಾಸೀತಿವಿಖ್ಯಾತಃ ಸ್ಫೀತೋಜನಪದೋಮಹಾನ್ । ೨೮ ॥ (ಉತ್ತರ ಕನ್ನಡದಲ್ಲಿಯ 'ಬನವಾಸಿ' ರಾಜ್ಯ.)

72 ಹರಿತೋಽಪಿ ಸಮುದ್ರಸ್ಯ ದ್ವೀಪಂ ಸಮಭಿಪಾಲ<br>ಯನ್ । ೨೯ ।

ತಸ್ಯದಾಶಾ ಜಲೇ ಮಗ್ನಾ ಮುದ್ಗರಾ ನಾಮ<br>ವಿಶ್ರುತಾಃ ।

ಯೇ ಹರಂತಿ ಸದಾ ಶಂಖಾನ್ ಸಮುದ್ರೋದರ<br>ಚಾರಿಣಃ ॥ ೩೦ ॥

73 'ಸಾತ್ತತಾತ್ ಸಾತ್ತ್ವತಾಃ ಸ್ಮೃತಾಃ । ೩೧ ।

74 'ದ್ವೀಪ' ಎಂಬುದರಿಂದ ಸುತ್ತಲೂ ನೀರುಳ್ಳದೆಂದೇ ಅರ್ಥವಲ್ಲ; 'ದ್ವೀಪ' ಅಂದರೆ 'ಇಕ್ಕಡೆಗಳಲ್ಲಿ ನೀರುಳ್ಳದು' ಎಂದು ತಾನೇ. ನಮ್ಮ ತುಳುನಾಡಿನ ಬಡಗಣ ಮೇರೆಯಲ್ಲಿಯೂ, ತೆಂಕಣ ಮೇರೆಯಲ್ಲಿಯೂ ದೊಡ್ಡ ನದಿಗಳಿವೆ, ಪಡುವಲಲ್ಲಿ ಕಡಲೇ ಇದೆ. (ದ್ವೀಪಃ = ದ್ವಿರ್ಗತಾ ಆಪೋ ಯತ್ರ).

75 ಹೀಗೆಯೇ ಅಚ್ಚ ಕನ್ನಡ ಶಬ್ದವಾದ 'ಮಿಡಚೆ' (= ಮಿಡಿತೆ) ಎಂಬುದು 'ಮಟಿಚೀ' ಎಂಬ ಸಂಸ್ಕೃತರೂಪದಿಂದ 'ಛಾಂದೋಗ್ಯಉಪನಿಷತ್ತಿ'ನಲ್ಲಿದೆ ('ಮಟಚೀಹಿತೇಷುಕುರುಷು' I. 10. ೧.) ಇಂಥಾ ಅನೇಕ ದ್ರಾವಿಡ ಶಬ್ದಗಳು ಸಂಸ್ಕೃತದಲ್ಲಿ ರೂಪಾಂತರಗಳಿಂದ ಉಪಯೋಗಿಸಲ್ಪಟ್ಟು, ಶುದ್ಧ ಸಂಸ್ಕೃತ ಶಬ್ದಗಳೇ ಎಂದಾಗಿವೆ. (Vide Kittel's 'Kannada Dictionary'—Preface, pp. XVII to XLV.)

76 'ಅನೂಪ' ಎಂಬ ಶಬ್ದವು 'ಸೈರಿಭ' = 'ಮಹಿಷ' = ಕೋಣಕ್ಕೂ ಬರುವುದರಿಂದಲೇ ನರ್ಮದೆಯ ದಂಡೆಯಲ್ಲಿಯ 'ಅನೂಪ' ದೇಶಕ್ಕೆ 'ಮಹಿಷ'ದೇಶವೆಂದೂ ಹೆಸರು ಬಂದಿರಬೇಕು. 77 'ಅಮರಕೋಶ'ಕ್ಕೆ ಮಹೇಶ್ವರನೆಂಬವನು ಬರೆದಿರುವ 'ಅಮರವಿವೇಕ' ಎಂಬ ಟೀಕೆಯಲ್ಲಿ 'ಅನೂಪ' ಎಂದು ಹೆಸರು ಬರತಕ್ಕ ದೇಶಕ್ಕೆ ಯಾವ ಲಕ್ಷಣಗಳಿರ ಬೇಕೆಂಬುದನ್ನು ಹೀಗೆ ಹೇಳಿಯದೆ:—

ನಾನಾದ್ರುಮಲತಾವೀರುನ್ನಿರ್ಝರ ಪ್ರಾಂತ ಶೀತಲೈಃ<br>ವನೈರ್ವ್ಯಾಪ್ತಮನೂಪಂ ತತ್ ಸಸ್ಯೈರ್ವ್ರೀಹಿಯ<br>ವಾದಿಭಿಃ । (II. 1. 10).

ಇವೆಲ್ಲವು ಈ ತುಳು ನಾಡಿನಲ್ಲಿ ಸಂಪನ್ನವಾಗಿದೆ.

78. 'Trivandrum Sanskrit Series' XLV pp. 3–4.

79 ಈ 'ಸಪ್ತಕೊಂಕಣ'ವೆಂಬ ಪ್ರದೇಶವು ದಕ್ಷಿಣದಲ್ಲಿ ಕನ್ಯಾಕುಮಾರಿಯಿಂದ ಉತ್ತರದಲ್ಲಿ (ಮುಂಬಾಯಿ ಅಧಿಪತ್ಯದಲ್ಲಿಯ) ಠಾಣಾ ಜಿಲ್ಲೆಯಲ್ಲಿರುವ 'ವೈತರಣಿ' ಎಂಬ ನದಿಯ

ವರೆಗೆ ವಿಸ್ತರಿಸಿತ್ತು: ಇದರ ಮೂಡಣ ಮೇರೆ ಪಶ್ಚಿಮ ಗಟ್ಟಗಳು, ಪಡುಮೇರೆ ಸಮುದ್ರವು.

80 'ಕೂಪಕ–ಕೇರಳ–ಮೂಷಿಕ' ಎಂಬೀ ಮೂರು ದೇಶಗಳು ಮಲೆಯಾಳ ರಾಜ್ಯದ ಭಾಗಗಳು. ಇವುಗಳು ಕನ್ಯಾಕುಮಾರಿಯಿಂದ ನಮ್ಮ ಜಿಲ್ಲೆಯಲ್ಲಿಯ ಚಂದ್ರಗಿರಿಯ ಹೊಳೆಯ ವರೆಗೆ ಪಸರಿಸಿವೆ. ಇವುಗಳನ್ನು ಕುರಿತು ವಿಶೇಷ ಮಾಹಿತಿಯನ್ನು 'History of Kerala' Vol. I (P. 41) ಎಂಬ ಗ್ರಂಥದಿಂದ ಅರಿತುಕೊಳ್ಳಬಹುದು.

81 'ಪಶು' ಎಂಬುದು 'ಹೈಗ'ದೇಶವೆಂದು ಹೇಳಲ್ಪಡುವ ಉತ್ತರ ಕನ್ನಡ ಜಿಲ್ಲೆಯು; ಇದಕ್ಕೆ ಮೂಲ ಹೆಸರಾದ 'ಹೈಗ' ಎಂಬ ಶಬ್ದದಿಂದಲೇ 'ಪಶು'ವೆಂದು ಬಂತು. ಗೋದಾವರೀ ತೀರದಲ್ಲಿಯ 'ಅಹಿಚ್ಛತ್ರ' (ಪ್ಟೋಲೆಮಾಯನ 'Adisathroi') ವೆಂಬ ದೇಶದಿಂದ ಬಂದವರು ಪಡುಗಡಲ ಕರಾವಳಿಯಲ್ಲಿ ನೆಲೆಗೊಂಡ ದೇಶವೇ 'ಅಹಿಕ'ರ ದೇಶವು, ಅಥವಾ 'ಅಹಿಕ'ದೇಶವು 'ಅಹಿಕ' = ಅಹಿಗ = ಹಯಿಗ ( = ಹೈಗ ) = ಪಶುಕ = ಪಶು (ಸ್ವಾರ್ಥೇ 'ಕನ್'—ಎಂದರಿಂದ ಅಂತಿಮ 'ಕ' ಪ್ರತ್ಯಯದ ಲೋಪ). 'ಹಯಿಗ'ವೆಂಬುದು 'ಪಶು'ವೆಂದಾದು ಹೀಗೆ— 'ಪಯಿರ್' ಅಥವಾ 'ಹಯಿರ್' = 'ಹಸಿರ್' = 'ಹಸುರು' = 'ಪಸರು.' 82 'ಕೊಂಕಣ–ಪರಕೊಂಕಣ'ಗಳೆಂಬಿವು ಉತ್ತರ ಕನ್ನಡದಿಂದ ವೈತರಣೀ ವರೆಗಣ ತೀರ ಪ್ರದೇಶವು. 83 'Mysore & Coorg from Inscriptions' (P—137) 84 'New Tamil lexicon' by J. S. Chandler.

85 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ'— ಪುಟ, 443; 98; 67. (ಮಂಗಳೂರಲ್ಲಿ ಗೊಲ್ಲರ ಗಣಪತಿಯ ದೇವಸ್ಥಾನ ಮುಂಗಡೆಯಲ್ಲಿಯ ಕಲ್ಲುಕಂಭದಲ್ಲಿರುವ ಇವರದೊಂದು ಶಾಸನದಲ್ಲಿ ಹೆಡೆಯನ್ನು ಬಿಚ್ಚಿರುವ ನಾಗನ ವಿಗ್ರಹವಿದೆ). 86 'ಚುಟು' ಎಂಬುದರಲ್ಲಿಯ ಮೊದಲನೆಯ ವರ್ಣವು ತಾಲವ್ಯ (platal), ಎರಡನೆಯದು ಮೂರ್ಧನ್ಯ (celebral) ಇವೆರಡೂ ಪರುಷಾಕ್ಷರಗಳು (hard consonants); ಹೀಗಾಗಿ ಈ ಶಬ್ದವು ಉಚ್ಚಾರಕ್ಕೆ ತುಂಬಾ ಕಷ್ಟಪ್ರಾಯವು; 'ತುಳು' ಎಂಬುದು ಇದಕ್ಕಿಂತ ಎಷ್ಟೋ ಸರಳವೂ ಉಚ್ಚಾರ ಸುಲಭವೂ ಆಗಿರುವುದರಿಂದ 'ಚುಟು' ಎಂಬುದರಿಂದ 'ತುಳು' ಎಂಬುದು ಬಂದಿರಬೇಕಲ್ಲದೆ, 'ತುಳು' ಎಂಬುದರಿಂದ 'ಚುಟು' ಎಂಬುದು ಬಂದುದಲ್ಲವೆಂದು ತೋರುತ್ತದೆ.




ಶ್ರೀ ಚಿದಂಬರ ನಿತ್ಯತೃಪ್ತಹಿ ।
ಮಾಚಲಾತ್ಮಜೆಯರಸ ಪಾಪವಿ ।
ಮೋಚನಾಖಿಳ ವಿಶ್ವಕಾರಣ ಸರ್ವಭೂತೇಶ ॥
ಲೋಚನತ್ರಯ ಗಣಪಸುಮನಾ ।
ರಾಚಹರ ಫಣಿಭೂಷಣಾವೃತ ।
ರೋಚಿಮೌಳಿ ಸುರಾಸುರಾರ್ಚಿತ ಪಾಲಿಸುದನೇಶ ॥ ೧ ॥

ಕೆಲರು ತಪದಿಂ ಕೆಲರು ದಾನದಿ ।
ಕೆಲರು ಕೃತತೀರ್ಥಾಟನಗಳಿಂ ।
ಕೆಲರು ಮೋಕ್ಷಾನಂದದಾಯಕ ಭಕ್ತಿಯೋಗದಲಿ ॥
ಗಳಿಸುವರು ತವಪಾದಸುರ ಕುಜ ।
ದೊಲುಮೆಯನು ನಾನೊಂದನರಿಯೆನು ।
ಸಲೆ ಮತಿಯ ದಯೆಗೈದು ಸಂರಕ್ಷಿಸುವುದುದನೇಶ ॥ ೨ ॥

ನೀನೆ ಗುರು ತ್ರೈಲೋಕದೊಡೆಯನು ।
ನೀನೆ ತಂದೆಯು ನೀನೆ ತಾಯಿಯು ।
ನೀನೆ ಬಂಧುವು ನೀನೆ ಸಹಜನು ನೀನೆ ಸಖ ನೀನೆ ॥
ಆನರಸ ನಾನ್ಯೈಯ್ಯನಾತ್ಮಜ ।
ನಾನೆನುತ ಬೊಬ್ಬಿರಿದು ಮೂದಿನ ।
ಕೇನನೆಂಬೆನು ಮಡಿವವರ ದುರ್ಮತಿಯನುದನೇಶ ॥ ೩ ॥

ಒಂದು ರೂಪದಿ ಸೃಷ್ಟಿಸುವೆ ಮೇ ।
ಕೊಂದರಲಿ ಪಾಲಿಸುವೆ ಕಡೆಗಿ ।
ನ್ನೊಂದರಲಿ ಲಯವೆಸಗುತಿಹೆ ಸಚರಾಚರಂಗಳನು ।
ಮಂದಮತಿಗಳು ತಿಳಿಯದಿದ್ದರೆ ।
ತಂದೆ ನೀ ಹೊಣೆಯೇ ಕೃಪಾಂಬುಧಿ ।
ನೊಂದೆನೀ ಸಂಸೃತಿಯೊಳಿನ್ನನು ರಕ್ಷಿಸುದನೇಶ ॥ ೪ ॥

ಸುಗುಣವೊಂದಕ್ಕೊಂದು ದುರ್ಗುಣ ।
ವೊಗೆದು ಕೆಡಿಸಿತು ಜಗವನವರೊಳು ।
ಬುಗಿಲೆನಿಸಿ ಮದನಾಮ ರಾಕ್ಷಸನೆಲ್ಲರನು ಪಿಡಿದು ॥
ಬಗೆಗೆ ಬಂದಂದದಲಿ ಕುಣಿಸುತ ।
ಲೊಗುಮಿಗೆಯ ಹಾನಿಯನು ತಂದ ।
ಪೃಥುಟಿತದ ಬಣ್ಣಿಸಲರಿಯೆನುದನೇಶ ॥ ೫ ॥

ಸ್ಥಾನವೊಂದರೊಳೊಂದು ಪೆಸರನು ।
ತಾನು ಪಡೆದಾ ವಿಪ್ರರೊಳು ಮೇಣ್ ।
ಕ್ಷೋಣಿಪರೊಳೂರುಜರೊಳಂತ್ಯಜವರ್ಗದೊಳು ಸಹಿತ ।
ಜ್ಞಾನಬಲಧನಧಾನ್ಯವೆಂಬಭಿ ।
ಮಾನದಿಂ ಕಡೆ ಗಣಿಸುತೆಲ್ಲವ ।
ಹಾನಿಗೊಳಿಸಿತು ಕಷ್ಟವಿನ್ನೇಗೈವೆನುದನೇಶ ॥ ೬ ॥

ಜ್ಞಾನಲವವಿಲ್ಲದ ಗರುಹಿಸುಯಿ ।
ಧ್ಯಾನದಿಂ ಸನ್ಮಾರ್ಗಕೆಳೆವ ವಿ ।
ಧಾನವಪ್ಪುದು ಮತಿಯುತನ ಪಂಡಿತನೆನಿಸಬಹುದು ॥
ತಾನರಿತುಮರಿಯದ ವಿವೇಕವಿ ।
ಹೀನನಂ ನೆರೆತಿದ್ದುವರೆ ಚತು ।
ರಾನನಂಗಸದಳವು ಮಿಕ್ಕವರೇನರುದನೇಶ ॥ ೭ ॥

ಕಲಿತು ಗುರುವಿಂದೊಂದು ಪಾಲನು ।
ತಿಳಿಯುತೊಂದಂಶವ ಸ್ವಬುದ್ಧಿಯ ।
ಬಲದಿ ಮೇಣೊಂದಿ ನಿಜ ಶಾಸ್ತ್ರಂಗಳನು ಕೇಳುತ್ತ ॥
ಕೆಲವ ಸತ್ಸಹವಾಸದಿಂದಲಿ ।
ಗಳಿಸೆ ಸರ್ವಜ್ಞನಾಗನೆ ।
ಹಲವು ಹೊಳೆ ಕೂಡಲ್ಕೆ ಕಡಲಪ್ಪಂತೆಯುದನೇಶ ॥ ೮ ॥

ಆದ ಕಾರಣ ಸಕಲ ಲೋಕಕೆ ।
ಸಾಧನವು ತಾ ನೀತಿಯೆಂದರಿ ।
ತ್ತೈದೆ ಬರೆದೆನು ಶತಕವಿದನಾನೊಲ್ದು ಪೆರಡಾಲ ॥
ಸಾಧುವತ್ಸಲ ಶಿವನ ಪೆಸರನು ।
ಗೈದುಮುದ್ರೆಯ ಕೃಷ್ಣಶರ್ಮನು ।
ಓದಿ ತಪ್ಪಿರೆ ಬುಧರು ತಿದ್ದುವುದೆಂಬೆನುದನೇಶ ॥ ೯ ॥

ಗಟ್ಟಿ ಹತ್ತಲು ಬಿಟ್ಟುಹೋಗದು ।
ಹುಟ್ಟುಗುಣವೆಂದೆಂಬ ಗಾದೆಯು ।
ಗುಟ್ಟು ಪುಸಿಯಹುದೆಂತು ತಿಳಿಯೆ ಸ್ವಭಾವ ದುರ್ಜನರು ॥
ಕೊಟ್ಟರುಂಟಿತರರ್ಗೆ ಕಲಿಯದೆ ।
ದುಷ್ಟತನ ನೆಲೆಗೊಂಬುದವರೊಳ ।
ನುಷ್ಠಿಪರು ಷಟ್ಕರ್ಮಗಳ ಗೃಹಿಯಂತೆ ಉದನೇಶ ॥ ೧೦ ॥

ಪರರ ಹಾನಿಗೆ ಯಜಪರನ್ಯರು ।
ಕರಸೆ ಯಾಜನ ಗೈವರನ್ಯರ ।
ಸರುವ ನಾಶಕೆ ತಮಗೆ ಮಿಗಿಲಾದವರೊಳಧ್ಯಯನ ।
ವಿರಚಿಪರು ದುರ್ನೀತಿಯರಿಯದಿ ।
ರ್ಪರಿಗೆ ಪೇಳ್ವರು ಯಾಚಿಸದೊಡಂ ।
ಕರದು ಕೊಡುವರು ಕೊಡಲು ಕೊಂಬರು ದುಷ್ಟರುದನೇಶ ॥ ೧೧ ॥

ನದಿಯ ಸೀನೀರ್ಗೈದಿ ಮಿಗೆ ವಾ ।
ರಿಧಿಯ ಸೇರಲು ರುಚಿಯಳಿದು ಮ ।
ತ್ತದೆ ಲವಣವಪ್ಪಂತೆ ಲೋಕದ ಸರ್ವ ಮಾನವರು ॥
ಮದಮುಖರ ಸಹವಾಸ ಗೈಯಲು ।
ಮೊದಲ ಸುಗುಣಂಗಳ ಕಳೆವುದ ।
ಲ್ಲದೆ ಪೆರತು ದುರ್ಗುಣವ ಪಡೆಯದೆ ದೇವ ಉದನೇಶ ॥ ೧೨ ॥

ಕೆಟ್ಟವರು ತಮ್ಮೊಡನೆ ಬೆರೆತರ ।
ನಟ್ಟನಡುವಿಲಿ ಮೋಸದಿಂದಲಿ ।
ಬಿಟ್ಟಪರು ಸಟೆಯಲ್ಲ ಸಹಜವವರ್ಗದೆಂತೆನಲು ॥
ಪೃಷ್ಟದಿಂದೆಳದೊಯ್ದು ಸೂಜಿಯು ।
ಬಟ್ಟೆಯೊಳು ಬಿಡದಿಹುದೆ ದಾರವ ।
ನೆಷ್ಟುಕಾದರು ಬೇಡ ದುರ್ಜನ ಸಂಗವುದನೇಶ ॥ ೧೩ ॥

ತಾನು ಸತ್ತಾದಡೆಯು ಪರರಿಗೆ ।
ಹಾನಿಯೊದಗಿಸಿದಪರು ದುಷ್ಟರು ।
ಪ್ರಾಣಿಗಳು ಕುಡಿಯದೊಲು ನಿರ್ಮಲ ಜಲವ ಮಂಡೂಕ ॥
ತಾನಳಿದು ದುರ್ಗಂಧವೆಸಗುವು ।
ದೇನನೆಂಬೆನು ಸ್ವಪ್ರಯೋಜನ ।
ಹೀನವಾದರು ಖಳರು ಕೇಡನೆ ಗೈವರುದನೇಶ ॥ ೧೪ ॥

ಅಜನು ದುರುಳರ ಪುಲಿಯ ಕಾಯ್ದಿಂ ।
ದಜಗರನ ವಿಷದಿಂದ ಮೇಣ ।
ಭುಜಪುತಾಶನರವದಿಸೃಜಿಸಿರ ಬೇಹುದೆನಬಹುದು ॥
ನಿಜವಿದಲ್ಲದೊಡೇಕೆ ದುಷ್ಟಗೆ ।
ತ್ರಿಜಗವಂಜುತ್ತಿಹುದು ಸಂತತ ।
ಸುಜನಸಂಗವನಿತ್ತು ರಕ್ಷಿಪುದೆನ್ನನುದನೇಶ ॥ ೧೫ ॥

ಪರರು ಕಷ್ಟದಿ ನೆರವೆಸಗೆ ತಾ ।
ವರಿಯರೈ ದುರ್ಜನರು ಕೇಡನೆ ।
ವಿರಚಿಸುವರನವರತ ಪಡಿಯಾಗಿಳೆಯೊಳೆಂತೆನಲು ॥

ಎರೆಯೆಪಾಲಂಕಾಳಸರ್ಪಗೆ ।
ಗರಳವನು ಹೊರಸೂಸದಿರ್ಪುದೆ ।
ಸರುವಥಾ ಕುಡಬೇಡ ದುಸ್ಸಹವಾಸ ಉದನೇಶ ॥ ೧೬ ॥

ಕ್ಷೀರಸಾಗರಮಧ್ಯದಲಿ ಪ ।
ನ್ನೀರನೆರೆಯುತೆ ಬೆಳೆಸೆ ಬೇವನು ।
ಸಾರವೊಂದೇ ಕೃಪೆಯುಲ್ಲದೆ ಬೇರೆ ರುಚಿಯುಂಟೇ ॥
ಆರು ಪೇಳಿದರೇನು ನೀತಿಯ ॥
ಸೇರಗೊಡನ್ನೈ ದುರುಳ ನರೆಯೊಳು ।
ನೂರು ವರುಷವು ಮಳೆಗರೆಯೆ ಕರಗುವುದೆ ಉದನೇಶ ॥ ೧೭ ॥

ಸದ್ಯದಲಿ ಬಿಡಬೇಹುದೋರ್ವನ ।
ವಿದ್ಯೆಯಿಂದಲಿ ಭೂಷಿಸಿರುವೊಡ ।
ಮುದ್ಯಮವು ತಾ ದುಷ್ಟವಾದೊಡೆ ನರನನೆಂತೆನಲು ॥
ಹೃದ್ಯಮಣಿ ಸಂಯುಕ್ತವಾಗಿರೆ ।
ಪದ್ಯೆಯಲಿ ಫಣಿಬಂದಡೊಳ್ಳಿತೆ ।
ಸಾಧ್ಯವಾಗದು ಕಾರ್ಯವಲ್ಲೈ ಕಡೆಯೊಳುದನೇಶ ॥ ೧೮ ॥

ಆಶೆಯಿರೆ ದೌರ್ಗುಣ್ಯದಿಂದೇಂ ।
ಪೈಶುನತೆಯಿರೆ ಪಾತಕದೊಳೇ ।
ನಾಶುಚಿತ್ವವು ಮನತಿರಲು ತೀರ್ಥಗಳಿಂದೇನು ॥
ಭೂಷಣಗಳಿಂದೇಂ ಮಹಿಮೆಯಿರೆ ।
ರಾಶಿಧನದಿಂದೇನು ವಿದ್ಯಾ ।
ಭ್ಯಾಸಮಿರೆ ತಪದಿಂದಲೇನಿರೆ ಸತ್ಯಮುದನೇಶ ॥ ೧೯ ॥

ಪ್ರೀತಿಪರಗುಣದಲ್ಲಿ ಸುಜನ ।
ವ್ರಾತಸಂಗದಿ ಕಾಂಕ್ಷೆ ಮೇಣುವಿ ।
ನೀತತೆಯು ಗುರುವೊಳ್ ವ್ಯಸನ ವಿದ್ಯೆಯಲಿ ರತಿ ತನ್ನ ॥
ಕಾಂತೆಯೊಳು ಲೋಕಾಪವಾದದಿ ।
ಭೀತಿ ಶಿವನೊಳು ಭಕ್ತಿದೊರಕೊಂ ।
ಡಾತನಿಂಗೆರಗುವೆನು ತ್ರಿಜಗದ್ವಂದ್ಯಗುದನೇಶ ॥ ೨೦ ॥

ಸದಸಿನಲಿ ವಾಕ್ಪಟುತೆ ತನ್ನ ।
ಭ್ಯುದಯದಲಿ ಕ್ಷಮೆ ಮೇಣು ತನಗಡ ।
ಸಿದ ಮಹಾಪತ್ತಿನಲಿ ಧೈರ್ಯವು ಜಸದೊಳಭಿರುಚಿಯು ॥
ಅಧಿಕ ವಿಕ್ರಮ ಸಮರದೊಳುವೇ ॥
ದದಲಿ ವ್ಯಸನಂ ಯೋಚಿಸಲು ಸದು ।
ಹೃದಯರಹ ಮಹಿಮರ್ಗೆ ಸಹಜತೆಯುಲ್ತೆ ಉದನೇಶ ॥ ೨೧ ॥

ಕಾದ ಕಬ್ಬಿಣದಲ್ಲಿ ಬಿದ್ದರೆ ।
ಪೋದುಪುದು ಪೆಸರುಂ ಜಲಕೆ ಕು ।
ದ್ಭೋದಕವು ಶುಕ್ತಿಯೊಳುರುಳೆ ಮುತ್ತಪ್ಪುದಾ ನೀರು ॥
ನೈದಿಲೆಲೆಯೊಳು ಬೀಳೆ ಸಂಶಯ ।
ವಾದಪುದು ಮುತ್ತೆಂದು ಸಂಸ ।
ರ್ಗಾಧಮೋತ್ತಮ ಮಧ್ಯಮದ ಫಲವಿಂತಿದುದನೇಶ ॥ ೨೨ ॥

ಪೊಡವಿಯೊಳಗೆಲ್ಲಾ ಪ್ರವೀಣರು ।
ಬಿಡದೆ ನೀಡುಂ ನೋಡಿ ಕೆಲವನು ।
ಕಡೆಗಣಿಸುವರು ಪಳದೆನುತ ಮೇಣ್ ಪೊಸತೆನುತ ಕೆಲಪ ॥
ಪಡೆವಪರುಮನವೊಲ್ದ ವೋಲೊಂ ।
ದೊಡಮೆಯುಂ ಸುವಿವೇಕಶೂನ್ಯಗೆ ।
ಕೊಡುವ ಕೊಂಬೆಡೆ ಪೆರರ ನುಡಿಯೆ ಪ್ರಮಾಣವುದನೇಶ ॥ ೨೩ ॥

ಬಾಗಿದಪುವೆಂದುಂ ದ್ರುಮಂಗಳು ।
ತೂಗುತಿಹ ಪೂಫಣ್ಗೊನೆಗಳಿಂ ।
ಮೇಘವುಂ ಪೊಸನೀರ್ಗಳೇಳ್ಗೆಯಿನಿಹುದು ತಗ್ಗಾಗಿ ॥
ಕೈಗೆವರಲು ಸಮೃದ್ಧಿ ಸುಜನರು ।
ಬೀಗದಿರ್ಪರು ಗರ್ವದಿಂದಲಿ ।
ಹೀಗಿದೈ ಲೋಕೋಪಕರ್ತರ ನಡತೆಯುದನೇಶ ॥ ೨೪ ॥

ಅಟನಕಸದಳವಪ್ಪ ಹಳುವದ ।
ಕಠಿಣ ಮಾರ್ಗಸ್ಥಳದ ಬೆಟ್ಟದಿ ।
ಯಟವಿಚರರೊಡನಿರ್ಪುದೊಳ್ಳಿತು ನೆರೆ ವಿಚಾರಿಸಲು ॥
ಘಟಿಸಲುಂ ಸುರಪನಿವಾಸದಿ ।
ಚಟುಲ ದೃಶೆಯರ ಕೂಟ ಮೂರ್ಖರ ।
ಕಟಕದಾ ಸಂಗತಿಯು ಬೇಡೆನಿತಾದರುದನೇಶ ॥ ೨೫ ॥

ಸುರತಟಿನಿಯಘ ಸಂತತಿಯ ಚಂ ।
ದಿರನು ಬೇಗೆಯ ಬಡತನವಸುರ ।
ತರುನಿವಾರಿಪುದಾರಯಲ್ಕೀ ಮೂರನುಂ ಬಿಡದೇ ।
ಪರಿಹರಿಸುವುದು ಸಾಧುಸಂಗತಿ ।
ಯರಿತು ನೋಡಲು ಸದ್ಗುಣಾನ್ವಿತ ।
ನರರ ದೊರೆ ಯಾರಮನು ಮೂಜಗದೊಳಗೆ ಉದನೇಶ ॥ ೨೬ ॥

ಆವನೊಲಿಸುವನೊಳ್ನಡತೆಯಿಂ ।
ದೋವಿದಯ್ಯನನವನೆ ಪುತ್ರನು ।
ಆವಳೆರೆಯಗೆ ಹಿತವ ನಿಚ್ಛಿಪಳವಳೆ ಪೆಂಡತಿಯು ॥
ಆವನೈ ಸುಖದುಃಖದೊಳಗೊಂ ।
ದೇ ವಿಧದಿ ನೆರವಹನವನೆ ಸಖ ।
ಮೂವರುಂ ಸುಕೃತಿಗಳಿಗಲ್ಲದೆ ದೊರೆಯರುದನೇಶ ॥ ೨೭ ॥

ಮೊದಲು ಗುರುವಾಗಿರ್ದು ಕಿರಿದ ।
ಪ್ಪುದು ಕ್ರಮದಿ ದುರ್ಜನರ ಕೆಳೆ ಸದು ।
ಹೃದಯರೊಡನಹ ಮೈತ್ರಿಯಾರಂಭದಲಿ ಲಘುವಿರ್ದು ॥
ಬಿದಿಗೆಯಾ ಚಂದಿರನವೊಲು ಬೆಳೆ ।
ವುದು ದಿನದ ಪೂರ್ವಾರ್ಧದಪರಾ ।
ರ್ಧದ ನೆಳಲ್ಗಳಿವಕೆ ದೃಷ್ಟಾಂತಂಗಳುದನೇಶ ॥ ೨೮ ॥

ಪ್ರಕಟಿಪನು ಗುಣಗಳನು ಗುಪಿತವ ।
ಯುಕುತಿಯಿಂದಡಗಿಪನು ಪಾಪ
ಪ್ರಕರವನು ತೊಲಗಿಪನು ಹಿತಕಾರ್ಯದಲಿ ಯೋಜಿಪನು ।
ಸಖನಿಗಾದ ವಿಪತ್ತಿನಲಿ ಬಿಡ ।
ನಕುಟಿಲಾಂತಃಕರಣ ನಲಿವನು ।
ಸುಖವೊದಗೆ ಸನ್ಮಿತ್ರನೆಂಬರು ಸಂತರುದನೇಶ ॥ ೨೯ ॥

ಪಾಲು ತನ್ನೊಡನೆರೆದ ನೀರನು ।
ಲೀಲೆಯಿಂ ಕೂಡಿತ್ತು ಬಳಿಕಾ ।
ಪಾಲಿಗಡಸಿದ ಕಷ್ಟಕಗ್ನಿಯೊಳಿರದೆ ಜಲ ಪೋಗೆ ॥
ತಾಳೆ ಚಿಂತೆಯ ಕ್ಷೀರವುರಿಯೊಳೆ ।
ಬೀಳ ಪೋಗಲು ನೀರನಿತ್ತರೆ ।
ಬಾಳುವುದು ಸಜ್ಜನರ ಕೆಳೆಯಿಂತಪ್ಪುದುದನೇಶ ॥ ೩೦ ॥

ಕರದಿ ಕನ್ನಡಿಯಿರಲು ನೀರಿನ ।
ನೆರಳ ನೋಡುವುದೇಕೆ ಪಾಲೋ ।
ಗರವನುಂಡ ಬಳಿಕ್ಕಲುಂಬರೆ ಜಗದಿ ಗುಣಯುತರು ॥
ಅರಗಿಳಿಯ ನುಡಿ ಕೇಳಿ ಕಾಗೆಯ ।
ಕರೆಗೆ ಕಿವಿಗೊಟ್ಟಪರೆ ಸಖರಿಂ ।
ಹಿರಿದೆನಿಸಿಪ ವಸ್ತುಗಳ ಹುಡುಕುವುದುಂಟೆ ಉದನೇಶ ॥ ೩೧ ॥

ಉಣದ ಧನವಿದ್ದೇನು ಸತಿಯರೌ ।
ವನವಿಹೀನಂಗೇಕೆ ಬೆಳೆತಾ ।
ನೊಣಗೆ ಬಾರದೆ ಬಂದ ಮಳೆಯೇಕಾಪದಂಗಳಲಿ ॥
ಮಣಿದು ನೋಡದ ಬಂಧು ಬಳಗಗ ।
ಳೆನಿತಿರಲು ಫಲವೇನು ಸಮಯಕೆ ।
ತೃಣವೆ ದೊರೆಯಲು ಗಿರಿಸಮಾನವೆನಿಪ್ಪುದುದನೇಶ ॥ ೩೨ ॥

ಗೆಳೆಯನೆಂಬುತ್ತಮದ ಚಿನ್ನವ ।
ಗಳಿಪುದೆಂತದಕಿರ್ಪ ಬಣ್ಣದ ।
ಹೊಲಬನರಿಯಲಸಾಧ್ಯವೆಂದರೆ ಯುಕ್ತಿಯೊಂದಿಹುದು ॥
ಸಲೆಪರೋಕ್ಷವೆನಿಪ್ಪ ನಿಕಷೋ ।
ಪಲದಿ ಘರ್ಷಣಗೊಳಿಸೆ ತಿಳಿವುದು ।
ಬೆಲೆ ಬಳಿಕ ಕೊಂಬುದಕೆ ಸಂಶಯವಿಲ್ಲ ಉದನೇಶ ೩೩ ।

ತೊಡಗರೈ ಕಾರ್ಯಕ್ಕೆ ನೀಚರು ।
ನಡುವೆ ಬಹುದೆಡರೆಂಬ ಭಯದಿಂ ।
ಬಿಡುವರಲ್ಲಿಯೆ ವಿಘ್ನವಾದರೆ ಮಧ್ಯಮರು ಮೇಣು ।
ಅಡಿಗಡಿಗೆ ವಿಘ್ನಂಗಳಡಸಲು ।
ಬಿಡದೆ ಸಾಧಿಪರುತ್ತಮರು ಬಲೆ ।
ಗಡಿಯೆ ಯತ್ನವ ಜೀಡ ಬಿಡುವುದೆ ಧರೆಯೊಳುದನೇಶ ॥ ೩೪ ॥

ತುಷ್ಟಿವಡದರೆ ಶರಧಿಮಥನದಿ ।
ಪುಟ್ಟಲನುಪಮರತ್ನಗಳು ಮೇ ।
ಣಟ್ಟಿ ಸುಡುತಿಹ ಕಾಳಕೂಟಕ್ಕಂಜಿದರೆ ಸುರರು
ಕಟ್ಟಕಡೆಗಮೃತವನು ಪಡೆಯುದೆ ।
ಬಿಟ್ಟರೇ ನಿಶ್ಚಿತದ ಫಲವನು ।
ಮುಟ್ಟದೆಂದು ಬಿಡರು ಯತ್ನವಧೀರರುದನೇಶ ೩೫

ಬರಿ ನೆಲವೆ ಹಾಸುಗೆಯು ಕೆಲವೆಡೆ ।
ಸುರುಚಿರದ ಪರ್ಯಂಕ ಕೆಲವೆಡೆ ।
ಸರಸ ಶಾಲ್ಯೋದನವು ಕೆಲವೆಡೆ ಶಾಕಭೋಜನವು ॥
ಹರಿದ ಕಂತೆಯುಡಲ್ಕೆ ದಿವ್ಯಾಂ ।
ಬರ ಕೆಲವು ಸಮಯದಲಿ ಗಣಿಪನೆ ।
ಸರುವಥಾ ಸುಖದುಃಖಗಳ ಕಾರ್ಯಾರ್ಥಿಯುದನೇಶ ॥ ೩೬ ॥

ಬೆರಳ ಸಿಡಿಯಲಿ ನಯವಿದರು ಮೇಣ್ ।
ಜರೆಯಲೈ ಮನಬಂದ ಪೋಲೈ ।
ಸಿರಿ ಬರಲಿ ಬಾರದಿರೆ ಪೋಗಲಿ ಚಿಂತೆಯೇನದಕೆ ॥
ಮರಣವಿಂದಲ್ಲದಡೆ ಸಾವಿರ ।
ವರುಷಕೈದಲಿ ನ್ಯಾಯಪಥದಿಂ ।
ಚರಣವನು ತೊಲಗಿಸನು ಧೀರನು ಸತತಮುದನೇಶ ॥ ೩೭ ।

ಮನುಜರಿಗೆ ನಿಜದೇಹದೊಳಗಿ ।
ದ್ದನವರತ ಪೀಡಿಸುವ ರಿಪು ತಾ ।
ನೆನಲು ಬಹುದಾಲಸ್ಯವನು ನೀಡುಂ ವಿಚಾರಿಸಲು ॥
ಕೊನೆಗೆ ಸಂತೋಷವನು ಪಸರಿಸಿ ।
ತನಗೆ ನೆರವಹ ಬಂಧುವುದ್ಯಮ ।
ವೆನಬಹುದು ಸೂರಿಗಳ ಮತವಿದು ಜಗದೊಳುದನೇಶ ॥ ೩೮ ॥

ಏಗಳುಂ ಸಿರಿವಂತನಹನು ।
ದ್ಯೋಗಿಯುಪ್ಪುತ್ತಮನು ವಿಧಿಮನ ।
ವಾಗಿ ಕೊಡುಗೆಂದೆನುತ ಧಮ ಬಡವಪ್ಪನದರಿಂದ ॥
ನೀಗಿ ದೈವವ ಪುರುಷಯತ್ನವ ।
ಸಾಗಿಸುವುದಂತಾದೊಡಂ ಫಲ ।
ವಾಗದಿರೆ ಬಳಿಕೇನು ದೋಷವು ಬಾರದುದನೇಶ ॥ ೩೯

ಬಾಲವಾಡಿ ಪೊಡೆಯ ತೋರ್ಪುದು
ಕಾಲಮೇಲಡಗೆಡೆದು ಪೇರಡಿ ।
ಪಾಲಕನು ಕೊಡಲನ್ನವನು ಮೇಣಾಗಜಶ್ರೇಷ್ಠ ॥
ಮೇಲೆ ನೋಡುತ ಧೀರತನದಿಂ ।
ದಾಲಿಸುತ ಪ್ರಿಯವಚನಗಳ ಸ ।
ಲ್ಲೀಲೆಯಿಂದುಂಡಪುದು ಧೀರರ ಗುಣವಿದುದನೇಶ ೪೦

ಧೈರ್ಯಪೂರ್ಣತ ರಿನಿರಲನ್ನಿ ।
ವಾರ್ಯದುಃಖ ಸಮೂಹದಲಿ ತಾ ।
ತ್ಸರ್ಯವಮಂ ಬಿಡುವನೆ ಬೆಧರಿನಿಜ ಧೈರ್ಯವೃತ್ತಿಯನು ॥
ಪರ್ಯವಸಿಪುದೆ ವಹ್ನಿ ಶಿಖಿಕೆಳ ।
ಗುಯ್ಯೆ ಕೀಳ್ಮೊಗವಾಗಿ ಧೀರರ ।
ಚರ್ಯೆ ಬದಲಾಗದು ಜರಿಯಲುಂ ಗಗನಲುದನೇಶ ॥ ೪೧ ॥

ಒಣಗಿದೆಲು ಪಸಿವಡಗಲರಿಯದೊ ।
ಡನಿತರಿಂ ನಾಯ್ ಮುದವ ಪಡೆವುದು ।
ತಿನಲು ನರಿ ಮಡಿಲಿಂಗೆ ಬರಲುಂ ಬಿಟ್ಟು ಮೃಗಪತಿಯು ॥
ತಣಿಯುರಾನೆಯ ಪಿಡಿವುದದರಿಂ ।
ದೆನಿತು ಕಷ್ಟಂ ಬಂದೊಡೇನೈ ।
ಜಿನವು ಸತ್ವಕೆ ತಕ್ಕ ಫಲದಿಂದೊಲ್ಗುಮುದನೇಶ ॥ ೪೨ ॥

ಆರು ಹುಟ್ಟಿದರೇನು ಈ ಸಂ ।
ಸಾರ ಬಹುಲಾಪಾಯದೊಳು ಮ ।
ತ್ತಾರು ಸತ್ತಡದೇನು ಸಂತಸವೇತಕಳಲೇಕೆ? ॥
ಆರ ಹುಟ್ಟಿನೊಳಾಯ್ತು ವಂಶೋ ।
ದ್ಧಾರವಾ ನರವರನೆ ಹುಟ್ಟಿದ ।
ನಾರಯಲ್ಕಿದು ಸೂರಿಗಳ ಮತವಪ್ಪುದುದನೇಶ ॥ ೪೩ ॥

ಪೌರುಷ ಗೈಯ್ಯದೆಯೆ ತನ್ನನು ।
ಸೇರಿದಾ ಸಂಪತ್ತಿನಿಂದೇಂ ।
ಧೀರರದರಿಂ ತೃಪ್ತಿವಡೆಯರು ನೆರೆ ವಿಚಾರಿಸಲು ॥
ಚಾರು ತೃಣ ದೈವೇಚ್ಛೆಯಿಂ ಮುಂ ।
ಗಾರ ಮಳೆಗಂಕುರಿಸೆ ತಿಂದು ನಿ ।
ವಾರಿಪುದು ಮುದಿಯೆತ್ತು ಪುರುಷತೆಯೇಕೆವುದನೇಶ ॥ ೪೪ ॥

ಇರಲು ಗುರು ಮೊದಲಾದ ಗೃಹಮು ।
ಖ್ಯರು ವಿರೋಧಿಸದವರೊಡನೆ ಪಗ ।
ಲಿರುಳರಸರನೆ ಸಾಧಿಸುತ ಪರ್ವಂಗಳಲಿ ಸತತ ॥
ಶಿರವದೊಂದುಳಿದಾ ಪರಾಕ್ರಮಿ ।
ಗರುವ ಸಿಂಹಿಕೆಯಣುಗ ನುಂಗುವ ।
ಕಿರುಕುಳರಗಣಿಸಿದನೆ ವಿಕ್ರಮಗುಣವಿದುದನೇಶ ॥ ೪೫ ॥

ವೀರನಹುದಿರಿಯಲ್ಕೆ ಬಲ್ಲರೆ ।
ಚಾರು ಯುಕ್ತಿಯನರಿಯ ಬಲ್ಲರೆ ।
ಧಾರುಣೀಶಗೆ ಮಂತ್ರಿಯಹುದಾರೇನ ಪೇಳಿದರು ॥
ಸೈರಿಪರೆ ಪ್ರಭುವಹುದು ಕೋಪವ ।
ತೂರ ಬಲ್ಲರೆ ಯೋಗಿಯಹುದು ವಿ ।
ಚಾರಿಸದೆ ತೆರಬಲ್ಲರೇ ಹೊಣೆಯಪ್ಪುದು ದನೇಶ ॥ ೪೬ ॥

ಚಾರು ಮುಕ್ತಾಹಾರ ಸುಮುಕೇ ।
ಯೂರಗಂಧವಿಲೇಪನಲಂ ।
ಕಾರವಲ್ಲವು ಪುರುಷನಿಗೆ ನೀಡುಂ ವಿಚಾರಿಸಲು ॥
ಭಾರತಿಯು ಸಂಸ್ಕೃತೆಯುದೋರ್ವಳ ।
ಧಾರ ವರಿಸುವಳವನೆ ಚೆಲುವನು ।

ಭೂರಿಭೂಷಣನಿಕರದಿಂ ಫಲವೇನುಉದನೇಶ ॥ ೪೭

ವಿಧಿ ಮಹಾಕೋಪಂದಳೆಯೆ ಹಂ ।
ಸದ ನಿಲಯುವಹ ಕಮಲವನವನು ।
ಸದೆವನಲ್ಲದೆ ಸರ್ವಥಾ ಪಾಲ್ನೀರ ಬೆರಕೆಯನು ॥
ಪದೆದು ಮೊಸರಾಗಿ ಪವಿದಗ್ಧತೆ ।
ಯೊದವ ಕುಂದಿಸಲರಿಯನೆಂದೆನೆ ।
ವಿದಿತ ವೈದಗ್ಧ್ಯದ ಮಹಾತ್ಮೆಯದೆಂತುದನೇಶ ॥ ೪೮

ಗೋಚರಿಸದದು ತಸ್ಕರರ್ಗೆ ಸ ।
ದಾಚಲಾನಂದವನು ಕೊಡುವುದು ।
ಯಾಚಕರಿಗೀಯಲ್ಕೆ ಮೇಣೊಂದಕ್ಕೆ ನೂರಾಗಿ ॥
ತಾ ಚಿರಸ್ಥಾಯ್ಯೆನಿಸಿ ಬೆಳೆವುದು ।
ಯೋಚಿಸಲು ಲಯವಿಲ್ಲದುದು ಸಂ ।
ಕೋಚವೇತಕೆ ವಿದ್ಯೆಯೆಂಬಾ ಧನವೆಉದನೇಶ ॥ ೪೯ ॥

ಪರಿಹರಿಸುವುದು ಜಡವ ನುಡಿಯಲಿ ।
ಬೆರೆಯಿಪುದು ಚಿತ್ಯವನು ಪಾಪವ ।
ತೊರೆಯಿಪುದು ಚಿತ್ತವನು ಬೆಳಗಿಸಿದಪುದು ಕೀರ್ತಿಯನು ॥
ಸರುವ ದಿಗ್ಭಿವ ರಂಗಳಲಿ ವಿ ।
ಸ್ತರಿಸಿದಪುದಭಿಮಾನವೀವುದು
ನರರಿಗೇಂಗೈಯ್ಯದು ವಿದ್ಯೆಯು ಧರೆಯೊಳುದನೇಶ ೫೦

ವಿನಯುವಪುದು ವಿದ್ಯೆಯಿಂದಲಿ ।
ಘನ ತರದ ಪಾತ್ರತ್ವ ವದರಿಂ ।
ಧನವು ದೊರೆಕೊಂಡಪುದು ಪಾತ್ರತೆಯಿಂದ ತದ್ಧನದಿ ॥
ವಿನುತಧರ್ಮೋತ್ಪತ್ತಿಯಾದಪು ।
ದನವರತ ಸುಖವಲ್ತೆ ಧರ್ಮದಿ ।
ಜನಿಸಿದುದಕಿದೆ ಬೇಹುದೆಂಬರು ಹಿರಿಯರುದನೇಶ ॥ ೫೧ ॥

ಜ್ವಾಲೆ ಶೀತಲವಹುದು ಶರನಿಧಿ ।
ಕಾಲಹುದು ಕನಕಾದ್ರಿ ದಿನ್ನೆಯ ।
ಪೋಲಹುದು ಸದ್ಯದಲಿ ಸಿಂಹವದಹುದು ಕೋಳ್ಗಿಗವು ॥
ವ್ಯಾಲವಪ್ಪುದು ಮಾಲ್ಯಗುಣಯುತ ।
ಕಾಲಕೂಟವು ಸುಧೆಯಹುದು ಸ ।
ಚ್ಛೀಲವಂತಗೆ ಲೋಕವೇ ಸಹಕರಿಪುದುದನೇಶ ॥ ೫೨ ॥

ತಿಳಿದ ವಿದ್ವಜ್ಜನರು ಮತ್ಸರ ।
ದಳಿದು ನುಡಿಯರು ನಲ್ನುಡಿಯ ಮೇ ।
ಣಿಳಿಯ ಧನಿಕರು ಗರ್ವಪೀಡಿತರಾಗಿ ಮಿಕ್ಕವರ ।
ಸಲೆ ವಿಚಾರಿಸಲರಿಯರುಳಿದವ ।
ರಳುಕುವರು ಪಾಂಡಿತ್ಯವಿಲ್ಲದೆ ।
ಚೆಲುವಿನೊಳ್ನುಡಿಯಿಂತು ಕುಂದಿತು ನರರೊಳುದನೇಶ ॥ ೫೩ ॥

ಆವನೊಬ್ಬನೊಳಿರ್ಪ ಗುಣವೊಂ ।
ದಾವಗಂ ತಾನಾಗಿ ಹೊಮ್ಮುವು ।
ದಾವಪರಿಯಿಂದಾದೊಡದರನು ತಡೆಯಲಳವಲ್ಲ ।
ಭೂವಲಯದೊಳು ಶುದ್ಧಮೃಗಮದ ।
ಕಾವಮುರಿಗೈದರು ಸುವಾಸನೆ ।
ತೀವದಿಹುದೇ ಬಂದು ನೆರೆದವರೆಡೆಯೊಳುದನೇಶ ॥ ೫೪ ॥

ಸಾಣೆಗಿಕ್ಕಿದು ರತ್ನಮದವಳಿ ।
ದಾನೆಯುದ್ಧದಿ ಬಳಲಿ ಗೆಲ್ದ ಪ್ರ ।
ವೀಣಭಟ ಶರದದಲಿ ಪುಳಿನವ ತೋರ್ಪ ಪೆರ್ಬೊನಳಿಯು ॥
ದಾನದಿಂ ಬಡವಾದವಂ ಕಲೆ ।
ತಾನುಳಿದ ಚಂದ್ರಮರತಿಶ್ರಮ ।
ಕಾಣಿಪಂಗನೆಯಿವರ ಬಡತನ ಚಂದವುದನೇಶ ॥ ೫೫ ॥

---



ಮಂಗಳೂರು ಕೆನರಾ ಛಾಪಖಾನೆಯಲ್ಲಿ ಮುದ್ರಿಸಲ್ಪಟ್ಟಿತು.

# ಯಕ್ಷಗಾನ ಪ್ರಬಂಧನಿಯಮ

(ಲೇಖಕ:—ಶ್ರೀ। ಕೆ. ಪಿ. ವೆಂಕಪ್ಪಶೆಟ್ಟಿ, ಕವಿಭೂಷಣ.)

ಯಕ್ಷಗಾನ ನಾಟಕಕ್ಕೆ ಇದೇ ಸೂತ್ರರೂಪವಾದ ಒಂದು ಕೈಪಿಡಿಯು. ಈ ಗ್ರಂಥವನ್ನು ರಾಮಾಯಣದ ಕಥೆಗಳನ್ನು ಯಕ್ಷಗಾನಕ್ಕೆ ಪರಿವರ್ತಿಸಿದ ಯಕ್ಷಗಾನ ವಾಲ್ಮೀಕಿಯಾದ ಪಾರ್ಥಿ ಸುಬ್ಬನೇ ವಿರಚಿಸಿದ ಗ್ರಂಥಕರ್ತನು. ಈತನ ಜನ್ಮಭೂಮಿಯು ದಕ್ಷಿಣ ಕನ್ನಡದ ಕಾಸರಗೋಡು ತಾಲೂಕಿಗೆ ಸೇರಿದ ಕುಂಬಳೆಯ ಕಣಿಪುರವು (ಕುಂಬಳೆಯಲ್ಲಿ S. I. R. ರೈಲ್ವೆ ಕಂಪೆನಿಯ ಸ್ಟೇಶನು ಈಗ ಇರುವುದು). ಪಾರ್ಥಿ ಸುಬ್ಬನು ಯಾವಾಗ್ಗೆ ಹುಟ್ಟಿದನು? ಈತನ ಚಾರಿತ್ರೆಗಳೇನು? ಎಂಬದನ್ನು ವಿಶದವಾಗಿ ತಿಳಿಯುವರೆ ಆಧಾರವಾದ ಪುಸ್ತಕಗಳಿಲ್ಲ. ಮತ್ತು ಈತನ ಕೃತಿಗಳಲ್ಲಿಯೂ ಬರೆದಂತೆ ಕಂಡುಬರುವುದಿಲ್ಲ. ಈತನ ವಂಶಜರೆಂಬವರು ಈಗಲೂ ಇದ್ದಿರುವರು. ಈತನು ನಿರಕ್ಷರಕುಕ್ಷಿಯಾಗಿದ್ದನೆಂದೂ, ಈತನ ಹೆಸರು ಸುಬ್ಬನೆಂದೂ, ಇವನ ತಾಯಿಯ ಹೆಸರು ಪಾರ್ವತಿಯೆಂದೂ, ಈತನ ಪ್ರಬಂಧಗಳನ್ನೆಲ್ಲಾ ಇವನು ಹೇಳಿದಂತೆ ಈತನ ತಾಯಿಯು ಬರೆದಳೆಂದೂ ಪ್ರಸಿದ್ಧಿ ಇದ್ದಿರುವುದು. ಪಾರ್ವತಿ ಎಂಬ ಹೆಸರನ್ನು ಗ್ರಾಮ್ಯಭಾಷೆಯಲ್ಲಿ ಪಾರ್ಥಿ ಎಂದು ಹೇಳುವುದುಂಟು. ಪಾರ್ಥಿಯ ಮಗ ಸುಬ್ಬನು ಪಾರ್ಥಿ ಸುಬ್ಬನಾಗಿರಬಹುದು. ಅಥವಾ ಈತನು ಪದಾರ್ಥಿ (ಮಾರರ್) ಜಾತಿಗೆ ಸೇರಿದವನೆಂದು ಹೇಳುವರು. ಪದಾರ್ಥಿ ಅಥವಾ ಪದ್ಯಾರ್ಥಿ ಸುಬ್ಬನನ್ನು ಜನರು ಪಾರ್ಥಿ ಸುಬ್ಬನೆಂದು ಕರೆದಿರಲೂಬಹುದು. ಇವೆಲ್ಲಾ ಊಹನೆಗಳಿಗಿಂತ ಪಾರ್ತಿಯ ಮಗನಾದ ಸುಬ್ಬನೇ ಪಾರ್ಥಿ ಸುಬ್ಬನಾಗಿದ್ದನೆಂದು ಹೇಳುವುದು ಸುಗಮ ಹೇಗೂ ಇರಲಿ; ಆ ಕಾಲದಲ್ಲಿ ಇವನು ದೇವಳದ ಸೇವಾವೃತ್ತಿಯನ್ನು ಮಾಡುತಿದ್ದ ಪದಾರ್ಥಿ, ಅಥವಾ ಮಾಲೆಗಾರ ಇವೆರಡರಲ್ಲೊಂದು ಜಾತಿಗೆ ಸೇರಿದವನಾಗಿದ್ದನೆಂದು ನಿರ್ಧರಿಸಿ ಹೇಳಬಹುದು. ಅಲ್ಲದೆ ಈತನು ಕುಂಬಳೆಯ ಕಣಿಪುರದವನೆಂಬದರಲ್ಲಿ ನಿರ್ವಿವಾದ. ಇವನ ಜನ್ಮಭೂಮಿಯಾದ ಕಣಿಪುರವು ಯಕ್ಷಗಾನ ವಿದ್ಯೆಗೆ ಮೂಲಮನೆಯೆಂದು ಈಗಲೂ ಕೀರ್ತಿ ಇರುವುದು. ಮಾತ್ರವಲ್ಲಾ; ಈತನು ಬರೆದ ಸಭಾಲಕ್ಷಣದ ಪ್ರಾರಂಭದ ಪದದಲ್ಲಿಯೇ

ರಾಗ ॥ ನಾಟಿ ॥ ಝಂಪೆ ॥

ಮುದದಿಂದ, ನಿನ್ನ ಕೊಂಡಾಡುವೆನು, ಅನವರತ, ಮದವೂರ, ವಿಘ್ನೇಶ ದೇವ ಜಗದೀಶಾ ॥

ಎಂಬ ಪದ್ಯದಲ್ಲಿ ಮದವೂರಿನ ದೇವಸ್ಥಾನದ ಮಹಾ ಗಣಪತಿದೇವರನ್ನು ಪ್ರಾರ್ಥಿಸಿರುವನು. ಈ ಗಣಪತಿ ದೇವಾಲಯವು ಆ ಕಾಲದಲ್ಲಿ ಕುಂಬಳೆ ಪ್ರಾಂತ್ಯಕ್ಕೆ ರಾಜರಾಗಿದ್ದ ಮಾಯಿಪ್ಪಾಡಿ ಅರಮನೆಯ ರಾಜರ ದೇವಾಲಯವಾಗಿದ್ದರಿಂದ ಗ್ರಂಥಕರ್ತನು ಪ್ರಾರಂಭದಲ್ಲಿ ಶಾಸ್ತ್ರಪದ್ಧತಿಗೂ, ಜನ್ಮಭೂಮಿಗೂ, ರಾಜಭಕ್ತಿಗೂ ಸಮನ್ವಯವಾಗಿ ಈ ದೇವರನ್ನು ಕೊಂಡಾಡಿರುವನು. (ಮಾಯಿಪ್ಪಾಡಿ ಅರಮನೆಯವರೇ ಈಗಲೂ ಮದವೂರಿನ ಈ ವಿಘ್ನೇಶ್ವರ ದೇವಾಲಯಕ್ಕೆ ಮುಖ್ಯಾಧಿಕಾರಿಗಳಾಗಿರುವರು. ಇವರಿಗೆ ಈಗ ಸರಕಾರದಿಂದ 'ಮಾಲಿಖಾನಾ' ಮಾಸಾಶನವು ದೊರೆಯುತ್ತಿರುವುದು. ಮತ್ತು ಅದೇ ಪಾರ್ಥಿ ಸುಬ್ಬ ಕೃತ ಸಭಾಲಕ್ಷಣದಲ್ಲಿ

॥ ಪದ ॥ ನೆನಹಿರೊ ಜನರೆಲ್ಲ ಗುಣಯುತನ, ಘನ ಮೂರ್ತಿ ಮದವೂರ ವಿಘ್ನೇಶನ ॥

ಎಂಬ ಪದದಲ್ಲಿಯೂ ಮದವೂರಿನ ಗಣಪತಿಯನ್ನು ಕೊಂಡಾಡಿರುವನು. ಮದವೂರ ದೇವಸ್ಥಾನವು ಸ್ಥಾಪಿತವಾದ ಕಾಲಗಣನೆಯಿಂದ ಈ ಪಾರ್ಥಿ ಸುಬ್ಬನ ಕಾಲವನ್ನು ತಿಳಿಯುವುದಾದರೆ ಸುಮಾರು ೩೦೦ ವರ್ಷಗಳ ಮೊದಲು,ಅಂದರೆ, ಕೃಸ್ತಶಕ೧೭ನೇಯ ಶತಮಾನದಲ್ಲಿ ಈತನು ಜೀವಂತನಾಗಿದ್ದನೆಂದು ಊಹಿಸಬೇಕಾಗಿರುವುದು. ಈ ಕಾರಣಗಳಿಂದ ದಕ್ಷಿಣ ಕನ್ನಡದ ಕಾಸರಗೋಡು ತಾಲೂಕಿಗೆಸೇರಿದ ಕುಂಬಳೆಯ ಕಣಿಪುರವೇ ಈತನ ಜನ್ಮಭೂಮಿಯೆಂದು ಗೊತ್ತಾಗುವುದಲ್ಲದೆ, ಈತನು ಕಣಿಪುರ ಗೋಪಾಲಕೃಷ್ಣ ದೇವರ ಮೇಲೆ ಬರೆದ ಪದ್ಯದಿಂದಲೂ ಇದೇ ಮಾತು ಸಿದ್ಧವಾಗುವುದು. ಕರ್ಣಾಟಕದ ಎಲ್ಲಾ ಕಡೆಯ ದಶಾವತಾರ ನಾಟಕಗಳಿಗೂ ಇದೇ ಮೂಲಸೂತ್ರವಾದ್ದರಿಂದ ಇದರ ಮೂಲವು ಕುಂಬಳೆಯ ಕಣಿಪುರವೆಂದು ಸಿದ್ಧವಾಗುವುದು. ಈತನ ಸಭಾಲಕ್ಷಣವು ಹೆಚ್ಚುಕಡಿಮೆ ಸಂಸ್ಕೃತ ನಾಟಕ ಲಕ್ಷಣಗಳ ಸಂವಿಧಾನಗಳನ್ನೇ ಅನುಸರಿಸಿ ಬರೆದದ್ದಾಗಿರುವುದು. ಇದರಲ್ಲಿಯೂ ಈತನು ಬರೆದ ಇತರ ಯಕ್ಷಗಾನ ಪ್ರಸಂಗಗಳಲ್ಲಿಯೂ, ಸಪ್ತತಾಳಗಳಿಂದ ಪರಿಚಿತವಾದ ಪದ್ಯಗಳೂ, ಆ ಪದ್ಯಗಳಿಗೆ ಕಾಲೋಚಿತವಾಗಿ ಹಾಕಿದ ರಾಗಗಳೂ, ವಾರ್ಧಕ, ಭಾಮಿನಿ, ಕಂದ, ವೃತ್ತ, ದ್ವಿಪದೆ, ವಚನ, ಇತ್ಯಾದಿ ಮಾತ್ರಾ ಮತ್ತು ವರ್ಣ ಛಂದಸ್ಸುಗಳಿಗೆ ಸೇರಿದ ಪ್ರಾಸಾದಿ ನಿಯಮಬದ್ಧವಾಗಿ ರಚಿಸಿರುವ ಕವಿತೆಗಳನ್ನು ನೋಡಿದರೆ, ಈತನನ್ನುನಿರಕ್ಷರಕುಕ್ಷಿಯೆಂದು ಹೇಳಲಿಕ್ಕೆ ಬರುವುದಿಲ್ಲ. ಈತನು ಕಣಿಪುರದ ಗೋಪಾಲಕೃಷ್ಣ ದೇವರ ಕೃಪಾಪಾತ್ರನಾಗಿ ಕವಿತೆಗಳನ್ನುಮಾಡಿದನೆಂದು ಜನರು ಹೇಳುತ್ತಿರುವ ಈ ಮಾತು ಈಗಲೂ ರೂಢಿಯಲ್ಲಿದ್ದಿರುವುದು. ಈ ಮಾತಿನಗೌರವಕ್ಕಾಗಿಜನರುಈತನನ್ನು ಓದುಬರಹಗಳಿಲ್ಲದವನೆಂದು ಪ್ರಚಾರದಲ್ಲಿ ಹಬ್ಬಿಸಿರಬಹುದಲ್ಲದೆ ನಿರಕ್ಷರನೆಂದು ಹೇಳುವುದಕ್ಕೆ ಸಾಧಾರಣವಾದ ಕಾರಣಗಳು ಬೇರೇನೂ ತೋರುವುದಿಲ್ಲ. ಏವಂಚ ಈತನನ್ನು ಕರ್ಣಾಟಕದ ಮಹಾ ಕವಿಗಳಲ್ಲೊಬ್ಬನೆಂದು ಹೇಳುವುದರಲ್ಲಿ ಸಂದೇಹವಿರುವುದಿಲ್ಲ. ಈತನು ಸಭಾಲಕ್ಷಣದಲ್ಲಿ ಭಾಗವತನ ಲಕ್ಷಣಗಳನ್ನು ಹೇಳುವಾಗ್ಗೆ

ಭಕಾರೋ ಭಕ್ತಿಪೂರ್ವೇಣ, ಗ-ಕಾರೋ-ಗರ್ವವರ್ಜಿತ
ವಕಾರೋ ವಾಕ್ಯ ಪಾಠೇನ ತ-ಕಾರೋ ತತ್ವನಿರ್ಣಯ

ಇತ್ಯಾದಿ ಹೇಳಿರುವ ವಾಕ್ಯಗಳಿಂದಲೂ, ಸಭಾಪೂಜೆಯ ಕ್ರಮ, ದಿಕ್ಪಾಲಕರ ವಂದನ ಕ್ರಮ, ಭೂಮಾತೆಯ ಪೂಜಾಕ್ರಮ, ಮೃದಂಗ-ಮೃದಂಗಗಾರನ ಲಕ್ಷಣ, ಇವರು ನಿಲ್ಲತಕ್ಕ ಲಕ್ಷಣ, ರಂಗಮಂಟಪದ ಪರಿಧಿ, ನಾಟ್ಯ ಲಕ್ಷಣ, ಹಾವ, ಭಾವ, ವಾಗ್ವೈಖರೀ ಲಕ್ಷಣಗಳೂ, ಶೃಂಗಾರಾದಿ ನವರಸ ಲಕ್ಷಣಗಳೂ, ಇದರ ಸ್ಥಾಯಿಭಾವಗಳೂ ಮುಂತಾದ ಸಂಸ್ಕೃತ ನಾಟಕ ಲಕ್ಷಣಗಳ ಪದ್ಧತಿಗಳನ್ನೇ ನಿರೂಪಿಸಿರುವುದರಿಂದಲೂ, ಹಾಸ್ಯಲಕ್ಷಣವನ್ನು ವಿವರಿಸುವಲ್ಲಿ

"ಕುಸುಮವಸಂತಾದ್ಯಭಿದಃ ಕರ್ಮವಪುರ್ವೇಶ ಭಾಷಾದ್ಯೈಃ
ಹಾಸ್ಯಕರಃ ಕಲಹರತಿರ್ವಿದೂಷಕಃ ಸ್ಯಾತ್ ಸ್ವಕರ್ಮಜ್ಞಃ")

ಎಂಬ ವಿಶ್ವನಾಥ ಕವಿರಾಜನ ಶ್ಲೋಕದ ಅಭಿಪ್ರಾಯವನ್ನೇ ಬೇರೊಂದು ರೀತಿಯಲ್ಲಿ ಕೊಟ್ಟಿರುವನು. ಅಂದರೆ ವಿದೂಷಕನು(ಹಾಸ್ಯಗಾರನು)ತಾನು ಮಾಡುವ ಅಂಗಚೇಷ್ಟೆ, ಹಾಕಿಕೊಳ್ಳುವ ವೇಷ ಅಥವಾ ಸೋಗು ಮಾತನಾಡುವ ಭಾಷೆ, ಇತ್ಯಾದಿ ಕ್ರಿಯೆಗಳಿಂದ ಹಾಸ್ಯವನ್ನು ಸ್ವಾಭಾವಿಕ ಗುಣದಂತೆಯೇ ಹುಟ್ಟಿಸಬೇಕೆಂದು, ಪರಸ್ಪರ ಕಲಹಗಳನ್ನು ಹುಟ್ಟಿಸಿ ವಿನೋದಿಯಾಗಿರುವುದೂ, ಊಟಉಪಚಾರಗಳನ್ನು ಒದಗಿಸಿಕೊಳ್ಳುವಂತೆ ಸರ್ವದಾ ಪ್ರಯತ್ನಿಸುತ್ತಿರುವುದೂ, ಇವೇ ಮೊದಲಾದ ಕರ್ಮಗಳಿಂದ ಹಾಸ್ಯವನ್ನು ಮಾಡಿ ಸಭೆಗೆ ವಿನೋದವನ್ನುಂಟುಮಾಡಿಸಬೇಕಲ್ಲದೆ ಅಸಭ್ಯಕ್ರಮದ ಭಂಡುಮಾತುಗಳಿಂದಲೂ ನಿರ್ಲಜ್ಜೆಯ ವೇಷಗಳಿಂದಲೂ ಅಸಭ್ಯಕೃತ್ಯಗಳನ್ನು ಮಾಡಿ ಹೇಗಾದರೂ, ಸಭಿಕರನ್ನು ನೆಗಾಡಿಸಬಾರದೆಂದು ಹೇಳಿರುವನು. (ಆದರೆ ಈಗಿನ ಸುಧಾರಿತ ಪಾಶ್ಚಿಮಾತ್ಯ ಸಿನೆಮ, ನಾಟಕ, ಸರ್ಕಸ, ಸಭಾರಂಗಗಳಲ್ಲಿ ತೋರಿಸುತ್ತಿರುವ ಲಜ್ಜೆಯಿಲ್ಲದ ಚೌರ್ಯಾದಿ ಭಂಡು ಅಭಿನೇಯಗಳ ಮುಂದೆ ಬೈಲಾಟದ ಈಗಿನ ಅಶೀಕ್ಷಿತ ಹಾಸ್ಯಗಾರನ ಭಂಡು ಹಾಸ್ಯಗಳಾದರೂ ಇದಕ್ಕಿಂತ ಎಷ್ಟೋ ಮೇಲಾಗಿರುವವು.) ಇತ್ಯಾದಿ ವಿಷಯಗಳನ್ನು ನೋಡಿದರೆ ಈತನು ಕಾವ್ಯಲಕ್ಷಣ, ನಾಟಕಲಕ್ಷಣಗಳನ್ನು ಚೆನ್ನಾಗಿ ತಿಳಿ

ದಿದ್ದನೆಂದೂ, ಕನ್ನಡ, ಸಂಸ್ಕೃತಗಳ ಉಭಯ ಸಾಹಿತ್ಯ ಕ್ಷೇತ್ರದಲ್ಲಿ ವಿಹರಿಸಿದನನೆಂದೂ, ಆ ಕಾಲದ ಜನರನ್ನು ಸುಧಾರಣೆಗೆ ಹಚ್ಚಲು ಮುಖ್ಯವಾಗಿ ಹಳ್ಳಿಪಳ್ಳಿಗಳ ಮೂಲೆಯಲ್ಲಿದ್ದವರನ್ನಾದರೂ ಸುಧಾರಿಸಲು ಈ ದಶಾವತಾರ ನಾಟಕವನ್ನೇ ಗುರಿಮಾಡಿ, ಪೂರ್ವ ಸಾಹಿತ್ಯದಿಂದಲೇ ಇದನ್ನು ಸಂಗ್ರಹಿಸಿ ಕರ್ಣಾಟಕಕ್ಕೆ ಪ್ರಥಮ ರಂಗಭೂಮಿಯಾಗಿ ದಶಾವತಾರ ನಾಟಕವನ್ನು ಮಾಡಿಕೊಟ್ಟನೆಂದು ತಿಳಿದುಬರುತ್ತದೆ. "ನಾಟ್ಯಂ ಭಿನ್ನರುಚೇರ್ಜನಸ್ಯಬ ಹುಧಾಪ್ಯೇಕಂ ಸಮಾರಾಧನಂ" ಎಂಬಂತೆ ಮತಭ್ಯತ್ಯಾಸವುಳ್ಳ ಜನರಲ್ಲಾದರೂ, ಒಂದೆಡೆ ಸಂಗೀತ, ಒಂದೆಡೆ ಚರ್ಮವಾದನ, ಇನ್ನೊಂದು ಕಡೆ ವೇಷಭೂಷಣ, ನಾಟ್ಯ, ಅಭಿನಯ, ಸಾಹಿತ್ಯ ಇವುಗಳಿಂದ ಕೂಡಿದ ರಸಾಲಂಕಾರಗಳು, ಇತ್ಯಾದಿ ಸೇರುವಿಕೆಯುಳ್ಳ ನಾಟಕ ರಂಗಭೂಮಿಯು ಶತ್ರುಗಳನ್ನಾದರೂ ಒಮ್ಮೆ ಮಿತ್ರರಂತೆ ನಿಲ್ಲಿಸಿಬಿಡುವುದು. ಅಂದ ಮೇಲೆ ಇದರಿಂದ ಸಾಮಾಜಿಕ, ನೈತಿಕ, ರಾಜಕೀಯ, ಧಾರ್ಮಿಕ, ಮುಂತಾದ ಜನೋಪಯುಕ್ತ ಸುಧಾರಣೆಗಳನ್ನು ಮಾಡಬಹುದಲ್ಲದೆ, ಛತ್ರಪತಿ ಶಿವಾಜಿ ಮಹಾರಾಜನ ಕಾಲದಲ್ಲಿ "ತಾನಾಜಿ" ಎಂಬ ಮರಾಠ ವೀರನು ಕಾಲಕ್ಷೇಪ (ಹರಿಕಥೆ)ಗಳ ಮುಖೇನ, ದೇಶಭಕ್ತಿಯನ್ನು ಹುಟ್ಟಿಸುತ್ತಾ ಜನರಲ್ಲಿ ಧರ್ಮ ಜಾಗ್ರತಿಯು ಹುಟ್ಟುವಂತೆ ಮಾಡಿರುವನೆಂಬ ಚಾರಿತ್ರೆಯನ್ನು ಓದಿದರೆ, ಈ ದಶಾವತಾರದ ಮೂಲಕ ಕರ್ಣಾಟಕ ದೇಶದ ಯಾವ ಒಂದು ಹಳ್ಳಿಯ ಮೂಲೆಯಲ್ಲಾದರೂ, ಸುಧಾರಣೆಗಳನ್ನೂ, ಜನ ಜಾಗ್ರತಿಯನ್ನೂ ಹುಟ್ಟಿಸಬಹುದೆಂಬದರಲ್ಲಿ ಅನುಮಾನವಿರುವುದಿಲ್ಲ. ಈಗಲಾದರೂ ಹಳ್ಳಿಯೂರುಗಳಲ್ಲಿ ದಶಾವತಾರದ ನಾಟಕಗಳಿಗೂ, ಯಕ್ಷಗಾನ ತಾಳಮದ್ದಳೆಗಳೆಂಬ ಬೈಠಕುಗಳಿಗೂ, ಸ್ತ್ರೀ ಪುರುಷ, ವೃದ್ಧ, ಬಾಲಕರೆಂಬ ಭೇದವಿಲ್ಲದೆಹೋಗುವುದೂ, ಇದರಲ್ಲಿಯ ದೃಶ್ಯಗಳನ್ನು ನೋಡುವುದೂ, ಶ್ರಾವ್ಯಗಳನ್ನು ಕೇಳುವುದೂ, ಜನರಿಗೆ ಸಂತೋಷಾಸ್ಪದವಾದ ಕಾರ್ಯಗಳಲ್ಲೊಂದಾಗಿರುವುದು. ಹೆಚ್ಚೇಕೆ? ಮಂಗಳೂರಿನ ಯಕ್ಷಗಾನೋಜ್ಜೀವಿನೀ ಸಭಾಪರವಾಗಿ ಕೆನರಾ ಹೈಸ್ಕೂಲಿನ ಭುವನೇಂದ್ರ ಸಭಾಸದನದಲ್ಲಿಯೂ—ಟ್ರೈನಿಂಗ್ ಶಾಲೆಯಲ್ಲಿಯೂ, ನಡೆದ ಕೆಲವು ಯಕ್ಷಗಾನ ಬೈಠಕು ತಾಳಮದ್ದಳೆಗಳಿಗೆ, ಕುಂದಾಪುರ, ಉಡುಪಿ, ಕಾರ್ಕಳ, ಉಪ್ಪಿನಂಗಡಿ, ಕಾಸರಗೋಡು ತಾಲೂಕುಗಳಲ್ಲಿಯ ಹಳ್ಳಿ—ಪಟ್ಟಣದವರೆಂಬ ಭೇದವಿಲ್ಲದೆ, ಇದಕ್ಕಾಗಿ 30-40 ಮೈಲುಗಳ ದೂರದಾರಿಯಿಂದ ಖರ್ಚುಮಾಡಿಕೊಂಡು ಬಂದಿರುವ ಪ್ರೇಕ್ಷಕ ವರ್ಗವನ್ನು ನೋಡಿದಲ್ಲಿಯೂ, ಇಲ್ಲಿ ಇದಕ್ಕಾಗಿಯೇ ಬಂದು ಸೇರಿದ ಮಾನ್ಯರಿಂದ ಸಾಮಾನ್ಯರ ವರೆಗಿನ ಇತರ ಸಭಾಸದರನ್ನು ನೋಡಿದರೆಯೂ, ಇಷ್ಟು ದೊಡ್ಡ ಪ್ರಚಂಡ ಸಭೆಗಳು ಯಾವ ಭಾಷಣಕ್ಕೂ ಇನ್ನಿತರ ಸಮಾರಂಭಗಳಿಗೂ ಸೇರಿಬರಲಿಲ್ಲವೆಂದು ತಿಳಿದುಬರುತ್ತದೆ. ಕಾರಣ ಯಕ್ಷಗಾನವು ಒಂದು ಮೋಹಿನೀ ಕಲೆಯಾಗಿರುವುದೆಂದು ಹೇಳಬಹುದು. ಇಂತಹ ಕರ್ಣಾಟಕ ರಂಗಭೂಮಿಯನ್ನು ಕನ್ನಡಿಗರಿಗೆ ಮಾಡಿಕೊಟ್ಟು ಚಿರಸ್ಮರಣೀಯನಾದ ಪಾರ್ಥಿ ಸುಬ್ಬನನ್ನು ಓದುಬರಹಗಳು ತಿಳಿಯದವನೆಂದು ಹೇಳಲು ಯಾರಿಗೆ ಧೈರ್ಯವಿದೆ?

**ಯಕ್ಷಗಾನ ಪ್ರಸಂಗಗಳು ಮತ್ತು ಕವಿಗಳು:—**

ಈ ಪ್ರಸಂಗಗಳನ್ನು ಕರ್ಣಾಟಕ ಸಾಹಿತ್ಯ ಕಲೆಯೊಂದಿಗೆ ಸೇರಿಸಬಹುದೋ, ಕೂಡದೋ ಎಂಬದನ್ನು ಕುರಿತು ಮತಭ್ಯತ್ಯಾಸಗಳಿವೆ. ಆದಾಗ್ಗೂ ಕಾವ್ಯವು ಕವಿಕರ್ಮವಾಗಿರುವಂತೆ ಇದು ಸಹ ಕವಿಕರ್ಮದ ಕಾವ್ಯವೇ ಆಗಿದ್ದು, ಕಾವ್ಯ ಭಾಷೆಗಿಂತ ಬೇರೆಯಾಗಿ ಅರ್ಥಾತ್ ಮಹಾ ಕಾವ್ಯಗಳಲ್ಲಿರಬೇಕಾದ ಪುರ, ಗಿರಿ, ಋತು, ಸೋಮೋದಯಾದಿಅಷ್ಟಾದಶವರ್ಣನೆಗಳಕವಿಯ ಹದಿನೆಂಟು ಅಂಗಗಳಿಗಿಂತಲೂ ಶ್ಲೇಷ ಉಪಮಾ, ವಿರೋಧಾಭಾಸ, ಶಬ್ದ, ಅರ್ಥ, ಉತ್ಪ್ರೇಕ್ಷೆ, ಉಲ್ಲೇಖ, ದೃಷ್ಟಾಂತ, ಯಥಾಸಂಖ್ಯಾ, ಅರ್ಥಾಂತರ, ನಿದರ್ಶನ, ವ್ಯಾಜ್ಯನಿಂದಾ, ಇತ್ಯಾದ್ಯಲಂಕಾರಗಳಿಂದಲೂ, ಮತ್ತು ಆದ್ಯಂತ, ಅನುಗತ, ಸಮಿಾಪ, ದ್ವಿತಯಾನು, ಛೇಕಾನು, ವರ್ಗಾನು ಪ್ರಾಸಗಳಿಂದಲೂ, ಕೂಡಿರುವಷ್ಟು ಅಗತ್ಯವುಳ್ಳವುಗಳಾಗಿರದೆ, ಪಾತ್ರವರ್ಗದವರಿಗೆ ಸುಲಭ ಗ್ರಾಹ್ಯವಾಗುವಂತೆ ಛಂದೋಶಾಸ್ತ್ರಕ್ಕೆ ಸಾಧ್ಯವಿರುವ ಮಟ್ಟಿಗೆ ಮು

ಖ್ಯಾಂಶಗಳಲ್ಲಿ ತಪ್ಪದೆ ತಾಳದ ಪದಗಳಿಗೆಲ್ಲಾ ನಿಯಮವಿದ್ದೇ ಬರೆದದ್ದಾಗಿರುವುದು ಯಕ್ಷಗಾನದ ಮೂಲ ಕವಿಯಾದ ಪಾರ್ಥಿ ಸುಬ್ಬನು ಯಕ್ಷಗಾನಕ್ಕೆ ಭಾಷಾಂತರಿಸಿದ ಮೂಲ ಗ್ರಂಥವಾದ ಕನ್ನಡ ತೊರವೆ ರಾಮಾಯಣವೇ ಲಕ್ಷ್ಮೀಶ-ಷಡಕ್ಷರಿ, ವಿರೂಪಾಕ್ಷ, ರನ್ನ, ರುದ್ರಭಟ್ಟ ಮುಂತಾದ ಮಹಾಕವಿಗಳ ಕನ್ನಡ ಕಾವ್ಯ ಗ್ರಂಥಗಳ ಲಕ್ಷಣಕ್ಕಿಂತ ಭಿನ್ನವಾಗಿದ್ದ ಕಾರಣದಿಂದಲೂ, ಮೂಲ ಗ್ರಂಥಕ್ಕಿಂತ ತಗ್ಗಿಸಿಯೇ ಕವಿಯು ಕಥಾ ಭಾಗಕ್ಕೇನೇ ಹೆಚ್ಚಿನ ಲಕ್ಷ್ಯವಿತ್ತು ಯಕ್ಷಗಾನಪ್ರಸಂಗಗಳನ್ನು ಬರೆಯಬೇಕಾದುದರಿಂದಲೂ, ಅವುಗಳಿಗಾಗಿಯೇ ಕಾವ್ಯಲಕ್ಷಣಗಳು ಕೆಲವೆಡೆಯಲ್ಲಿ ಬಂದು ಸೇರಿರುವುದಲ್ಲದೆ ಬೇಕೆಂತ ಜಜ್ಜ ಸೇರಿಸಿ ಬರೆಯಲು ಪಾರ್ಥಿ-ಸುಬ್ಬನು ಉಪಕ್ರಮಿಸಲಿಲ್ಲ. ಪಾರ್ಥಿ ಸುಬ್ಬನ ಕಾಲದ ನಂತರ ಬರೆದ ಯಕ್ಷಗಾನ ಪ್ರಸಂಗಗಳೆಲ್ಲಾ ಅವನ ಕೃತಿಗಳನ್ನೆ ಮೇಲ್ಪಂಕ್ತಿಯಾಗಿಟ್ಟುಕೊಂಡು ಬರೆದವುಗಳಾದಕಾರಣ ಬೇರೊಂದು ಕ್ರಮಕ್ಕೆ ಪರಿವರ್ತನೆಯಾಗಲಿಲ್ಲ ಮತ್ತು ಯಕ್ಷಗಾನದ ಪ್ರಸಂಗಗಳನ್ನು ಕಾವ್ಯಗಳಂತೆಯೇ ಬರೆದರೆ, ಅದರಿಂದ ನಟರಿಗೂ ರಂಗಭೂಮಿಗೂ ವಿಘ್ನಗಳೊದಗಿ, ಜನರಿಗೆ ಆಶಾಭಂಗವಾದೀತೆಂಬ ನಿಶ್ಚಯದಿಂದಲೇ ದ್ರಾಕ್ಷಾಪಾಕವಾಗಿ ಯಕ್ಷಗಾನವು ಬರೆಯಲ್ಪಟ್ಟದ್ದಾಗಿರುತ್ತದೆ. ಇದು ಛಂದಸ್ಸಿನ ಮೇರೆಯನ್ನತಿಕ್ರಮಿಸದೆಯೂ, ಶಿಕ್ಷಾಚಾರ್ಯರ ಭಯಕ್ಕೆ ಬಾಗದೆಯೂ, ಶಿಷ್ಟಾಚಾರಕ್ಕೆ ಮಧ್ಯವರ್ತಿಯಾಗಿರುವಂತೆ ಬರೆದದ್ದರಿಂದಲೇ ಇದಕ್ಕೆ ಕ್ಷುದ್ರಕಾವ್ಯವೆಂದು ಹೆಸರು ಬಂದಿರುವುದು. ಎಂತೂ ಕಾವ್ಯವೆಂಬ ಹೆಸರಿನಿಂದ ಬಹಿಷ್ಕೃತವಾಗಲಿಲ್ಲ. ಆದ್ದರಿಂದ ಯಕ್ಷಗಾನವು ಕರ್ಣಾಟಕ ಸಾಹಿತ್ಯ ಕ್ಷೇತ್ರದ ಮಧ್ಯವರ್ತಿಯಾಗಿದ್ದುಕೊಂಡು ಎಲ್ಲಾ ಕಲೆಗಳ ಪರಿಚಯವನ್ನು ಕನ್ನಡಿಗರಿಗೆ ಮೂಲದಲ್ಲಿ ಮಾಡಿಕೊಡುವ ಪ್ರಾಥಮಿಕ ಶಿಕ್ಷಣ ಶಾಲೆಯಾಗಿರುವುದು. ಆದ್ದರಿಂದಲೇ ಈ ಯಕ್ಷಗಾನ ಕಲೆಯಲ್ಲಿ ಪಾರ್ಥಿ ಸುಬ್ಬನ ಕಾಲದನಂತರ ಭಾಷಾವತ್ಸಲರಾದ ವಿದ್ವಜ್ಜನರನೇಕರಿಳಿದು ಧೀರತೆಯಿಂದ ಕೆಲಸವನ್ನು ಮಾಡಿದಂತೆ ತೋರಿಬರುವುದು. ಉದಾ: ಮಹಾಶಯರಾಗಿದ್ದ ದಿವಂಗತ ಗೆರಸಪ್ಪೆ ಶಾಂತಪ್ಪಯ್ಯನವರು ಕನ್ನಡ ಮಹಾಭಾರತದೊಳಗಣ ಯಕ್ಷಗಾನ ಕರ್ಣಪರ್ವವೆಂಬ ಪ್ರಸಂಗವನ್ನು ಬರೆದಿರುವರು. ಈ ಪ್ರಸಂಗವು ಮುಖ್ಯವಾಗಿ ವೀರರಸಪ್ರಧಾನವಾದದ್ದಾಗಿರುವುದು. ಆದಾಗ್ಗೂ ಇವರು ಕರ್ಣನ ರಥದ ಚಕ್ರವು ಯುದ್ಧಭೂಮಿಯಲ್ಲಿ ಕೆಸರಿನೊಳಗೆ ಹೂಳಿಹೋದ ಸಂದರ್ಭದಲ್ಲಿ ಕರ್ಣನು ಸ್ವಗತವಾಗಿಯೂ, ಅರ್ಜುನನ ಕೂಡೆಯೂ ಹೇಳುವ ಮಾತುಗಳುಳ್ಳ "ಅಕಟ ದೈವವೆ! ಹೀನನಾದನು ಕೌರವೇಶ್ವರ" ಎಂಬ ಸ್ವಗತೋಕ್ತಿಯ ಪದ್ಯವೂ, "ಎಲೆ ಪಾರ್ಥ ನೀ ಕೇಳು ಒಲಿದೆನ್ನ ಮಾತಾ"॥ ಎಂಬ ಅರ್ಜುನನೊಡನೆ ಸಂಭಾಷಿಸುವ ಮಾತುಗಳೂ ನಿಜವಾದ ರಸಜ್ಞಾನವುಳ್ಳ ಪಾತ್ರದ ವಕ್ತೃವಿನ ಬಾಯಿಂದ ಹೊರಬಿದ್ದರೆ ಯಾರ ಕಣ್ಣಿನಿಂದಲೂ ಒಮ್ಮೆ ನೀರು ಸುರಿಸತಕ್ಕ ಕರುಣಾರಸಪ್ರಧಾನವಾದ ಮಾತಾಗಿರುವುದು. ಇದರಂತೆ, ಬಿಲ್ಲಹಬ್ಬ, ಬಾಲಲೀಲೆ, ಗೋಗ್ರಹಣ, ಚಂದ್ರಾವಲಿವಿಲಾಸ, ಸಮುದ್ರಮಥನ, ಮುಂತಾದ ಯಕ್ಷಗಾನ ಪ್ರಸಂಗಗಳನ್ನು ನೋಡಿದರೆ, ಶೃಂಗಾರ, ಹಾಸ್ಯ-ವೀರರಸಪ್ರಧಾನವಾದ ಪದ್ಯಗಳು ಕಾಣುವುವು. ರಾಜಕೀಯ ವಿಷಯದಲ್ಲಂತೂ, ಕೃಷ್ಣಸಂಧಾನವೆಂಬ ಯಕ್ಷಗಾನ ಪ್ರಸಂಗವು ತುಂಬಾ ಶ್ರೇಷ್ಠವಾದದ್ದಾಗಿರುವುದು. ಇವುಗಳಲ್ಲದೆ ಆದರ್ಶರತ್ನಪ್ರಾಯವಾದ ಇನ್ನೆರಡು ಯಕ್ಷಗಾನ ಪ್ರಸಂಗಗಳಿರುವವು. ನವರಸಾಲಂಕಾರಭರಿತವಾಗಿ ಕಾವ್ಯಲಕ್ಷಣದಿಂದ ಕೂಡಿರುವ ಈ ಪ್ರಸಂಗಗಳೆರಡು ಯಕ್ಷಗಾನವನ್ನು ಕುರಿತು ಹೇಳಲಿರುವ ಸಾಹಿತ್ಯಕಲೆಗಳಿಗೆ ಉದಾಹರಣೆಯಾಗಿರುವುವು. ಈ ಪ್ರಸಂಗಗಳ ಹೆಸರು: ೧ ಕುಮಾರವಿಜಯ, ೨ ರತ್ನಾವತಿಕಲ್ಯಾಣ. ಇವುಗಳನ್ನು ಬರೆದ ಕವಿಯು ಅದ್ಭುತರಾಮಾಯಣ, ಶ್ರೀ ರಾಮಪಟ್ಟಾಭಿಷೇಕ, ರಾಮಾಶ್ವಮೇಧಗಳೆಂಬ, ರತ್ನತ್ರಯ ಗ್ರಂಥಗಳನ್ನು ಬರೆದು, ಕನ್ನಡದ ಸರಸ್ವತೀ ಭಂಡಾರವನ್ನು ತುಂಬಿಸಿ, ದಕ್ಷಿಣ ಕನ್ನಡದಲ್ಲಿ ಕನ್ನಡಿಗರ ಮಾನಧ್ವಜವನ್ನು ನಿಲ್ಲಿಸಿದ ಕ್ರೈಸ್ತಶಕ 1901ನೆ ಇಸವಿ ಫೆಬ್ರವರಿ ತಾ. 16ನೇ ಶನಿವಾರ ದಿವಾರೋಹಣವಾದ ಕೀರ್ತಿಶೇಷ ನಂದಳಿಕೆ ಲಕ್ಷ್ಮೀನಾರ್ಣಪ್ಪಯ್ಯನವರೇ ಆಗಿರುವರು.

ಕನ್ನಡಿಗರಿಗೆ ಪ್ರಾತಃಸ್ಮರಣೀಯನಾದ ಈ ಕವಿ ಪುಂಗವ ಮಹಾಶಯನು ಕೈಬರಹದಿಂದ ಬರೆದ ''ಅದ್ಭುತರಾಮಾಯಣ'', ಗದ್ಯಕಾವ್ಯದ ಮೂಲಪ್ರತಿ ಯನ್ನು 1926ನೇ ಇಸವಿ ಫೆಬ್ರುವರಿ ತಿಂಗಳಲ್ಲಿ ಬೆಂಗಳೂರಿಗೆ ಹೋದಾಗ್ಗೆ ಶ್ರೀಯುತ ಎಚ್. ಚೆನ್ನ ಕೇಶವ ಅಯ್ಯಂಗಾರ್ಯರಲ್ಲಿ ನೋಡುವ ಭಾಗ್ಯವು ನನಗೆ ದೊರೆಯಿತು. ಇದರಲ್ಲಿರುವ ಕೆಲವು ಆಶ್ವಾಸಗಳು ಇನ್ನೂ ಅಚ್ಚಾಗಲಿಲ್ಲ. ಈತನು ಬರೆದ ಯಕ್ಷಗಾನ ಕುಮಾರವಿಜಯದಲ್ಲಿ ದೇವೇಂದ್ರನೊಡನೆ ಶಚಿಯು ಮಾತನಾಡುವ "ಮಾತನಾಡೋ ಮಮಪ್ರಾಣನಾಥ" ಎಂಬ ಪದ್ಯದಲ್ಲಿರುವ ಪ್ರಾಸಕ್ರಮ, ಕರುಣಾರಸ, ಚಮತ್ಕಾರಿಕ ಪ್ರಹಸನಗಳೂ, ಇದರಂತೆಯೇ "ಶ್ರೀಕರ ಶತಮುಖನತತ್ರಿದಶಾ" ಎಂಬ ಪದ್ಯದಲ್ಲಿಯೂ, "ಗುರು ವಾರ್ಯ ಕೇಳೆನ್ನ ಮಾತಾ" ಎಂಬ ಪದ್ಯದಲ್ಲಿಯೂ, ದೂರ್ವಾಸ ಅಜಮುಖಿಯರ ಸಂವಾದದಲ್ಲಿಯೂ, ಪ್ರತಿ ಪುಟದಲ್ಲೆಂಬಂತೆ, ಈ ಕವಿಯ ಪ್ರತಿಭಾಶಕ್ತಿಯೂ ತೋರುತ್ತಿರುವುದು. ಅಲ್ಲದೆ ಈತನ ರತ್ನಾವತಿ ಕಲ್ಯಾಣದಲ್ಲಿ "ಚಿತ್ತವಿಸು ಭೂಪೋತ್ತಮನೆ ನುಡಿಯಾ" ಎಂಬ ಪದ್ಯವನ್ನು ನೋಡಿದರೆ ಲಕ್ಷ್ಮೀಶ ಕವಿಯು ಜೈಮಿನಿಯಲ್ಲಿ ಬರೆದ "ಎತ್ತಿಬಹ ಸತ್ತಿಗೆಯ ವೊತ್ತ" ವೆಂಬ ಪದ್ಯದ ನೆನಪಾಗುವುದಲ್ಲದೆ ಇದೇ ರತ್ನಾವತಿ ಕಲ್ಯಾಣದಲ್ಲಿ, ರತ್ನಾವತಿಯನ್ನು ಕಾಡಿನಲ್ಲಿ ವತ್ಸರಾಜನು ನೋಡಿ ಹೇಳುವ ಮಾತಿಗೆ ಬರೆದ "ನುಡಿಯೇ ನಿನ್ನೊಡೆ ಯನ ಪೆಸರೊಡನುಡಿಯೇ" ಎಂಬ ಪದ್ಯಭಾಗದ, "ಬಡನಡುವಿನ ಪಿಡಿನಡೆದುಡುಕೊಡಬಿಡು" ಇತ್ಯಾದಿ ಪದ್ಯಗಳಲ್ಲಿ ಬರೆದ ಅನುಗತ, ಆದ್ಯಂತ, ದ್ವಿತಯಾನು ಪ್ರಾಸಗಳೂ, ಶೃಂಗಾರರಸಪೂರಿತವಾದ ಮಾತುಗಳೂ, ಎಷ್ಟು ಕುಶಲತೆಯಿಂದ ಬಂದಿರುವವು. ಅಲ್ಲದೆ ಈ ರತ್ನಾವತಿ ಕಲ್ಯಾಣದಲ್ಲಿ ಮುಖ್ಯ ನಾಯಕನಾದ ದೃಢ ವರ್ಮ ರಾಜನನ್ನು ಪ್ರತಿನಾಯಕನಾದ ಭದ್ರಸೇನನು ಯುದ್ಧದಲ್ಲಿ ಸೋಲಿಸಿ ರತ್ನಾವತಿ ಇದ್ದ ಮಾಳಿಗೆಗೆ ಹೋಗಿ ನಿದ್ರಾಲೋಲುಪತೆಯಿಂದಿರುವ ರತ್ನಾವತಿ ಯನ್ನು ನೋಡಿ, ಹೇಳುವ ಮಾತಿನ "ಏನನುಸುರಲಿ ಮಾನಿನಿಯ ಚಲುವಾನನದರ್ಪಗೆ, ಮದಗಜಯಾನೆ ಕೋಕಿಲಗಾನೆ ಸತಿಯಳನ್ಯೂನ ಮೊಗಸಿರಿಗೇ" ಎಂಬ ಪದ್ಯಗಳನ್ನು ನೋಡಿದರೆ, ಇದರಲ್ಲಿರುವ ಉಪಮಾ, ಶಬ್ದ, ಅರ್ಥ, ದೃಷ್ಟಾಂತ, ಉತ್ಪ್ರೇಕ್ಷಾ, ಭ್ರಾಂತಿಜನ್ಯ ವಿರೋಧಾಭಾಸ, ವ್ಯಾಜ್ಯನಿಂದಾದಿ ಅಲಂಕಾರಗಳೂ, ಅದೇ ಪ್ರಸಂಗದಲ್ಲಿರುವ "ಅಂಗಜಯ್ಯನಸುಪದಾಬ್ಜ ಭೃಂಗ, ಮಿತ್ರವೃಂದ ಕುಮುದತಂಗದಿರ, ಮದಾಂಧ ನೃಪಮಾತಂಗ ಪಂಚವದನನೆನಿಪ" ಎಂಬ ಪದದಲ್ಲಿನ ಶಬ್ದಾರ್ಥಾಲಂಕಾರಗಳೂ, ಹೆಚ್ಚುಕಡಮೆ ನೂತನ ದೃಷ್ಟಿಯುಳ್ಳ ಈ ಕವಿಯು ಎಲ್ಲಾ ಪದ್ಯಗಳಲ್ಲಿಯೂ, ನೂತ ನೋತ್ಪತ್ತಿಗಳು ಹೇಗೆ ಒಡೆದು ಕಾಣಿಸುತ್ತವೆಂಬ ದನ್ನು ಸಮಗ್ರವಾಗಿ ಹೇಳಬೇಕಾದರೆ, ಪ್ರತ್ಯಕ್ಷವಾಗಿ ಆ ಪುಸ್ತಕಗಳ ಪರಿಶೀಲನೆಯನ್ನು ಮಾಡಿಯೇ ಹೇಳ ಬೇಕಲ್ಲದೆ, ಮಾದರಿಗಾಗಿ ಮಾತ್ರ ಉಲ್ಲೇಖಿಸಿದ ಈ ಸ್ವಲ್ಪ ವಿಷಯಗಳ ವಿಮರ್ಶೆಯಿಂದ ಹೇಳಲು ಸಾಧ್ಯ ವಿರುವುದಿಲ್ಲ. ಆದರೆ ಈ ಪ್ರಸಂಗಗಳು ಪಾತ್ರವರ್ಗದ ವರಿಗೆ ಅರ್ಥಗಳನ್ನು ಮಾತನಾಡಲು ಈ ಕವಿಯ ಪದ್ಯಗಳು ಹಿಂದೆ ಹೇಳಿದಂತೆ ಕಾವ್ಯಸರಣಿಯಲ್ಲಿ ಬರೆ ಯಲ್ಪಟ್ಟದ್ದರಿಂದಲೂ ಅರ್ಥಾತ್ ಸಾಮಾನ್ಯ ಜನರಿಗೆ ಪರಿಚಯವಿಲ್ಲದಿರುವ ಶಂಕರಸಂಹಿತೆಯಿಂದ ಕುಮಾ ರವಿಜಯವೂ ಬೃಹತ್ಕಥಾನಕ ಪುರಾಣದಿಂದ (ಬೃಹತ್ಕ ಥಾಮಂಜ ಯಿಂದ) ರತ್ನಾವತಿ ಕಲ್ಯಾಣವೂ ಯಕ್ಷ ಗಾನಕ್ಕೆ ಸೂಕ್ಷ್ಮ ದೃಷ್ಟಿಯುಳ್ಳ ಈ ಕವಿಯು ಹೊಸ ರೀತಿಯಾಗಿ ಪರಿವರ್ತಿಸಿರುವುದರಿಂದಲೂ ಪ್ರತಿ ಪದ್ಯ ಗಳಿಗೆ ಧಾಟಿಯನ್ನು ಕೊಟ್ಟದ್ದರೂ ಅವುಗಳು ಬಹು ನೂತನಕ್ರಮದಿಂದ ಹಾಡಲಿರುವ ಪದ್ಯಗಳನ್ನು ಆರಿಸಿ ಯೇ ಆದರ್ಶರೀತಿಯಿಂದ ಬರೆದವುಗಳಾದ್ದರಿಂದಲೂ, ಆ ಕಾಲದಲ್ಲಿ ಜನರು ಪುರಾಣ ಕಥೆಗಳಲ್ಲೇ ಪ್ರೀತಿ ಯುಳ್ಳವರಾಗಿದ್ದು, ಬ್ರಹ್ಮಚಾರಿಯಾಗಿದ್ದ ಕುಮಾರ ಸ್ವಾಮಿಯು ಪದ್ಮಾಸುರಾದಿಗಳನ್ನು ಕೊಂದು, ದೇವತೆ ಗಳನ್ನು ರಕ್ಷಿಸಿ, ದೇವೇಂದ್ರನ ಮಗಳಾದ ವೈಜಯಂತಿ ಯನ್ನು ಮದುವೆಯಾದನೆಂಬುದು ಕಲ್ಪನಾಕಥೆಯಾ ಗಿದ್ದು, ಶಿಷ್ಟಾಚಾರಕ್ಕೆ ಸಲ್ಲದೆಂದೂ, ಹೀಗೆ ಅವಿದ್ಯಾ ವಂತರಾದ ಪಾತ್ರವರ್ಗದವರಿಂದ ಅರ್ಥಗಳನ್ನು ಮಾತ ನಾಡಲಿಕ್ಕ ಕಷ್ಟತರವಾಗಿಯೂ ಸ್ವರ, ವರ್ಣ, ಕೃತಿ,

ತಾಳ, ಲಯ, ಜ್ಞಾನಗಳಿಲ್ಲದ ಭಾಗವತರಿಗೆ ಹಾಡಲಿಕ್ಕೆ ಕಷ್ಟವಾಗಿಯೂ ಜನರಿಗೆ ಹೊಸತಾಗಿಯೂ ಪ್ರಾರಂಭ ದಲ್ಲಿ ಈ ಪ್ರಸಂಗಗಳು ಕಂಡದ್ದರಿಂದ ರಂಗಸ್ಥಳಗಳಲ್ಲಿ ಹೆಚ್ಚಾಗಿ ಆಡಲ್ಪಡಲಿಲ್ಲವೆಂತ ಕಾಣುತ್ತದೆ. ಆದರೆ ಇತ್ತೀಚೆಗೆ ಈ ಪ್ರಸಂಗಗಳು ಯಕ್ಷಗಾನ ರಂಗಭೂಮಿ ಯಲ್ಲಿ ಆಡಲ್ಪಡುತ್ತವಲ್ಲದೆ ಬೈಠಕು ತಾಳಮದ್ದಳೆಗಳ ಲ್ಲಿಯೂ, ಹೇಳುವಂತೆ ಪ್ರಚಾರಕ್ಕೆ ಬಂದಿರುವುದು. ಇದಕ್ಕೆ ಕಾರಣವೇನಂದರೆ: ಕಾಸರಗೋಡು ತಾಲೋಕಿನ ಶ್ರೀಮಂತ ಮನೆತನದವರಲ್ಲೊಬ್ಬರಾಗಿದ್ದು ಉದಾರ ಗೃಹಸ್ಥರಾಗಿದ್ದ ದಿವಂಗತ ಕೂಡ್ಲು ಸುಬ್ರಾಯಶ್ಯಾನು ಭಾಗರವರೇ ಈ ಪ್ರಸಂಗಗಳ ಬೆಲೆಯನ್ನು ದಶಾವ ತಾರ ನಾಟಕಗಳಿಗೂ ಇದರ ಹಾಡುವಿಕೆಯ ಕ್ರಮ ವನ್ನು ಯಕ್ಷಗಾನದ ಭಾಗವತರಿಗೂ, ಉಪದೇಶ ಮಾಡಿದವರಲ್ಲಿ ಮೊದಲನೆಯವರಾಗಿರುವರು. ಕೀರ್ತಿ ಶೇಷ ಸುಬ್ರಾಯಶ್ಯಾನುಭಾಗರು, ದಕ್ಷಿಣ ಮತ್ತು ಉತ್ತ ರಾತ್ಯ ಸಂಗೀತಗಳನ್ನು ತುಂಬಾ ಹಾಡಬಲ್ಲ ಉತ್ತಮ ಗವಾಯಿಗಳಾಗಿದ್ದಂತೆ ಯಕ್ಷಗಾನದ ಹಾಡುವಿಕೆಯ ಲ್ಲಿಯೂ ಅಪ್ರತಿಮರಾಗಿದ್ದರು. ಅಲ್ಲದೆ ಇವರಲ್ಲಿ ಅನ್ಯಾದೃಶ್ಯವಾದ ಪ್ರತಿಭಾಶಕ್ತಿಯು ಸ್ಫುರಿಸುತಿತ್ತು. ಇವರು ವೀಣಾ, ಸತಾರ, ಪಿಟಲು, ಇತ್ಯಾದಿ ತಂತುವಾದ್ಯಗಳನ್ನೂ, ಕೊಳಲು (ವೇಣಿ) ನಾಗಸ್ವರ, ಕ್ಲಾರ್ನೆಟು, ಮೊದಲಾದ ಸುಶಿರವಾದ್ಯಗಳನ್ನೂ, ಮೃದಂಗ, ಚಂಡೆ, ತಬ್ಲೆ, ಡೋಲ್ಕಿ, ಸಮ್ಮೇಳ ಮುಂತಾದ ಆನದ (ಚರ್ಮ) ವಾದ್ಯಗಳನ್ನೂ, ಜಲತರಂಗ, ಕಾಷ್ಟತರಂಗಗಳೆಂಬ ಘನವಾದ್ಯ ವಿಶೇಷಣಗಳನ್ನೂ, ಪ್ರಸಿದ್ಧ ಮನೋಹರ ಬರ್ವೆಗಿಂತ ಚೆನ್ನಾಗಿ ಬಲ್ಲವ ರಾಗಿದ್ದುದಲ್ಲದೆ, ಕವಿತಾಜ್ಞಾನಿಯೂ ಆಗಿದ್ದರು. ಚಿತ್ರ ಕಲಾ (ಡ್ರೋಯಿಂಗ್) ಮೊದಲಾದ ಮಣ್ಣಿನ, ಕಲ್ಲಿನ, ಮರದ ಕೈಗಾರಿಕೆಕೆಲಸಗಳಲ್ಲಿಯೂ, ಹಸ್ತಕೌಶಲ ಗಳಲ್ಲಿಯೂ, ಚೆನ್ನಾಗಿ ತಿಳಿದವರಾಗಿದ್ದರು. ಅನೇಕ ಜನ ವಿದ್ಯಾರ್ಥಿಗಳು ಈ ಮಹನೀಯರ ಉದಾರಾಶ್ರಯವನ್ನು ಪಡೆದು, ಗಾಯನಕಲೆಗಳಲ್ಲಿ ಧಾರ್ಮಿಕ ವಾಗಿ ಶಿಕ್ಷಣವನ್ನು ಹೊಂದಿ ಜೀವನವೃತ್ತಿಯನ್ನು ಸಾಗಿಸುತ್ತಿರುವರು. ಇವರ ಮನೆತನದ "ಕೂಡ್ಲು" ಮೇಳವೆಂದು ಪ್ರಸಿದ್ಧವಾದ ಯಕ್ಷಗಾನ ದಶಾವತಾರ ಮೇಳವು ಈಗಲೂ ಇದ್ದಿರುವುದು. ಈ ಮಹನೀಯರು 1925ನೇ ಇಸವಿಯ ಕೊನೆಗೆ ಕಾಲವಾದರು. ಇವರ ನಿಧನದಿಂದ ಕರ್ಣಾಟಕ ಯಕ್ಷಗಾನ ರಂಗ ಭೂಮಿಯೇ ಪ್ರಸಿದ್ಧ ರತ್ನ ಒಂದನ್ನು ಕಳಕೊಂಡು ಕಾಂತಿವಿಹೀನವಾಗಿರುವುದು. ದಿವಂಗತರ ಶಿಷ್ಯವರ್ಗ ದವರಲ್ಲೊಬ್ಬರೂ, ಈ ದಿನದ ಯಕ್ಷಗಾನ ಭಾಗವತ ರಲ್ಲಿ ಪ್ರಸಿದ್ಧರೂ ಆಗಿರುವ ಶ್ರೀ|| ಬಲಿಪ ನಾರಾಯಣ ಭಾಗವತರು ಕುಮಾರವಿಜಯ, ರತ್ನಾವತಿ ಕಲ್ಯಾಣ ಗಳೆಂಬ ಪ್ರಸಂಗಗಳನ್ನು ಕಂಠಪಾಠಮಾಡಿ ಹಾಡಲಾ ರಂಭಿಸಿದಂದಿನಿಂದ ಇವರ ಹಾಡುವಿಕೆಯು ಪ್ರಸಿದ್ಧಿ ಯನ್ನು ಹೊಂದುತ್ತಾ ಬಂದಂತೆಲ್ಲಾ ಈ ಪ್ರಸಂಗಗಳು ಪ್ರಚಾರದಲ್ಲಿ ಮುಂದೆಬರಲಿಕ್ಕೆ ಕಾರಣವಾಯಿತು. ಇವರ ಹಾಡುವಿಕೆಯ ನಂತರವೇ ಈ ಪ್ರಸಂಗಗಳಲ್ಲಿ ಜನರಿಗೆ ಅಭಿರುಚಿಯು ಹುಟ್ಟದ್ದಾಗಿರುತ್ತದೆ. ದಿವಂಗತ ಮಂಜುನಾಥ ಭಾಗವತರ ನಿಧನದಿಂದ ನಷ್ಟವಾಗಿ ಹೋದ ಯಕ್ಷಗಾನದ ಹಾಡುವಿಕೆಯ ಕೀರ್ತಿಯನ್ನು ನೂತನ ಸಂಸ್ಕಾರದಿಂದ ಪುನಃ ಸಂಪಾದಿಸಿ ಮುಂದೆ ಬಂದು ಜನಾನುರಾಗಕ್ಕೆ ಪಾತ್ರರಾದವರಲ್ಲಿ ಬಲಿಪ ನಾರಾಯಣ ಭಾಗವತರೊಬ್ಬರೇ ಆಗಿರುವರು. ಆದರೆ ಕೀರ್ತಿಶೇಷ ಲಕ್ಷ್ಮಿನಾರಾಯಣ ಕವಿಯು ಕೂಡಾ ತನ್ನ ಈ ಅಮೌಲ್ಯ ಪ್ರಸಂಗಗಳೆರಡನ್ನು ನಾಟಕ ಸಂವಿಧಾನದಂತೆ ಅಂಕಗಳಾಗಿ ವಿಭಾಗಿಸದೆ ಇತರ ಎಲ್ಲಾ ವಿಷಯಗಳಲ್ಲಿಯೂ ಲಾಕ್ಷಣಿಕವಾಗಿ ಬರೆದಿರುವನಾದರೂ, ಶಿಷ್ಟಾಚಾರಪದ್ಧತಿಯಲ್ಲಿ ಪೂರ್ವಕವಿಯಾದ ಪಾರ್ಥಿ ಸುಬ್ಬನನ್ನೇ ಹಿಂಬಾಲಿಸಿರುವನು.

## ಯಕ್ಷಗಾನದ ಛಂದಸ್ಸುಗಳು

ಯಕ್ಷಗಾನ ಪ್ರಸಂಗಗಳಲ್ಲಿ ಬರೆದಿರುವ ಭಾಮಿನಿ, ವಾರ್ಧಿಕ, ಕಂದ, ವೃತ್ತ ಜಾತಿಗೆ ಸೇರಿದ ಪದ್ಯಗಳೆಲ್ಲಾ ನಾಗವರ್ಮನ ಛಂದಸ್ಸಿನಲ್ಲಿ ವಿವರಿಸಿದವುಗಳೇ ಅಲ್ಲದೆ ಬೇರೆಯಲ್ಲ. ಯಕ್ಷಗಾನದಝಂಪೆ, ತ್ರಿಪುಟಮಟ್ಟೆಗಳೆಂಬ ತಾಳದ ಪದ್ಯಗಳು ವಾರ್ಧಕ, ಭಾಮಿನಿ, ಶರ, ಷಟ್ಪದಿಗಳಿಂದ ಹುಟ್ಟಿದವುಗಳಾಗಿರುವವು. ಉದಾ: —

### ರಾಗ. ಸೌರಾಷ್ಟ್ರ ತ್ರಿವುಡೆ ತಾಳ.

ಪದ॥ ಕ್ಷಿತಿಪ ಜನಮೇಜಯಗೆ ಭಾರತ । ಕಥೆಯ ವೈಶಂಪಾಯ ಮುನಿಪನು । ಶ್ರುತಗೊಳಿಸುತಿರಲೆಂದನಾ ಋಷಿ ಪತಿಗೆ ನಮಿಸೀ ॥ ೧ ॥

ಇದು 3-4 ಎಂಬ ಭಾಮಿನಿ ಷಟ್ಪದಿಯ ಪ್ರಸ್ತಾರ ವಾಗಿದ್ದು ಮೊದಲೆರಡನೆಯ ಪಾದಗಳಲ್ಲಿ ಮನುಸಂಖ್ಯಾ (14) ಮಾತ್ರೆಗಳಿಂದಲೂ, 3ನೇ ಪಾದದಲ್ಲಿ ಇದೇ ಪ್ರಸ್ತಾರ ಕ್ರಮದಿಂದ 21 ಮಾತ್ರೆಗಳೂ ಇದ್ದು, 49 ಮಾತ್ರೆಗಳಿಂದ ಕೂಡಿದ 3 ಚರಣಗಳುಳ್ಳ ಭಾಮಿನಿಷಟ್ಪದಿಯ ಅರ್ಧಪದವಾಗುವುದು. ಭಾಮಿನಿಷಟ್ಪದಿಗೂ ಇದಕ್ಕೂ ಇರುವ ವ್ಯತ್ಯಾಸಗಳಂದರೆ ಭಾ. ಷ. ಯ. 3-6 ನೇಯ ಪಾದಗಳಲ್ಲಿ ಕೊನೆಯ ಗುರು ಕೂಡಿ 23 ಮಾತ್ರೆಗಳೂ ಇಡೀ ಪದದಲ್ಲಿ 6 ಚರಣಗಳೂ ಇದರಲ್ಲಿ 102 ಮಾತ್ರೆಗಳೂ ಇರುವುದು. ಗುರು ಸರ್ವತ್ರ ಪಾದಾಂತ ದಲ್ಲಿರಬೇಕೆಂಬ ನಿಯಮದಂತೆ ಈ ತಾಳದ ಪದ್ಯ ದಲ್ಲಿಯೂ ಇರುವುದು. ಆದರೆ ಭಾಮಿನಿಷಟ್ಪದಿಯ 3–6ನೇ ಪಾದಗಳಿಗೂ ಈ ತಾಳದ 3ನೇಯ ಪಾದದ ಪದಕ್ಕೂ 2 ಮಾತ್ರೆಗಳುಳ್ಳ ಪಾದಾಂತದ ಒಂದು ಗುರು ವಕ್ಷರದ ವತ್ಯಾಸವಲ್ಲದೆ ಬೇರೇನೂ ಇದ್ದಂತೆ ತೋರು ವುದಿಲ್ಲ. ಅರ್ಥಾತ್ ಈ ತಾಳದ 3ನೇಯ ಪಾದದ ಕಡೆಯ 4 ಮಾತ್ರೆಗಳುಳ್ಳ ಪ್ರಸ್ತಾರದಲ್ಲಿರುವ ಕೊನೆಯ "ಗುರು" ಅಕ್ಷರವು ಭಾಮಿನಿಷಟ್ಪದಿಯ 3–6ನೇ ಪಾದ ಗಳ ಕೊನೆಯ ಪ್ರಸ್ತಾರಗಳಲ್ಲಾದರೆ ಪ್ರಸ್ತಾರ ಕ್ರಮ ದಂತೆ ಲಘುವಾಗಿರಬೇಕಾಗಿರುವುದು. ಇದನ್ನು ವ್ಯತ್ಯಾಸ ವೆಂದು ಹೇಳಲಾಗುವುದಿಲ್ಲ. ಆದ್ದರಿಂದ ಈ ತ್ರಿವುಡೆ ತಾಳವು ಭಾಮಿನಿಷಟ್ಪದಿಯ ಪ್ರತಿಬಿಂಬವೇ ಆಗಿರುವುದು.

### ರಾಗ. ಕಾಂಬೋದಿ ಝಂಪೆತಾಳ.

ಪದ॥ ಕೇಳು ಯದುಕುಲ ಚಂದ್ರ ಶೀಲನಿಧಿ, ನಾ ಬಂದು । ಪೇಳುವುದ, ನೆಲ್ಲ ಲಾಲಿಸುತಾ ॥ ಖೂಳ ಪಾಂಡವ ರೊಡನೆ, ಕಲಹಗೈವರೆ ನಮ್ಮ । ಪಾಳಯಕೆ ಕೃಷ್ಣಬಹ ನೆನುತಾ ॥ ೧ ॥

ಈ ತಾಳದ ಪದ್ಯದಲ್ಲಿ 4 ಪಾದಗಳಿರುವವು. ಮೊದ ಲನೆಯ ಪಾದದಲ್ಲಿ 5 ಮಾತ್ರೆಗಳುಳ್ಳ 4 ಪ್ರಸ್ತಾರಗಳಿರು ವವು. ಅಂದರೆ: 20 ಮಾತ್ರೆಗಳೂ, 2ನೇಯ ಪಾದದಲ್ಲಿ 5 ಮಾತ್ರೆಗಳುಳ್ಳ 2 ಪ್ರಸ್ತಾರಗಳೂ, 4 ಮಾತ್ರೆಗಳ ಒಂದು ಪ್ರಸ್ತಾರವೂ ಇದ್ದು ಜುಮ್ಲಾ 14 ಮಾತ್ರೆಗಳೂ ಉಳ್ಳದ್ದಾಗಿ ಪಾದಾಂತದ ಅಕ್ಷರವು ಗುರುವಾಗಿರು ವುದು. ಇದೇ ರೀತಿ ಇನ್ನೆರಡು ಪಾದಗಳೂ ಇದ್ದಿರುವವು ಒಟ್ಟು ಒಂದು ಪದ್ಯದಲ್ಲಿ 68 ಮಾತ್ರೆಗಳು ಇರುವವು. ವಾರ್ಧಿಕಷಟ್ಪದಿಯ ½ ಪದ್ಯದಲ್ಲಿ 72 ಮಾತ್ರೆಗಳು ಇದ್ದಿರುವವು. ಅಂದರೆ: 2-4ನೆಯ ಚರಣಗಳ ಪೂರ್ವಾರ್ಧ ಮತ್ತು ಉತ್ತರಾರ್ಧದ ಪಾದಾಂತಗಳಲ್ಲಿ ವಾರ್ಧಿಕಷಟ್ಪದಿಯ ಪ್ರಸ್ತಾರ ಕ್ರಮಕ್ಕೆ ಒಂದು ಪ್ರಸ್ತಾರವೂ ಒಂದು ಮಾತ್ರೆಯೂ ಕಡಮೆಯಾಗುವುದು. ಇದು ಈ ತಾಳದ ನಿರ್ಮಾಣದ ಅನುಕೂಲತೆಗಾಗಿ ಕಡಿಮೆಯಾದದ್ದಾಗಿರುತ್ತದೆ. ಅಲ್ಲದೆ ಈ ತಾಳವು ಬಾಕಿ ವಿಷಯಗಳಲ್ಲಿ ವಾರ್ಧಿಕಷಟ್ಪದಿಯ ಪ್ರಸ್ತಾರ ಕ್ರಮ ವನ್ನೇ ಅವಲಂಬಿಸಿರುವುದರಿಂದ ಹೇಗೆ ರಾಗ, ಸೌರಾಷ್ಟ್ರ, ತ್ರಿವುಡೆತಾಳವು, ಭಾಮಿನಿಷಟ್ಪದಿಯ ಯಥಾ ಕ್ರಮ ವಾಗಿ ಹುಟ್ಟಿರುವುದೋ ಅದರಂತೆಯೇ ಈ ತಾಳವು ವಾರ್ಧಿಕಷಟ್ಪದಿಯಿಂದ ಹುಟ್ಟಿದ್ದಾಗಿರುತ್ತದೆ.

### ರಾಗ. ಮಾರವಿ ಏಕತಾಳ:—

ಪದ॥ ಮಾರವಿ ಏಕಕೆ । ಸೇರುವ ಚರಣಗ । ಳಾರಹವ ವುಗಳಲೀ ॥ ಮೂರಾರಕೆ ದಶ । ಸಾರುವು ವುಳಿದಕೆ । ವಾರಣ ಮಾತ್ರೆಗಳೂ ॥——

ಈ ತಾಳದ ಪದಗಳಲ್ಲಿ 6 ಚರಣಗಳೂ, ಈ ಚರಣ ಗಳಲ್ಲಿ 3 ಮತ್ತು 6ನೇ ಚರಣದ ಪದಗಳಲ್ಲಿ 10–10 ಮಾತ್ರೆಗಳೂ 1-2-4-5ನೇ ಚರಣಗಳಲ್ಲಿ 8–8 ಮಾತ್ರೆ ಗಳೂ ಇರುವುವು. ಉದಾ: —

ಪದ॥ ಹರಿಯೇ ನಿನ್ನೊಳ । ಗರಿಯಲು ರ್ಮವ । ಭರದಿಂದೈದಿಹೆವೇನ್ ॥ ಮೆರಸುವ ಪಾರ್ಥಿವ । ರುರುತರ ಪಂಥದ । ದುರಕೀರ್ವರಿಗಿನ್ನೂ ॥ ೧ ॥ (ಕೃ. ಸಂ)

### ರಾಗ. ಸುರಟಿ ಏಕತಾಳ:—

ಪದ॥ ಆರಡಿಯೆರಡರೊಳೂ । ದಶ ದಶ । ಸೇರುವ ಮಾತ್ರೆಗಳೂ ॥ ತೋರುವ ವರಣ । ವೀರೆರಡುಳಿದಕೆ । ಸಾರುವ ದೆಂಟರೊಳ್ಸುರಟ ಏಕಕೆ ॥ ೧ ॥

ಉದಾ: – ಪದ॥ ಕೋಮಲಾಂಗಿ ಕೇಳೇ । ಮದಗಜ । ಗಾಮಿನಿ ಪಾಂಚಾಲೇ ॥ ಕಾಮುಕ ಕುರುನೃಪ । ನಾಮುಪನಿಳೆ ಯಕೆ । ಸ್ವಾಮಿಯ ಸಂಧಿಗೆ । ಭೂಮಿಪ ಕಳುಹುವ ॥ ೧॥

(ಕೃ. ಸಂ.)

ಈ ಪದ್ಯದಲ್ಲಿ 6 ಪಾದಗಳೂ ಒಂದು ವರಣವೂ ಇದೆ. "ಮದಗಜ" ಎಂಬುದೇ ಇದರಲ್ಲಿಯ ವರಣ. 1 2ನೇಯ ಪಾದಗಳಲ್ಲಿ 10–10 ಮಾತ್ರೆಗಳೂ, ಇವುಗಳ ಮಧ್ಯೆ 4 ಮಾತ್ರೆಗಳುಳ್ಳ ಒಂದು ವರಣವೂ, 3–4–5–6ನೇ ಪಾದಗಳಲ್ಲಿ 8–8 ಮಾತ್ರೆಗಳೂ ಅಡಕವಾಗಿರುವವು. ಇದೇ ರೀತಿ – ಬೇಗಡೆ ಅಷ್ಟತಾಳ, ಕೇತಾರಗೌಳ ಅಷ್ಟತಾಳ, ಭೈರವಿ, ಝಂಪೆ, ಮಧ್ಯಮಾವತಿ ಏಕತಾಳ, ಭೈರವಿ ತ್ರಿವುಡೆ, ಭೈರವಿ ಏಕತಾಳ, ಸಾಂಗತ್ಯ, ರೂಪಕ, ಮುಂತಾದ ತಾಳಗಳ, ಪದ್ಯಗಳು ಪಾದ ಸಂಖ್ಯೆಯಿಂದಲೂ, ವರಣ ಸಂಖ್ಯೆಯಿಂದಲೂ, ಆಯಾಯ ಪಾದ ಮತ್ತು ವರಣಗಳಲ್ಲಿರಬೇಕಾದ ಮಾತ್ರಾಸಂಖ್ಯೆಯಿಂದಲೂ, ಷಟ್ಪದ ಜಾತಿಗೆ ಸೇರಿದವುಗಳಾಗಿ ಮಾತ್ರಾಛಂದಸ್ಸಿನಿಂದ ಬದ್ಧವಾದುವುಗಳಾಗಿಯೂ ಪ್ರಾಸಾದಿನಿಯಮಗಳಿಂದ ಸೇರಿಕೊಂಡವುಗಳಾಗಿರುವುವು. ಅಪರೂಪವಾಗಿ ಕೆಲವು ಪದ್ಯಗಳು ಸಮವೃತ್ತಜಾತಿಗೆ ಸೇರಿದ ವರ್ಣಛಂದಸ್ಸಿನಿಂದಲೂ ಕೂಡಿಕೊಂಡವುಗಳಾಗಿರುತ್ತವೆ. ಆದ್ದರಿಂದ ಸಾಹಿತ್ಯದೃಷ್ಟಿಯಲ್ಲಿ ನೋಡಿದರೂ ಯಕ್ಷಗಾನವು ಬಹುಮಟ್ಟಿಗೆ ಕಾವ್ಯಲಕ್ಷಣಕ್ಕೆ ಪ್ರತಿಬಂಧವಿಲ್ಲದ್ದಾಗಿರುವುದರಿಂದ ಕರ್ಣಾಟಕ ವಾಙ್ಮಯ ಕ್ಷೇತ್ರದಲ್ಲಿ ಪ್ರಾಥಮಿಕ ಶಿಕ್ಷಣಕ್ಕೂ, ಜನಾನುರಾಗಕ್ಕೂ ಸರ್ವೋತ್ಕೃಷ್ಟನಾದ ಲಲಿತಕಲೆಯೆಂದು ನಿರ್ಧರಿಸಬಹುದು.

ಕ್ರಿ. ಶ. 1889ರಲ್ಲಿ
ಸ್ಥಾಪಿತವಾದದ್ದು.
ಈ ಪುಸ್ತಕದ 33–48 ಮತ್ತು 125–132 ಪುಟಗಳು
ಧರ್ಮಪ್ರಕಾಶ ಛಾಪಖಾನೆ
ಮಂಗಳೂರು.
ಇಲ್ಲಿ ಪ್ರಕಟಗೊಂಡವು

# ವಿಮೋಚನೆ

**ನಾಗಣ್ಣನ ಒಂದು ಕಥೆ.**

ಬರೆದವ:—ಪಡುಕೋಣೆ ರಮಾನಂದ, ಎಮ್. ಎ.

[**ಒಂದು ವಿಜ್ಞಾಪನೆ:** —ನಾಗಣ್ಣನು **ಕನ್ನಡ ಸಹಕಾರಿಯ** ೬ನೆಯ ಸಂಪುಟದ ೧೨ನೆಯ ಸಂಚಿಕೆಯಲ್ಲಿ ಮೊದಲು ತಲೆದೋರಿದವನು. ತನ್ನ ಮಾತುಕಥೆಗಳನ್ನೆಲ್ಲ ಅರವಿಂದನು ಸಂಗ್ರಹಿಸಿ ಬರೆದ ಕಾಗದದ ಕಟ್ಟನ್ನು ತಾನು ಹೇಗೆ ಬಯಲಿಗೆ ತಂದೆನೆಂದು ಅವನು ಅಲ್ಲಿ ಸವಿಸ್ತಾರವಾಗಿ ಹೇಳಿರುವನು. ಆ ಕಟ್ಟಿನಿಂದ ಹೆಕ್ಕಿ ತೆಗೆದ ಒಂದು ಕಥೆಯು ಇದು. ನಾಗಣ್ಣನು ಮಂಗಳೂರ ನಿವಾಸಿಯಾದುದರಿಂದ ಅವನ ಈ ಕಥೆಯು ಸಹಜವಾಗಿ ಮಂಗಳೂರಿಗೆ ಸಂಬಂಧಿಸಿದ್ದಾಗಿರುತ್ತದೆ. ಆದರೆ ನಾಗಣ್ಣ, ಅರವಿಂದ, ಕೇಸರಿ ಹೇಗೆ ಕಲ್ಪಿತವ್ಯಕ್ತಿಗಳಾಗಿವೆಯೋ ಹಾಗೆಯೇ ಈ ಕಥೆಯಲ್ಲಿ ಬರುವ ಪಾತ್ರವರ್ಗವೂ ಕೇವಲ ಕಲ್ಪಿತವಾದುದು. ಸನ್ ೧೯೧೯ರಲ್ಲಿ ನಮ್ಮ ಜಿಲ್ಲೆಯಲ್ಲಿ ಪರಿಣಮಿಸಿದ ಬರಗಾಲದ ಮೇಲೆ ಈ ಕಥೆಯು ಆಧರಿಸಿಕೊಂಡಿದ್ದರೂ, ಇದರಲ್ಲಿ ಬರೆದ ಸಂಗತಿಗಳೆಲ್ಲವೂ ಕೇವಲ ಕಲ್ಪಿತವಾದುವುಗಳಾಗಿವೆ. ಆದುದರಿಂದ ಈ ಕಥೆಯಲ್ಲಿ ಬರುವ ಸಂಗತಿಗಳನ್ನು ಅಥವಾ ಪಾತ್ರವರ್ಗದವರನ್ನು ನಿಜವಾಗಿ ನಡೆದ ಸಂಗತಿಗಳನ್ನು ಅಥವಾ ವ್ಯಕ್ತಿಗಳನ್ನುದ್ದೇಶಿಸಿ ಬರೆದಂತೆ ವಾಚಕಮಹಾಶಯರು ಎಂದೂ ತಿಳಿದುಕೊಳ್ಳಬಾರದೆಂದು ವಿನಯಪೂರ್ವಕವಾದ ವಿನಂತಿ.

**ಬರೆದವ.**

ಓದೋಣವೆಂದರೆ ಕತ್ತಲಾಗಿತ್ತು. ದೀಪ ಹಚ್ಚೋಣವೆಂದರೆ ಬೆಳಕಿತ್ತು. ತಿರುಗಾಡಲಿಕ್ಕೆ ಹೋಗೋಣವೆಂದರೆ ಹೊತ್ತು ಮೀರಿತ್ತು. ರಾಗದ ಪೆಟ್ಟಿಗೆಯನ್ನಾದರೂ ಬಾರಿಸಿ ಕಾಲಹರಣ ಮಾಡೋಣವೆಂದರೆ ಕೇಸರಿಯು ಆಗಲೇ 'ಆ ಕರಕರೆ ಈಗ ಬೇಡ' ಎಂದು ಆಜ್ಞಾಪಿಸಿದ್ದಳು. ಹೀಗಾಗಿ ಏನು ಮಾಡಬೇಕೆಂದು ತೋಚದೆ ಕುರ್ಚಿಯಲ್ಲಿ ಚಡಪಡಿಸುತ್ತಾ ಕುಳಿತಿದ್ದೆನು. ಕೇಸರಿಯಾದರೋ ಸ್ವಲ್ಪ ದೂರದಲ್ಲಿ ತನ್ನ ಕೆನ್ನೆಯನ್ನು ತನ್ನ ಕೈಯಲ್ಲಿ ಆನಿಸಿ ಕುಳಿತುಕೊಂಡು ಕಿಟಕಿಯ ಬಳಿಯಲ್ಲಿರುವ ಮಾವಿನ ಮರಕ್ಕೆ ಎಷ್ಟು ಎಲೆಗಳಿವೆ ಎಂದು ಲೆಕ್ಕಹಾಕುವುದರಲ್ಲಿ ಮಗ್ನಳಾಗಿದ್ದಳು.

ಅಷ್ಟರೊಳಗೆ ನಾಗಣ್ಣನು ಬಂದೇ ಬಿಟ್ಟನು.

'ಏನು, ನಾಗಣ್ಣ, ಇಷ್ಟು ಬೇಗ ಬಂದದ್ದೇನು? ಇನ್ನೂ ಸ್ವಲ್ಪ ತಡಮಾಡಿ ಬರಬಹುದಿತ್ತಲ್ಲವೇ?' ಎಂದು ಕೇಸರಿಯು ಕೇಳಿದಳು. ಅದನ್ನೇ ನಾನೂ ನಾಗಣ್ಣನ ಹತ್ತಿರ ಕೇಳಬೇಕೆಂದಿದ್ದೆನು.

'ಉಪಾಯವಿಲ್ಲ, ಕೇಸರೀ! ಇಲ್ಲಿ ಬರಬೇಕೆಂದು ನಾನು ನನ್ನ ಗೂಡಿನಿಂದ ಆಗಲೇ ಹೊರಟದ್ದೆನು. ಆದರೆ ದಾರಿಯಲ್ಲಿ ನಮ್ಮ ಸರ್ವೋತ್ತಮನಾಯಕನು ಸಿಕ್ಕಿದನು ...........'

'ನಮ್ಮ ಸರ್ವೋತ್ತಮ ನಾಯಕನು! ಯಾರಪ್ಪಾ, ಅದು?'

'ಏನು, ನಮ್ಮೂರಿನ ಸರ್ವೋತ್ತಮ ನಾಯಕನ ಹೆಸರನ್ನು ಕೇಳಲಿಲ್ಲವೇ? ಇದು ನಿಜವಾಗಿಯೂ ಆಶ್ಚರ್ಯವು. ಅವನಂತಹ ಸದ್ಗುಣಶಾಲಿಯಾದ ಬೇರೊಬ್ಬ ಮನುಷ್ಯನನ್ನು ನಾನು ಇನ್ನೂ ನೋಡಬೇಕಷ್ಟೇ—.'

'ಮನೆಯ ಗುದಾಣಗಳಲ್ಲಿ ಹಣ ತುಂಬಿಸಿದವರಲ್ಲೊಬ್ಬರೆಂದು ಕಾಣುತ್ತದೆ.' . ಎಂದು ಕೇಸರಿಯನ್ನು ನೋಡಿ ಹೇಳಿದೆನು.

'ಹೌದು, ಆದರೆ ಧನಾಢ್ಯರಾದರೇನು? ಗರೀಬನಾದ ನನ್ನಂಥವರ ಪರಮ ಮಿತ್ರನು. ಅಂತಹ ಸದ್ಗುಣಶಾಲಿಯ

ಕೂಡೆ ಲಕ್ಷ್ಮೀದೇವಿಯೂ ಕೂಡಿದರೆ ಬಂಗಾರಕ್ಕೆ ಒಪ್ಪ ಹಾಕಿದಂತಾಗುವುದಿಲ್ಲವೇ?'

ನಾಗಣ್ಣನು ಕುರ್ಚಿಯ ಮೇಲೆ ನಮ್ಮಿಬ್ಬರ ಹತ್ತಿರ ಕುಳಿತುಕೊಂಡನು. ಗ್ರಮೋಫೋನಿಗೆ 'ಕೀ' ಕೊಟ್ಟಂತಾಯಿತು. ಇನ್ನು ಕೇಳುವುದು ಮಾತ್ರ ನಮ್ಮ ಕರ್ತವ್ಯವೆಂದು ನಾವಿಬ್ಬರೂ ಸುಮ್ಮಗಾದೆವು.

'ಆದರೆ ಮಕ್ಕಳೇ—'

ನನಗೆ ಇಪ್ಪತ್ತಮೂರು ವಯಸ್ಸು, ಕೇಸರಿಗೆ ಹದಿನೆಂಟು. ಆದರೂ ನಮ್ಮನ್ನು ಮಕ್ಕಳೆಂತಲೇ ಸಂಬೋಧಿಸುವುದು ನಾಗಣ್ಣನ ಒಂದು ಸಾಂಪ್ರದಾಯವಾಗಿತ್ತು.

'ಮಕ್ಕಳೇ', ನಾಗಣ್ಣನು ಮುಂದರಿಸಿದನು, 'ಸರ್ವೋತ್ತಮ ನಾಯಕನು ಯಾವಾಗಲೂ ಹೀಗಿರಲಿಲ್ಲ. ಎಂಟು ವರ್ಷಗಳ ಕೆಳಗೆ ಅವನು ಕಡುಲೋಭಿಯೆಂದೂ ಲಕ್ಷ್ಮಿಯ ದಾಸಾನುದಾಸನೆಂದೂ ಎಲ್ಲರ ಅವಹೇಳನೆಗೂ ತುಚ್ಛೀಕಾರಕ್ಕೂ ಪಾತ್ರನಾಗಿದ್ದನು. ಹೆಚ್ಚೇಕೆ, ಎಂಟು ವರ್ಷಗಳ ಕೆಳಗೆ ಬಡಜನರ ರಕ್ತವನ್ನೇ ಹೀರಿಕೊಂಡು ಬಾಳುವ ಒಂದು ಕೊಬ್ಬಿದ ತಗಣೆಯೆಂದು ನಾನೇ ಅವನನ್ನು ಎಷ್ಟೋ ಸಾರಿ ದೂಷಿಸಿದ್ದೇನೆ. ನಿಜವಾಗಿಯೂ ಎಂಟು ವರ್ಷಗಳ ಕೆಳಗೆ ಅವನು ಹಾಗೆಯೇ ಇದ್ದನು. ಆದರೆ ಮಾನುಷವ್ಯವಹಾರವು ವಿಚಿತ್ರವಾದುದು........ಕೇಸರೀ, ಹುಟ್ಟಿದ ಮೇಲೆ ಸಾವು ನಮಗೆ ಒಂದೇ ಸಾರಿ ಒದಗುವುದೆಂದು ನಾವು ಸಾಧಾರಣವಾಗಿ ತಿಳಿದುಕೊಳ್ಳುತ್ತೇವೆ. ಆದರೆ ಕ್ಷಣಕ್ಷಣಕ್ಕೂ ನಾವು ಸತ್ತು ಪುನರ್ಜನ್ಮವನ್ನು ಹೊಂದುತ್ತೇವೆಂದು ನಾವು ಅರಿಯೆವು. ಅಷ್ಟು ಸರಳವಾದ ರಾಮನಾಮವನ್ನು ಕೂಡ ಉಚ್ಚರಿಸಲಿಕ್ಕಾಗದ ಆ ಖೂಳನಾದ ಕೊಳ್ಳನೂ ರಾಮನಾಮದಲ್ಲಿ ಯಾವಾಗಲೂ ಮಗ್ನನಾಗಿದ್ದ ಆ ದಿವ್ಯ ಮಹರ್ಷಿ ವಾಲ್ಮೀಕಿಯೂ ಎಂದಾದರೂ ಒಬ್ಬನಾಗಿದ್ದನೇ? ಇಲ್ಲ. ಅವರಿಬ್ಬರೂ ಬೇರೆ ಬೇರೆ ಪುರುಷರು. ಹಾಗೆಯೇ ಎಂಟು ವರ್ಷಗಳ ಕೆಳಗೆ ಇದ್ದ ಸರ್ವೋತ್ತಮ ನಾಯಕನೂ ಎಂಟು ವರ್ಷಗಳಿಂದೀಚೆಗೆ ಅದೇ ಜಡದೇಹದಲ್ಲಿರುವ ಸರ್ವೋತ್ತಮ ನಾಯಕನೂ ಬೇರೆ ಬೇರೆ ಪುರುಷರು. ಇದರಲ್ಲಿ ವಿಚಿತ್ರವೇನು?'

ಪುರಾಣದ ಸಮಸ್ಯೆಯನ್ನು ಕೇಳಿ ನನಗೆ ಸ್ವಲ್ಪ ನಗು ಬಂತು. 'ನಾಗಣ್ಣಾ, ಆ ಖೂಳನಾದ ಕೊಳ್ಳನಿಗೆ ರಾಮನಾಮವು ಪುನರ್ಜನ್ಮವನ್ನು ಕೊಟ್ಟಿರಬಹುದು. ಆದರೆ ಎಂಟು ವರ್ಷಗಳ ಕೆಳಗೆ ಬಡಜನರ ರಕ್ತವನ್ನೇ ಹೀರಿಕೊಂಡು ಕೊಬ್ಬಿದ ತಗಣೆಯಾಗಿದ್ದ ನಿನ್ನ—ಅಲ್ಲ, **ನಮ್ಮ**— ಸರ್ವೋತ್ತಮ ನಾಯಕರಿಗೆ ಯಾರು ಪುನರ್ಜನ್ಮ ಕೊಟ್ಟರು?'

'ಅದನ್ನು ಕೇಳುತ್ತೀಯೋ? ಸನ್ ೧೯೧೯ರಲ್ಲಿ ನಮ್ಮ ಜಿಲ್ಲೆಯಲ್ಲಿ ಅಕ್ಕಿಗೆ ಒದಗಿದ ಘೋರ ಬರಗಾಲವು! ಮತ್ತು ಆಗ್ಗೆ ಇನ್ನೂ ತೊಟ್ಟಿಲೊಳಗೆ ಮಲಗಿದ್ದ ಒಂದು ವರ್ಷದ ಒಬ್ಬ ಬಾಲಿಕೆಯು!'

'ವಿಚಿತ್ರವು!'

'ಪರಶುರಾಮನ ಸೃಷ್ಟಿಯಾದ ನಮ್ಮ ಜಿಲ್ಲೆಯಲ್ಲಿ ಬರಗಾಲವೇ? ಮತ್ತೇನು ಹೇಳುತ್ತೀ, ನಾಗಣ್ಣ?'

'ಕೇಸರೀ! ಕಲಿಯುಗದಲ್ಲಿ ಜನರ ನೆನಪು ಕ್ಷೀಣವಾಗುತ್ತಾ ಬರುವುದು ಕಲಿಯುಗದೊಂದು ವಿಶೇಷವಾದ ಲಕ್ಷಣವು. ಹೀಗಿರುವಾಗ್ಗೆ ಎಂಟು ವರ್ಷಗಳ ಕೆಳಗೆ ಈ ಜಿಲ್ಲೆಯಲ್ಲಿ ಸಂಭವಿಸಿದ ಘೋರ ಬರಗಾಲದ ನೆನಪು ನಿಮಗಿರುವುದು ಹೇಗೆ?'

'ನಾಗಣ್ಣ, ನೀನು ಕೇಸರಿಯನ್ನು ದೂರಿ ಪ್ರಯೋಜನವಿಲ್ಲ. ಆಗ್ಗೆ ನಾವಿಬ್ಬರೂ ಮದ್ರಾಸಿನಲ್ಲಿದ್ದೆವು. ದಕ್ಷಿಣ ಕನ್ನಡದ ಗಂಧಗಾಳಿ ಕೂಡ ನಮಗೆ ಸೋಂಕಿದ್ದಿಲ್ಲ. ನಾನಾದರೋ ವಾರ್ತಾಪತ್ರಿಕೆಗಳಿಂದ ಈ ಜಿಲ್ಲೆಯಲ್ಲೊಂದು ಅಪರೂಪವಾದ ಬರಗಾಲವು ಸಂಭವಿಸಿತೆಂದು ಓದಿ ತಿಳಿದಿದ್ದೆನು. ಅಷ್ಟಾದರೂ ಪ್ರತಿವರ್ಷವೂ ಅನಂತಪುರ, ಬಳ್ಳಾರಿ ಮೊದಲಾದ ಜಿಲ್ಲೆಗಳಲ್ಲಿ ಸಂಭವಿಸುತ್ತಿರುವ ಬರಗಾಲದ ಪರಿಣಾಮವು ಈ ಜಿಲ್ಲೆಯಲ್ಲಿ ಮುಟ್ಟಲಿಲ್ಲವೆಂತಲೇ ಭಾವಿಸಿದ್ದೆನು—.'

'ಪರಿಣಾಮ ಗಿರಿಣಾಮ ನನಗೇನೂ ತಿಳಿಯದು. ಅಲ್ಪಕಾಲದಲ್ಲಿಯೇ ಜಿಲ್ಲೆಯೊಳಗೆಲ್ಲಾ ಕ್ಷಾಮದೇವತೆಯು ಅತ್ಯಂತ ಭಯಂಕರಳಾಗಿ ವ್ಯಾಪಿಸಿಕೊಂಡಳು. ಐದಾರು ರೂಪಾಯಿಗಳೊಳಗೆ ಸಿಗುತಿದ್ದ ಅಕ್ಕಿಮುಡಿಯೊಂದು ಇಪ್ಪತ್ತು ರೂಪಾಯಿ ಕೊಟ್ಟರೂ ಸಿಗಲಾರದೆ ಹೋಯಿತು. ಯುದ್ಧದ ದೆಸೆಯಿಂದ ನಾಗಾಲೋಟದಿಂದ ಏರಿದ ಜಿನಸುದವಸಗಳ ಕ್ರಯವು ಇನ್ನೂ ಒಂದಕ್ಕೆ ನಾಲ್ಕು ಬಾರಿಯಾಗಿ ಏರಿತು. ಹುಟ್ಟಿದಾರಭ್ಯದಿಂದ ಕ್ಷಾಮವೆಂದರೇನೆಂದರಿಯದ ನನ್ನಂಥವರಿಗೆ ಕ್ಷಾಮದೇವತೆಯು ಅತ್ಯಂತ ಗೆಳೆತನ ಲಭಿಸಿತು. ದಿನಕ್ಕೆ ಮೂರು ಸಾರಿ ಯಥೇಷ್ಟ ಉಂಡು

ಸುಖದಿಂದ ಜೀವಿಸುವಂಥವರಿಗೆ ದಿನಕ್ಕೊಂದು ಬಾರಿ ಊಟಮಾಡುವುದು ಕಷ್ಟವಾಯಿತು. ಹೀಗಿರುವಾಗ ದಿನಗೂಲಿಯವರ ಪಾಡೇನು? ನನ್ನಂತಹ ಮೂದಿಗೂಬೆಗಳ ಪಾಡೇನು? ದೊಡ್ಡ ದೊಡ್ಡ ಕುಟುಂಬಗಳನ್ನು ಬೆಳೆಯಿಸಿಕೊಂಡು ತಿಂಗಳಿಗೆ ಹತ್ತಿಪ್ಪತ್ತು ರೂಪಾಯಿಯೊಳಗೆ ಜೀವಿಸಬೇಕಾಗಿದ್ದ ಬಡ ಗೃಹಸ್ಥರ ಪಾಡೇನು? ಅರವಿಂದಾ, ನೀನೇ ಆಲೋಚಿಸು!'

ಆಲೋಚಿಸಲಿಕ್ಕೆ ಕೇಸರಿಯು ನನಗೆ ಆಸ್ಪದವನ್ನು ಕೊಡಲಿಲ್ಲ. ಬರಗಾಲದ ಕಾರಣವನ್ನೇ ಅವಳು ನಾಗಣ್ಣನ ಕೂಡೆ ಕೇಳಿದಳು.

'ಕಾರಣವೇ? ಕಾರಣವೇನು—ದೈವ ಇಚ್ಛೆಯೇ! ಮತ್ತೇನು?—ಅಕ್ಕಿಯ ಬೆಳೆಗೆ ಅತಿ ಪ್ರಾಮುಖ್ಯವಾದ ಮಳೆಯೇ ಕ್ಲೃಪ್ತಸಮಯದಲ್ಲಿ ಬಾರದಿದ್ದರೆ ರೈತರು ಬೆಳೆಯನ್ನು ಮಾಡುವುದರಲ್ಲಿ ಎಷ್ಟು ಚಟುವಟಿಕೆಯುಳ್ಳವರಾದರೂ ಪ್ರಯೋಜನವೇನು? ಸಾಗುವಳಿಯ ಕೆಲಸವು ಯೋಗ್ಯರೀತಿಯಲ್ಲಿ ಕೈಗೂಡಿ ಬರುವಂತೆ ಮಳೆಗಾಲದ ನೀರನ್ನು ಒಟ್ಟುಗೂಡಿಸುವಂತಹ ದೊಡ್ಡ ದೊಡ್ಡ ಕೆರೆಗಳೂ, ಕಾಲುವೆಗಳೂ ಮುಂತಾದ ರೈತರ ಸಾಹಿತ್ಯಗಳು ನಮ್ಮ ಜಿಲ್ಲೆಯಲ್ಲಿ ಇನ್ನೂ ಇಲ್ಲವಷ್ಟೇ?—

ಕ್ಲೃಪ್ತಸಮಯದಲ್ಲಿ ಮಳೆ ಬಾರದೆ ಇದ್ದುದನ್ನು ನೋಡಿ ನಾವೆಲ್ಲರೂ ಹತಾಶರಾದೆವು. ಆಗಲೇ ಕ್ಷಾಮದೇವತೆಯು ತನ್ನ ಭೀಕರವಾದ ನೋಟವನ್ನು ನಮ್ಮ ಕಡೆಗೆ ತಿರುಗಿಸಿದಂತೆ ತೋರಿ ಬಂತು. ರೈತರಿಗಾದರೋ ಕ್ಷಾಮದೇವತೆಯೊಂದಿಗೆ ಇನ್ನೊಂದು ಭಯಂಕರವಾದ ದೇವತೆಯೂ ತೋರಿ ಬಂದಳು. ಅವಳ್ಯಾರೆಂದರೆ—ಕಂದಾಯದೇವತೆಯೇ!—

ಕ್ಷಾಮದೇವತೆಯನ್ನೊಲಿಸುವುದಕ್ಕೆ ದೈವಸಹಾಯವಲ್ಲದೆ ಲೌಕಿಕ ಸಹಾಯವು ಅಷ್ಟೊಂದು ಪ್ರಯೋಜನಕಾರಿಯಾಗಲಾರದು. ಆದರೆ ಕಂದಾಯದೇವತೆಯನ್ನಾದರೂ ಸರಕಾರ ದೇವರಿಗೋ ಪೂಜಾರಿಗೋ ಯಥೋಚಿತ ಪ್ರಾರ್ಥನೆ ಕಾಣಿಕೆಗಳನ್ನರ್ಪಿಸಿ ತೃಪ್ತಿಪಡಿಸಬಹುದಲ್ಲವೇ? ಆದುದರಿಂದ ಕಂದಾಯದೇವತೆಗಾಗಿ ಸರಕಾರದೇವರಿಗೆ ಕೂಡಲೇ ಮಂತ್ರೋಚ್ಚಾರಣೆಗಳೂ, ಪ್ರಾರ್ಥನೆಗಳೂ ನೆರವೇರಿದುವು. ಸರಕಾರದೇವರು ಪ್ರತ್ಯಕ್ಷರಾದರು—ಅದೂ ಒಂದು ಆಶ್ಚರ್ಯವು—ಮತ್ತು ಕಂದಾಯದೇವತೆಗಾಗಿ ಅಭಯವನ್ನಿತ್ತರು.

ಇದಾದ ಕೂಡಲೇ ರೈತರು ಕ್ಷಾಮದೇವತೆಗಾಗಿ ಮಾತ್ರ ದೇವರನ್ನು ಮೊರೆಯಿಟ್ಟು ತಮ್ಮ ತಮ್ಮ ಬೆಳವಣಿಗೆಯ ಕೆಲಸವನ್ನು ಸಾಕಷ್ಟು ಉತ್ಸಾಹದಿಂದ ಕೈಕೊಳ್ಳುವವರಾದರು. ಅವರ ಪ್ರಯತ್ನಗಳು ಅನೇಕ ಮಟ್ಟಿಗೆ ಸಫಲವಾದುವೆಂತಲೇ ಹೇಳಬಹುದು. ನಮ್ಮ ಜಿಲ್ಲೆಯಲ್ಲಿ ಇತರ ವರ್ಷಗಳಲ್ಲಿ ಆಗುವಷ್ಟು ಬೆಳೆಯು ಆ ವರ್ಷದಲ್ಲಿ ಆಗದಿದ್ದರೂ ನಮಗೆಲ್ಲರಿಗೆ ಬೇಕಾಗುವಷ್ಟು ಬೆಳೆಯಾಯಿತೆಂದು ನಾವೆಲ್ಲರೂ ಸಂತೋಷಪಟ್ಟೆವು. ನಮ್ಮನ್ನು ತೃಪ್ತಿಪಡಿಸಿ ಇತರ ಜಿಲ್ಲೆಗಳಿಗೆ ಕಳುಹಿಸಲಿಕ್ಕೆ ಮಾತ್ರ ಬೇಕಾದಷ್ಟು ಬೆಳೆಯಾಗಿರಲಿಲ್ಲ. ಆದರೆ ಅದರಿಂದ ನಮಗೇನು? ನಮ್ಮ ಉಪಯೋಗಾರ್ಥವಾಗಿ ತಕ್ಕಷ್ಟು ಬೆಳೆಯಾಯಿತಲ್ಲವೇ? ಅಂತೇ ನಮ್ಮ ಸಂತುಷ್ಟಿ.—'

'ಆದರೂ ಕ್ಷಾಮ ಒದಗಿತೇ?'

'ಹೌದು, ಕೇಸರಿ, ನಮ್ಮ ಸಂತೋಷವು ಅಲ್ಪಕಾಲವೇ ಬಾಳುವಂತಾಗಿತ್ತು. ನಮಗೆಲ್ಲರಿಗೆ ಬೇಕಾಗುವಷ್ಟು ಬೆಳೆಯಾಗಿದೆಯೆಂದು ತಿಳಿದುಕೊಂಡು ಸರಕಾರವು ಕಂದಾಯದೇವತೆಗಾಗಿ ಅಭಯವನ್ನಿತ್ತ ತನ್ನ ಪ್ರತಿಜ್ಞೆಯನ್ನು ಹಿಂತೆಗೆದು ಕಂದಾಯವನ್ನು ಎಂದಿನಂತೆ ತೆರಬೇಕೆಂತಲೇ ನಿರ್ಧರಿಸಿತು.'

'ಸರಕಾರವು ಹಾಗೆ ಮಾಡಬಹುದಿತ್ತೇ?'

'ಕೇಳುವವರ್ಯಾರು?—ಸರಕಾರವು ಹೊಡೆದ ಈ ಅಂತರ್ಲಾಗದ ನ್ಯಾಯಾನ್ಯಾಯಗಳನ್ನು ವಿಚಾರಿಸಲಿಕ್ಕೆ ನಾನು ಅರ್ಹನಲ್ಲ. ಆದರೆ ಸರಕಾರವು ಕಂದಾಯವನ್ನು ತೆರಬೇಕೆಂದು ಪುನಃ ನಿರ್ಧರಿಸುವಾಗಲೇ ಅಕ್ಕಿಯು ನಮ್ಮ ಜಿಲ್ಲೆಯಿಂದ ಇತರ ಪ್ರದೇಶಗಳಿಗೆ ಹೋಗದಿರುವಂತೆಯೂ ನೋಡಿಕೊಂಡಿದ್ದರೆ ಎಲ್ಲವೂ ಸರಿಯಾಗುತಿತ್ತು. ನಾವು ಆ ವರ್ಷ ಅಕ್ಕಿಯ ಬರಗಾಲದಿಂದ ಅಷ್ಟು ಸಂಕಷ್ಟವನ್ನು ಪಡೆಯುವುದು ಅಗತ್ಯವಿರಲಿಲ್ಲ. ಆದರೆ ಸರಕಾರವು ಎಂದಿನಂತೆ ತಾನು ಮಾಡಬಾರದುದನ್ನೇ ಮಾಡಿಬಿಟ್ಟತು. ಇತ್ತ ಕಂದಾಯ ತಗಾದೆಗೆ ಪ್ರಾರಂಭಿಸಿತು. ಅತ್ತ ಜಿಲ್ಲೆಯೊಳಗಣ ಅಕ್ಕಿಯೆಲ್ಲ ಇತರ ಪ್ರದೇಶಗಳಿಗೆ ರಫ್ತಾಗುವುದನ್ನು ತನ್ನ ಅರೆ ನೋಟದಿಂದ ನೋಡಿಯೂ ತಟಸ್ಥವಾಯಿತು. ಇದರಿಂದ ನನ್ನಂತಹ ಬಡ ಜನರಿಗೆ ಘೋರ ಶನಿದಶೆಯು ಪ್ರಾಪ್ತವಾಯಿತು. ಆದರೆ ಬೆಳೆ ಕಟಾವಾದ ಕೂಡಲೇ ಜಿಲ್ಲೆಯೊಳಗಣ ಅಕ್ಕಿಯನ್ನೆಲ್ಲ ಶೇಖರಿಸಿಟ್ಟಿದ್ದ ಸಾಹುಕಾರ

ರಿಗೆ ಬುಧದಶೆಯು ಪ್ರಾರಂಭವಾಗಿ 'ಗಜಕೇಸರಿ ಯೋಗ'ವು ಬಂತು.

ಸರಕಾರವೇನೋ ಮಾಡಬಾರದುದನ್ನೇ ಮಾಡಿ ಬಿಟ್ಟಿತು. ಆದರೆ ಸಾಹುಕಾರರಾದರೋ ತಮ್ಮ ವೃತ್ತಿ ಸ್ವಭಾವವನ್ನು ಅನುಸರಿಸಿಯೇ ತಮ್ಮ ಲಾಭದ ಕಾರ್ಯ ವನ್ನು ಸಾಗಿಸುತಿದ್ದರು. ಆದುದರಿಂದ ಸಾಹುಕಾರರ ಕೂಡೆಯೂ ನನಗೆ ಜಗಳವಿಲ್ಲ. ಆದರೆ ಗುಂಡಪ್ಪನ ಮತ್ತು ಕಲ್ಲಪ್ಪನ ನಡುವೆ ಸಿಕ್ಕಿ ಮೆಣಸಪ್ಪ ಪುಡಿಯಂತೆ, ಹಾಗೆಯೇ ಸರಕಾರ—ಸಾಹುಕಾರರ ಮಧ್ಯೆ ನಮ್ಮ ಜಿಲ್ಲೆಯ ಬಡ ಮನುಷ್ಯರು ಪುಡಿಪುಡಿಯಾದರು.

ಯಾವ ದೇಶದಲ್ಲಿಯಾದರೂ ಸರಿ. ಕ್ಷಾಮ ದೇವತೆಯು ಒಮ್ಮೆ ತನ್ನ ಮುಖವನ್ನು ತೋರಿಸಿದೊಡ ನೆಯೇ ಅಲ್ಲಿಯ ಜನರು ಅಲ್ಲಿಂದ ಗುಂಪುಗುಂಪಾಗಿ ಪಲಾಯನ ಮಾಡಿ ಇತರ ಪ್ರದೇಶಗಳಿಗೆ ಹೋಗಿ ಅಲ್ಲಿ ಹರಿನಾಮಸ್ಮರಣೆ ಮಾಡುತ್ತಾ ಬೇಡಿ ಜೀವಿಸುವುದುಂಟು. ಆದರೆ ನಮ್ಮ ಜನರು ಸಾಧಾರಣವಾಗಿ ಬೇಡುವುದೆಂದರೆ ತುಂಬಾ ಅಸಹ್ಯಪಡುವರು. ಹೀಗಾಗಿ ಆ ವರ್ಷ ನಮ್ಮ ಜಿಲ್ಲೆಯಲ್ಲಿ ಕ್ಷಾಮದೇವತೆಯು ತನ್ನ ಕಾಲುಗಳನ್ನು ಉದ್ದವಾಗಿ ಚಾಚಿ ನೆಲವನ್ನು ಊರಿ ಕುಳಿತುಕೊಂಡಿ ದ್ದರೂ ನಮ್ಮ ಜನರು ತಮ್ಮ ತಮ್ಮ ಸ್ಥಾನದಿಂದ ಸ್ವಲ್ಪ ವಾದರೂ ಕದಲಲಾರದೆ ಹೋದರು. ಆಶ್ಚರ್ಯವಲ್ಲ. ಜಿಲ್ಲೆಯಲ್ಲಿ ಕ್ಷಾಮವಿದ್ದರೇನು? ನಮ್ಮ ಸಾಹುಕಾರರ ಭಂಡಸಾಲೆಗಳಲ್ಲಿ ನಮಗೆಲ್ಲರಿಗೆ ಬೇಕಾಗುವಷ್ಟು ಅಕ್ಕಿ ಇದ್ದೀತಲ್ಲವೇ?'

'ಹಾಗಾದರೆ ಇದೊಂದು ನಿಜವಾಗಿಯೂ ಸೋಜಿ ಗದ ಬರಗಾಲವು!'

'ನಿಜವು, ಅರವಿಂದಾ; ಆದರೆ ಅದರ ಸೋಜಿಗ ತನವು ನಮಗೆ ಆಗ್ಗೆ ಅಷ್ಟೊಂದಾಗಿ ಹೊಳೆಯಲಿಲ್ಲ.'

'ಅದಂತಿರಲಿ, ನಾಗಣ್ಣ! ನಿನ್ನ ಕಥೆಯೆಲ್ಲಿ?'

'ಕಥೆಯೇ?—ನಿನಗೆ ಕಥೆಯು ಬೇಕೇ? ಹಾಗಾದರೆ ಕೇಳು, ಎಂದು ನಾಗಣ್ಣನು ಮುಂದರಿಸಿದನು.

ಬರಗಾಲದ ದೆಸೆಯಿಂದ ಬುಧದಶೆಯು ಪ್ರಾಪ್ತ ವಾದ ನಮ್ಮ ಮಂಗಳೂರಿನ ಸಾಹುಕಾರರಲ್ಲಿ ಸರ್ವೋ ತ್ತಮ ನಾಯಕನು ಒಬ್ಬನಾಗಿದ್ದನು. ಇತರ ಜಿಲ್ಲೆ ಗಳಿಗೆ ಕಳುಹಿಸಲಿಕ್ಕೆಂದು ಅಕ್ಕಿಯನ್ನು ಹೇರಳವಾಗಿ ಶೇಖ ರಿಸಿದವರಲ್ಲಿ ಅವನೇ ಅದ್ವಿತೀಯನಾಗಿದ್ದನು. ನಮ್ಮೂ ರಿನ ಇತರ ಸಾಹುಕಾರರೆಲ್ಲರೂ ಸಾಧಾರಣವಾಗಿ ಅವ ನನ್ನೇ ಮಾದರಿಯಾಗಿಟ್ಟುಕೊಂಡು ತಮ್ಮ ತಮ್ಮ ವಹಿ ವಾಟುಗಳನ್ನು ನಡೆಯಿಸುತಿದ್ದರು. ಪ್ರಾಯದಲ್ಲಿ ನಾಯಕ ನೇನೂ ಮುದುಕನಲ್ಲ, ಯೌವನಸ್ಥನೇ. ಆದರೆ ವ್ಯಾಪಾರ ದಲ್ಲಿ ಬಹಳ ಚತುರನೂ ಅನುಭವಶಾಲಿಯೂ ಆಗಿರು ವನು. ಸರಕಾರವು ಕಂದಾಯವನ್ನು ತೆರಬೇಕೆಂದು ಪುನಃ ನಿರ್ಧರಿಸಿದಾಗ ಇತರ ಸಾಹುಕಾರರಾದರೋ ಅಕ್ಕಿ ಮುಡಿ ಒಂದಕ್ಕೆ ೧೨ ರೂಪಾಯಿಯ ಮೇಲೆ ಬೆಲೆ ಏರಿಸ ಲಿಕ್ಕೆ ಧೈರ್ಯಪಡುತಿದ್ದಿಲ್ಲ. ಆದರೆ ನಾಯಕನಾದರೋ ಲಾಭದ ಮೇಲೆ ದೂರದೃಷ್ಟಿಯನ್ನಿಟ್ಟು ಅಕ್ಕಿಯ ಧಾರಣೆ ಯನ್ನು ಇಪ್ಪತ್ತು ರೂಪಾಯಿಗೆ ಏರಿಸಿಯೇ ಬಿಟ್ಟನು; ಮಾತ್ರವಲ್ಲ, ಗೋಣಿ ಗೋಣಿಗಳಿಂದ ಅಕ್ಕಿಯನ್ನು ಮಲ ಬಾರಿಗೆ ಮಂಜಿಗಳಲ್ಲಿ ಕಳುಹಿಸುವುದರಲ್ಲಿ ಕೂಡಲೇ ಮಗ್ನನಾದನು.

ಇತ್ತ ಸಾಕಷ್ಟು ಅಕ್ಕಿ ಸಿಗದೆ ಉಪವಾಸದಲ್ಲಿರುವ ಬಡ ಜನರ ಗಲಾಟೆಯು ತೀಕ್ಷ್ಣತೆಯನ್ನು ಹೊಂದುತ್ತಾ ಬಂತು. ಮೊತ್ತಮೊದಲು ಹಸಿವೆಯಿಂದ ದೀನರಾಗಿ ಅಕ್ಕಿ ಸಾಹುಕಾರರ ಕಾಲಡಿಗೆ ಬಂದುಬಿಟ್ಟರು. 'ಅಕ್ಕಿಯನ್ನು ಬೇಡಲಿಕ್ಕೆ ನಾವು ಬಂದಿಲ್ಲ. ಮುಡಿ ಒಂದಕ್ಕೆ ಬೇಕಾದರೆ ಆರು ರೂಪಾಯಿಯಷ್ಟು ಮಾಡಿ. ನಾವು ಮರುಗುವು ದಿಲ್ಲ-' ಎಂದು ಅವರು ಹಲವು ವಿಧವಾಗಿ ಬೇಡಿಕೊಂಡರು. ಆದರೆ ಅವರ ಪ್ರಾರ್ಥನೆಗಳಿಗೆ ಸಾಹುಕಾರರು, 'ನಾವು ಅಕ್ಕಿಯ ಧಾರಣೆಯನ್ನು ತಗ್ಗಿಸಿದರಾಯಿತೆ? ಸರ್ವೋತ್ತಮ ನಾಯಕರನ್ನು ನೋಡಿ. ಅವರು ಮುಡಿ ಒಂದಕ್ಕೆ ಇಪ್ಪತ್ತು ರೂಪಾಯಿಗೆ ಏರಿಸಿ ಎಷ್ಟು ಹಣವನ್ನು ಶೇಖರಿಸುತಿದ್ದಾರೆ! ಸರ್ವೋತ್ತಮ ನಾಯಕರು ಧಾರಣೆಯನ್ನು ತಗ್ಗಿಸುವುದಾ ದರೆ ನಾವೂ ಯಥಾ ಪ್ರಕಾರ ತಗ್ಗಿಸುವೆವು'. ಎಂದರು. ಸರ್ವೋತ್ತಮನಾದರೂ ಧಾರಣೆಯನ್ನು ತಗ್ಗಿಸುವನೇ? 'ನೀವು ಬೇಡಲಿಕ್ಕೆ ಬರುವುದಾದರೆ ಶನಿವಾರ ದಿವಸ ಬನ್ನಿ. ನಿಮಗೆಂದಿನಂತೆಯೇ ಒಂದೊಂದು ಮುಷ್ಟಿ ಅಕ್ಕಿಯನ್ನು ಹಾಕುವೆನು. ಆದರೆ ಅಕ್ಕಿಯ ಧಾರಣೆಯನ್ನು ತಗ್ಗಿಸ ಬೇಕೆಂದು ಮಾತ್ರ ನನ್ನೊಡನೆ ಕೇಳಬೇಡಿ. ನಾನು ಅಕ್ಕಿಯ ಭಂಡಸಾಲೆಯನ್ನು ಇಟ್ಟದ್ದು ಧರ್ಮಮಾಡಲಿಕ್ಕಿಲ್ಲ; ಸಾಧ್ಯ ವಿದ್ದಾಗ ಆದಷ್ಟು ದುಡ್ಡು ಮಾಡಲಿಕ್ಕೆ! ತಿಳಿಯಿತೇನು?'

ಎಂಬ ಪ್ರತ್ಯುತ್ತರವೇ ಆ ಬಡ ಪಾಪಿಗಳಿಗೆ ಸರ್ವೋತ್ತಮ ನಾಯಕನಿಂದ ದೊರಕುತಿತ್ತು. ಎಂತಹ ಪಾಪಿಷ್ಠನಯ್ಯ!

ಜನರ ಗಲಾಟೆಯು ಹೆಚ್ಚೆಚ್ಚಾಗುತ್ತಾ ಬಂತು. ಸವಿನಯ ನುಡಿಗಳಿಗೆ ಕೇಳಲಾರದ ಸರ್ವೋತ್ತಮನನ್ನು ಜನರೆಲ್ಲರೂ ಕಲ್ಲೆದೆಯವನೆಂದು ಶಪಿಸತೊಡಗಿದರು. ಬಾಕಿ ಸಾಹುಕಾರರೆಲ್ಲರೂ ಸರ್ವೋತ್ತಮನನ್ನು ಅನುಸರಿಸಿ ತನ್ನ ತನ್ನ ಲಾಭದ ಕಾರ್ಯದಲ್ಲಿ ತಲ್ಲೀನರಾದರು. ಮನೆಯಲ್ಲಿ ಅಲ್ಪ ಸ್ವಲ್ಪ ರೊಕ್ಕವಿದ್ದವರು ಮುಡಿಗೆ ಇಪ್ಪತ್ತು ರೂಪಾಯಿ ಆದರೂ ಕೊಟ್ಟು ಎಂದಿನಂತೆಯೇ ಉಂಡು ತಿಂದು ಸುಖವಾಗಿದ್ದರು. ಕಲ್ಲೆಕ್ಟರ್ ಸಾಹೇಬರಂತೂ ಊರಲ್ಲಿ ಬರಗಾಲವಿಲ್ಲವೆಂತಲೇ ತಿಳಿದುಕೊಂಡು ತಟಸ್ಥರಾದರು. ಹೀಗಾಗಿ ಬರಗಾಲದ ಘೋರ ಪರಿಣಾಮವು ಬಡವರಾದ ನಮ್ಮ ಮೇಲೆ ಯಥೇಷ್ಟವಾಗಿ ಬಂದಿಳಿಯಿತು. ಊರಿನ ಒಬ್ಬಿಬ್ಬರು, ಉದಾರ ಮನಸ್ಸಿನವರು, ಲೋಕೋಪಕಾರಿಗಳು ಅಲ್ಲಲ್ಲಿ ಧರ್ಮಸಹಾಯದ ಠಾಣ್ಯಗಳನ್ನು (Relief depots) ಸ್ಥಾಪಿಸುವುದಕ್ಕೆ ಬಹಳವಾಗಿ ಪ್ರಯತ್ನಪಟ್ಟರು. ಆದರೆ ಸಾಹುಕಾರರ ಸಹಕಾರವಿಲ್ಲದೆ ಅವರ ಈ ಪ್ರಯತ್ನಗಳೆಲ್ಲವೂ ಹೆಚ್ಚಿನ ಮಟ್ಟಗೆ ನಿಷ್ಫಲವಾದುವು.

ಆದರೂ ಹೊಟ್ಟೆಗಿಲ್ಲದ ಬಡ ಜನರು ಸರ್ವೋತ್ತಮ ನಾಯಕನ ಮನೆಯನ್ನೂ ಭಂಡಸಾಲೆಯನ್ನೂ ಕಾಯುವುದನ್ನು ಬಿಡಲಿಲ್ಲ. ಒಂದೊಂದು ಬಾರಿ ನಾಯಕನು ದೊಡ್ಡ ಮನಸ್ಸುಮಾಡಿ ಅವರಲ್ಲಿ ಪ್ರತಿ ಒಬ್ಬೊಬ್ಬರಿಗೂ ಒಂದೊಂದು ಪಾವು ಅಕ್ಕಿಯಂತೆ ಕೊಟ್ಟುಬಿಡುತಿದ್ದನು. ಆದರೆ ಜನರ ಗೋಳಾಟವು ಭಿಕ್ಷೆಯನ್ನೆತ್ತುವುದಕ್ಕಲ್ಲ, ಅಕ್ಕಿಯ ಬೆಲೆಯನ್ನು ತಗ್ಗಿಸುವುದಕ್ಕೆ! 'ಮಹಾಸ್ವಾಮಿ, ನಮಗೆ ನಿಮ್ಮ ಭಿಕ್ಷೆ ಬೇಕಾದ್ದಿಲ್ಲ, ನಮ್ಮ ಕೈಕಾಲುಗಳು ನೆಟ್ಟಗಿವೆ. ನಿಮ್ಮ ಅಕ್ಕಿಯ ಭಿಕ್ಷೆ ಬೇಡ, ನಮಗೆ—ಅಕ್ಕಿಯ ಧಾರಣೆಯನ್ನು ಮಾತ್ರ ತಗ್ಗಿಸಿರಿ! ಅದನ್ನೇ ನಾವು ಬೇಡುವುದು!' ಎಂದು ನಾಯಕನನ್ನು ಮೊರೆಯಿಟ್ಟರು. ಆದರೆ, ಇದನ್ನು ಕೇಳಿದೊಡನೆ ನಾಯಕನು ರೇಗಿಕೊಂಡು ಅವರಿಗೆಂದು ತಂದ ಭಿಕ್ಷೆಯನ್ನು ಕೂಡ ಒಳಗೆ ಕಳುಹಿಸುತಿದ್ದನು.

ಹೀಗೆಯೇ ಹಲವು ದಿನಗಳು ಕಳೆದು ಹೋದವು. ಜಿಲ್ಲೆಯಲ್ಲಿ ದುರ್ಭಿಕ್ಷವು ಹೆಚ್ಚೆಚ್ಚಾಗುತ್ತಾ ಬಂತು. ಅನೇಕ ಕಡೆಗಳಲ್ಲಿ ಜನರು ಹತಾಶರಾಗಿ ದುರಾಲೋಚನೆಗಳಲ್ಲಿ ಪ್ರವೃತ್ತರಾದರು. ಜೀವನಕ್ಕೆ ಬೇರೆ ಉಪಾಯವಿಲ್ಲದೆ ಸುಲಿಗೆ, ದಂಗೆ ಮೊದಲಾದುವುಗಳಿಗೆ ಕೈಹಾಕತೊಡಗಿದರು. ಆದರೂ ಜಿಲ್ಲಾಧಿಕಾರಿಗಳು ಬಡಜನರ ಸಂಕಷ್ಟ ನಿವಾರಣೆಗಾಗಿ ಯಾವ ಹೆಜ್ಜೆಯನ್ನಾದರೂ ತೆಗೆಯಲಾರದೆ ಹೋದರು.

ಆದರೆ ಮಂಗಳೂರಿನ ವಾರ್ತಾಪತ್ರಿಕೆಗಳು ಸುಮ್ಮನಿರಲಿಲ್ಲ. ಜಿಲ್ಲೆಯ ನಿಜಸ್ಥಿತಿಯನ್ನು ಕೂಲಂಕಷವಾಗಿ ತಿಳಿಸುವಂತೆ ಅವುಗಳು ಕೂಡಲೇ ಸೊಂಟಕಟ್ಟಿದುವು. ಜಿಲ್ಲೆಯೊಳಗೆ ಘೋರವಾದುದೊಂದು ಬರಗಾಲವಿದೆ ಎಂಬ ಸಂಗತಿಯನ್ನು ಅವುಗಳು ಗಂಟಲು ಒಣಗುವ ವರೆಗೆ ಕೂಗಲಾರಂಭಿಸಿದುವು. ಕಟ್ಟಕಡೆಗೆ ಹೇಗಾದರೂ ಅವುಗಳ ಕೂಗು ಮದ್ರಾಸು ವರೆಗೆ ಮುಟ್ಟಿ, ಅಲ್ಲಿನ ಮೇಲಧಿಕಾರಿಗಳು ಸ್ವಲ್ಪಸ್ವಲ್ಪ ಎಚ್ಚರಾಗಲಿಕ್ಕೆ ಪ್ರಾರಂಭಿಸಿದರು. ಮದ್ರಾಸು ಸರಕಾರದ ರೆವಿನ್ಯು ಮೆಂಬರರು ತಾನು ಸ್ವತಃ ಮಂಗಳೂರಿಗೆ ಬಂದು ಜಿಲ್ಲೆಯ ಪರಿಸ್ಥಿತಿಯನ್ನು ನೋಡುವೆನೆಂದು ತಿಳಿಸಿದರು.

ನಾಗಣ್ಣನು ತನ್ನ ಹುಡಿಬುರುಡೆಯಿಂದ ಅರೆವಾಸಿ ಪಾಲು ಹುಡಿಯನ್ನು ತನ್ನ ಮೂಗಿನ ಎರಡು ರಂಧ್ರಗಳೊಳಗೂ ತುರುಕಿಸಿಕೊಂಡು, ಸ್ವಲ್ಪ ಸಮಯದ ಮೇಲೆ ಹೀಗೆ ಮುಂದರಿಸಿದನು:—

ಪ್ರಾತಃಕಾಲ ಒಂಭತ್ತುವರೆ ಗಂಟೆ. ಕಣ್ಣಾನೂರಿನಲ್ಲಿ ಮುಂಚಿನ ದಿನ ಬಂದು ಇಳಿದ ರೆವಿನ್ಯು ಮೆಂಬರರು ಅಂದಿನ ಪ್ರಾತಃಕಾಲದ ರೈಲು ಬಂಡಿಯಲ್ಲಿ ಮಂಗಳೂರಿಗೆ ಬರುವರೆಂದು ತಂತೀವಾರ್ತೆ ಬಂದಿತ್ತು. ಆದುದರಿಂದ ಊರೆಲ್ಲ ಗದ್ದಲ. ಅವರ ಬರುವಿಕೆಯನ್ನು ನಿರೀಕ್ಷಿಸಿ ರೈಲ್ವೇ ಸ್ಟೇಶನಿನಲ್ಲಿ ಜನರು ಕಿಕ್ಕಿರಿದು ತುಂಬಿದ್ದರು. ಮೋಟರ್‌ಕಾರುಗಳೂ, ಜಟ್ಕಾಗಾಡಿಗಳೂ ಒಂದರ ಹಿಂದೆ ಮತ್ತೊಂದು ಎಡೆಬಿಡದೆ ಬರಲಿಕ್ಕೆ ತೊಡಗಿದುವು. 'ಕೆಂಪು ಟೊಪ್ಪಿ'ಗಳಿಗೆ ತುಂಬಾ ಕೆಲಸವಾಯಿತು. ಅವರ ಉತ್ಸಾಹಕ್ಕೆ ಮಿತಿಯೇ ಇಲ್ಲದಂತೆ ತೋರಿತು. ರೈಲು ಬಂಡಿಯಲ್ಲಿ ಬರುವ ಮಹಾನುಭಾವರನ್ನು ಸ್ಟೇಶನಿನಲ್ಲಿ ಎದುರುಗೊಳ್ಳಲಿಕ್ಕೆಂದು ಕಲೆಕ್ಟರ್ ಸಾಹೇಬರೂ, ಡಿಸ್ಟ್ರಿಕ್ಟ ಬೋರ್ಡು ಪ್ರೆಸಿಡೆಂಟರೂ, ಮಂಗಳೂರು ತಾಲೂಕು ಬೋರ್ಡು ಪ್ರೆಸಿಡೆಂಟರೂ, ಮ್ಯುನಿಸಿಪಾಲಿಟಿಯ ಚೆಯರ್‌ಮೆನರೂ ಮೊದಲಾದ ದೊಡ್ಡ ದೊಡ್ಡ ಹುದ್ದೇದಾರರು ಸ್ಟೇಶನಿನೊಳಗೆ ಚಿತ್ತೈಸಿದ್ದರು. ಜನರ ಪರವಾಗಿ ಊರಿನ ಕೆಲವು ಮಂದಿ ಮುಖಂಡರೂ

ಅಲ್ಲಿ ಸೇರಿದ್ದರು. ಅದಲ್ಲದೆ ಮಂಗಳೂರು ಡಿವಿಜನಲ್ ಆಫೀಸರರೂ, ತಹಶಿಲ್ದಾರರೂ, ಮೆಜಿಸ್ಟ್ರೇಟರೂ ಮೊದಲಾದ ಮಹನೀಯರಿಂದ ಕೂಡಿದ ಕಲೆಕ್ಟರ ಸಾಹೇಬರ ಇಡೀ ಪರಿವಾರವೇ ಅಲ್ಲಿ ಕೂಡಿತ್ತು. ತಹಶಿಲ್ದಾರರು ಬೆಳ್ಳಿಯ ಹರಿವಾಣದಲ್ಲಿ ಬಂಗಾರದ ತಂತಿಗಳಿಂದ ಹೆಣೆದ ಹೂವಮಾಲೆಯನ್ನು ಹಿಡಿದುಕೊಂಡು ನಿಂತುದನ್ನು ಒಬ್ಬಿಬ್ಬರು ನೋಡಿದುದೂ ಉಂಟು.

ರೈಲು ಬಂಡಿಯು ಬಂದೇ ಬಿಟ್ಟಿತು. ಸ್ಟೇಶನಿನಲ್ಲಿ ಬಂದು ನಿಂತೇ ಬಿಟ್ಟಿತು. ಡಿವಿಜನಲ್ ಆಫೀಸರರ ಹೃದಯವು ಡಬಡಬ ಎಂದು ಹೊಡೆಯಲಾರಂಭಿಸಿತು. ತಹಶಿಲ್ದಾರರ ಕೈಯು ಕೂಡಲೇ ಹರಿವಾಣದಲ್ಲಿದ್ದ ಹೂವಮಾಲೆಯನ್ನು ಹುಡುಕಿಕೊಂಡು ಹೋಯಿತು. ಕಲೆಕ್ಟರ್ ಸಾಹೇಬರು ಮತ್ತು ಡಿಸ್ಟ್ರಿಕ್ಟ ಬೋರ್ಡು ಪ್ರೆಸಿಡೆಂಟರು ರೈಲು ಬಂಡಿಯ ಕಡೆಗೆ ನುಗ್ಗಿದರು. ಅವರೊಂದಿಗಿದ್ದ ಊರಿನ ಇತರ ಮುಖಂಡರೂ ಅವರನ್ನು ಹಿಂಬಾಲಿಸಿದರು. ಕಲೆಕ್ಟರ್ ಸಾಹೇಬರು ತಮ್ಮ ಹುಬ್ಬುಗಳನ್ನು ತುರಿಸಿಕೊಳ್ಳಲಿಕ್ಕೆ ಪ್ರಾರಂಭಿಸಿದರು. ರೆವಿನ್ಯು ಮೆಂಬರರು ಬರಬಹುದಾದ ಸ್ಪೆಶ್ಯಲ್ ಗಾಡಿಯು ಅವರ ಕಣ್ಣಿಗೆ ಬೀಳದೆ ಹೋಯಿತು! ಒಡನೆಯೇ ಫಸ್ಟ ಕ್ಲಾಸ್ ಕಂಪಾರ್ಟುಮೆಂಟುಗಳಲ್ಲಿ ನುಗ್ಗಿದರು. ಅವುಗಳಲ್ಲಿಯೂ ರೆವಿನ್ಯು ಮೆಂಬರರು ಇದ್ದಿಲ್ಲ!

ಇಲ್ಲ, ರೆವಿನ್ಯು ಮೆಂಬರರು ಬಂದಿರಲಿಲ್ಲ! ಅವರಿಗೆ ಕಣ್ಣಾನೂರಿನಲ್ಲಿ ಅಗತ್ಯವಾದ ಕೆಲಸವಿದ್ದುದರಿಂದ ಆ ಬಂಡಿಗೆ ಬರಲು ಅವರಿಗೆ ಸಾಧ್ಯವಾಗಲಿಲ್ಲವೆಂತಲೂ, ಆ ದಿನದ ಸಂಜೆಯ ಮೈಲು ಬಂಡಿಯಲ್ಲಿಯೇ ಬರುವರೆಂದೂ ಮಾತು ಹರಡಿತು. ಅವರನ್ನು ಎದುರುಗೊಳ್ಳಲಿಕ್ಕೆಂದು ಸ್ಟೇಶನಿನೊಳಗೆ ಬಂದವರೆಲ್ಲರ ಕುತೂಹಲವೂ, ಉತ್ಸಾಹವೂ ನಿಷ್ಪ್ರಯೋಜನವಾಯಿತು! ತಾವು ಪಟ್ಟ ಆಶಾಭಂಗವನ್ನು ದೊಡ್ಡ ಸ್ವರಗಳಲ್ಲಿ ಪ್ರಕಟಗೊಳಿಸುತ್ತಾ ಬಂದವರೆಲ್ಲರೂ ಸ್ಟೇಶನಿನ ಹೊರಗೆ ಗುಂಪುಗುಂಪಾಗಿ ಹೋಗಲಿಕ್ಕೆ ಪ್ರಾರಂಭಿಸಿದರು.

ರೆವಿನ್ಯು ಮೆಂಬರರೇನೋ ಬರಲಿಲ್ಲ. ಆದರೆ ರೈಲು ಬಂಡಿಯ ಯಾವುದೋ ಒಂದು ಎಡೆಯಿಂದ ಒಂದು ಮೃದುವಾದ ಸ್ವರವು ಕೂಲಿಯನ್ನು ಪದೇಪದೇ ಕರೆಯುವುದು ಆ ಗಲಭೆಯಲ್ಲಿ ಕೇಳಿಬಂತು. ಕೂಲಿ ಆಳುಗಳಲ್ಲಿ ಹೆಚ್ಚಿನವರು ಪ್ರಯಾಣಿಕರ ಸಾಮಾನುಗಳನ್ನು ಒಯ್ಯುವುದರಲ್ಲಿ ಉದ್ಯುಕ್ತರಾಗಿದ್ದರು. ರೆವಿನ್ಯು ಮೆಂಬರರ ಸಾಮಾನನ್ನು ಒಯ್ಯಲಿಕ್ಕೆ ಸಿದ್ಧರಾಗಿದ್ದ ಇಬ್ಬರು ಕೂಲಿಗಳು ಅವರು ಬಾರದೆ ಇದ್ದುದನ್ನು ನೋಡಿ ಖಿನ್ನ ಮನಸ್ಕರಾಗಿದ್ದರು. ಅವರಲ್ಲಿ ಒಬ್ಬನು ಆ ಧ್ವನಿಯನ್ನು ಕೇಳುತ್ತಲೆ ನೀರಿನಲ್ಲಿ ಮುಳುಗಿ ಸಾಯಲಿಕ್ಕಾದ ಮನುಷ್ಯನು ಒಂದು ಹುಲ್ಲುಕಡ್ಡಿಯನ್ನು ಕೂಡ ಹಿಡಿಯಲಿಕ್ಕೆ ಹೋಗುವಂತೆ ಆ ಧ್ವನಿಯು ಹೊರಟದ್ದ ಕಂಪಾರ್ಟುಮೆಂಟಿಗೆ ಓಡಿ ಹೋದನು.

ದೊಡ್ಡದಾದ ಆ ಇಡೀ ಕಂಪಾರ್ಟುಮೆಂಟಿನಲ್ಲಿ ಏಳು ವರ್ಷದ ಕೋಮಲವಾದ ಬಾಲಿಕೆಯೊಬ್ಬಳು ಒಂದು ಸಣ್ಣ ಪೆಟ್ಟಿಗೆಯ ಕೂಡೆ ಚಡಪಡಿಸುತ್ತಾ ನಿಂತಿದ್ದಳು.

ಕೂಲಿ ಆಳನ್ನು ನೋಡಿದ ಕೂಡಲೇ ಬಾಲಿಕೆಯು ಹಸನ್ಮುಖಿಯಾದಳು. 'ನೋಡು, ಸಣ್ಣ ಪೆಟ್ಟಿಗೆ. ಹಗುರವೂ ಉಂಟು. ನೀನು ಬಂದುದು ಒಳ್ಳೇದಾಯಿತು. ಯಾರೂ ಬರಲಿಕ್ಕಿಲ್ಲವೆಂದು ತಿಳಿದಿದ್ದೆನು. ಎಷ್ಟು ಜನರು! ಅಮ್ಮ ಕೂಲಿ ಆಳಿಗೆ ಕೊಡಬೇಕೆಂದು ಒಂದಾಣೆ ಪಾವಲಿ ಕೊಟ್ಟಿದ್ದಾರೆ. ಇದೋ ನೋಡು' ಎಂದು ಹೇಳಿದಳು.

ಏಳು ವರ್ಷದ ಹುಡುಗಿ ಮತ್ತು ಒಂದು ಸಣ್ಣ ಪೆಟ್ಟಿಗೆ. ಹತ್ತಿರ ದೊಡ್ಡವರ್ಯಾರೂ ಇರಲಿಲ್ಲ. ಇದನ್ನು ನೋಡಿ ಆ ಟೋಣಪನಿಗೆ ಆಶ್ಚರ್ಯವಾಯಿತು. ಆಶ್ಚರ್ಯದಿಂದ ತನ್ನ ತಲೆಯನ್ನು ತುರಿಸಿಕೊಳ್ಳಲಾರಂಭಿಸಿದನು.

'ಎಲ್ಲಿಂದ ಬರುವುದಮ್ಮಾ?' ಎಂದು ಕೇಳಿದನು.

'ಕಾಸರಗೋಡಿನಿಂದ' ಎಂದು ಹುಡುಗಿಯು ಉತ್ತರ ಕೊಟ್ಟಳು.

'ನಿಮ್ಮ ಸಂಗಡ ದೊಡ್ಡವರ್ಯಾರೂ ಇಲ್ಲವೇ?'

'ಇಲ್ಲ, ಯಾಕೆ? ಅಮ್ಮ ಕಾಸರಗೋಡು ಸ್ಟೇಶನಿನಲ್ಲಿ ನನ್ನನ್ನು ರೈಲು ಬಂಡಿಯಲ್ಲಿ ಕುಳ್ಳಿರಿಸುವಂತೆ ಮಾಡಿದರು. ಭಯವೇನೂ ಇಲ್ಲವೆಂದು ಹೇಳಿದರು. ನಾನು ಮಂಗಳೂರಿಗೆ ಈ ಮೊದಲು ಅನೇಕ ಸಾರಿ....ಅಪ್ಪ.... ಅಪ್ಪನೊಂದಿಗೆ ಬಂದಿದ್ದೇನೆ........ನಿನಗೆ ಅಪ್ಪನಿರುವನೇ?'

ಟೋಣಪನು—ಅವನ ಹೆಸರು ದೂಮನೆಂದಾಗಿದ್ದಿರಬಹುದು, ಅಥವಾ ಸೋಮನೆಂದಾಗಿದ್ದಿರಬಹುದು, ಆದರೆ ಟೋಣಪನೆಂಬ ಹೆಸರು ಅವನಿಗೆ ಚೆನ್ನಾಗಿ ಒಪ್ಪುತಿತ್ತು—ಹುಡುಗಿಯ ಪೆಟ್ಟಿಗೆಯನ್ನು ಕಂಪಾರ್ಟುಮೆಂಟಿನಿಂದ ಕೆಳಗೆ ತಂದಿಟ್ಟಿದ್ದನು.

'ನಿನಗೆ ಅಪ್ಪನಿರುವನೇ?' ಎಂದು ಹುಡುಗಿಯು ಕೇಳಿದ ಪ್ರಶ್ನೆಗೆ ದಿಗಿಲುಬಿದ್ದನು. 'ಇಲ್ಲ, ಯಾಕೇ?' ಎಂದು ಕೇಳಿದನು.

'ಹೀಗೆಯೇ— ನನ್ನ....ಅಪ್ಪ....ಇವತ್ತು....ತೀರಿ ಹೋದರು....ನನಗೆ....ಅಳು....ಬರುತ್ತದೆ....'

ಇದನ್ನು ಕೇಳಿದ ಕೂಡಲೇ ಆ ಟೊಣಪನ ದಪ್ಪನಾದ ಹೃದಯದಲ್ಲಿ ಏನೋ ಫಕ್ಕನೆ ಚಲಿಸಿದಂತೆ ತೋರಿತು. ಅವನ ಗಂಟಲೊಳಗೆ ಫಕ್ಕನೆ ಏನೋ ಒಂದು ಗುಳ್ಳೆ ಬಂದಂತಾಯಿತು. ಏನು ಹೇಳಬೇಕೆಂದು ತೋರದೆ ಬಾಯಿ ತೆರೆದು ಹುಡುಗಿಯನ್ನು ನೋಡುತ್ತಾ ನಿಂತನು. ಹುಡುಗಿಯು ತನ್ನ ಕಣ್ಣುಗಳ ಆಕಾಶದಲ್ಲಿ ಕವಿಯುತ್ತಿರುವ ಮೋಡಗಳನ್ನು ಶತಪ್ರಯತ್ನದಿಂದ ಚದರಿಸಿ, 'ಇಲ್ಲ, ನಾನು ಅಳುವುದಿಲ್ಲ........ನಾನು ಅಳಬಾರದೆಂದು ಅಮ್ಮ ಹೇಳಿದ್ದಾರೆ....ತೀರಿಹೋದವರು....ಸ್ವರ್ಗಕ್ಕೆ.... ಹೋಗುತ್ತಾರಲ್ಲವೆ?' ಎಂದಳು.

ಮಳೆ ಬರುವಾಗ ಸೂರ್ಯನು ಪ್ರಕಾಶಿಸಲಿಕ್ಕೆ ಪ್ರಯತ್ನಪಡುವಂತೆ ಅಳುವಿನ ಮಧ್ಯದಲ್ಲಿ ನಗುಮೊಗವನ್ನು ತಾಳಿದ ಆ ಹುಡುಗಿಯನ್ನು ಟೊಣಪನು ನೋಡುತ್ತಾ ನಿಂತನು. ಪ್ರಯಾಣಿಕರ ದುಡ್ಡನ್ನು ಹೇಗೆ ಹೊಡೆಯಬಹುದು ಎಂಬ ಪ್ರಶ್ನೆಯೊಂದನ್ನೇ ತನ್ನ ಜೀವಮಾನದ ಧ್ಯೇಯವನ್ನಾಗಿಟ್ಟುಕೊಂಡ ಆ ಟೊಣಪನಿಗೆ ಈ ಹುಡುಗಿಯ ಪರಿಚಯವು ಕ್ಷಣಿಕವಾದುದಾದರೂ ಒಂದು ನೂತನ ಅನುಭವವಾಯಿತು. ಅವನ ದಪ್ಪವಾದ ಮೆದುಳಿನಲ್ಲಿ ತಾನೂ ಒಬ್ಬ ಮನುಷ್ಯನು ಎಂಬ ಭಾವನೆಯು ಮೆಲ್ಲಮೆಲ್ಲನೆ ಹೊಳೆಯಲಾರಂಭಿಸಿತು. ಅವಳನ್ನು ನೋಡುತ್ತಾ ನೋಡುತ್ತಾ ತನಗೆ ಎಷ್ಟು ಮಕ್ಕಳಿವೆ ಎಂದು ಕೂಡ ಅರಿಯದೆ ಇದ್ದ ಅವನಿಗೆ ತನ್ನ ಮಕ್ಕಳ ಅಕ್ಕರೆಯ ನೆನಪು ಉಂಟಾಯಿತು. ತನ್ನ ಮುಂದಿರುವ ಆ ಬಾಲಿಕೆಯನ್ನು ಅಪ್ಪಿ ಮುದ್ದಾಡಿ ಅವಳನ್ನು ಸಂತವಿಸೋಣವೇ ಎಂಬ ಲಾಲಸೆಯು ಅವನ ಹೃದಯವನ್ನು ಆಕ್ರಮಿಸಿಕೊಂಡಿತು. ಆದರೆ ಅವಳ ಕೋಮಲವಾದ ಶರೀರವನ್ನು ನೋಡಿ ತನ್ನ ಆಸೆಯನ್ನು ಪೂರೈಸಲಿಕ್ಕೆ ಅವನಿಗೆ ಧೈರ್ಯಬರಲಿಲ್ಲ. ತನ್ನ ದೊರಗಾದ ಮತ್ತು ಮೈಲಿಗೆಯಿಂದ ತುಂಬಿದ ದೇಹಕ್ಕಾಗಿ ಅವನು ಬಹಳ ನಾಚಿಕೆಪಟ್ಟನು.

'ಅಮ್ಮಾ, ನೀವು ಈಗ ಹೋಗುವುದಾದರೂ ಯಾರಲ್ಲಿಗೆ?' ಎಂದು ಕಟ್ಟಕಡೆಗೆ ಕೇಳಿದನು.

'ನನ್ನ ಸೋದರಮಾವನಾದ ಸರ್ವೋತ್ತಮ ನಾಯಕರಲ್ಲಿಗೆ.'

'ನೀವು ಈಗ ಬರುತ್ತೀರೆಂದು ಅವರಿಗೆ ಗೊತ್ತಿಲ್ಲವೇ?'

'ಇಲ್ಲವೆಂದು ಕಾಣುತ್ತದೆ. ಅಮ್ಮ ನನಗೆ ಅಳಬಾರದೆಂದು ಹೇಳುತಿದ್ದರು. ಆದರೆ ಅವರು ಅಳುತ್ತಲೇ ಇದ್ದರು. ನನ್ನನ್ನು ರೈಲುಬಂಡಿಯಲ್ಲಿ ಕುಳ್ಳಿರಿಸುವಾಗ್ಗೆ, ''ನೀನು ಮಂಗಳೂರಿನಲ್ಲಿರುವ ನಿನ್ನ ಸೋದರಮಾವನಾದ ಸರ್ವೋತ್ತಮ ನಾಯಕರಲ್ಲಿಗೆ ಹೋಗು'' ಎಂದರು. ''ನಾನು ಯಾರ ಸಂಗಡ ಹೋಗಲಿ?' ಎಂದು ಕೇಳಿದೆ. ''ಮಂಗಳೂರು ಸ್ಟೇಶಸಿನಲ್ಲಿ ಯಾರಾದರೂ ಪುಣ್ಯಾತ್ಮರು ನಿನ್ನನ್ನು ಅವರಿದ್ದಲ್ಲಿಗೆ ಕರಕೊಂಡು ಹೋಗುವರು'' ಎಂದರು.........ನೀನು ಒಬ್ಬ ಪುಣ್ಯಾತ್ಮನೇ?'

'ನನಗೆ ಗೊತ್ತಿಲ್ಲವಮ್ಮಾ!'

'ಹಾಗಾದರೆ ನೀನು ನನ್ನನ್ನು ನನ್ನ ಸೋದರಮಾವನಿದ್ದಲ್ಲಿಗೆ ಕರಕೊಂಡು ಹೋಗಲಾರೆಯಾ?'

'ಅವಶ್ಯವಾಗಿಯೂ ಕರಕೊಂಡು ಹೋಗುವೆನಮ್ಮ. ನಿಮಗೆ ಆ ಯೋಚನೆ ಬೇಡ. ಆದರೆ ಅವರಿಗೆ ಯಾವ ಸರ್ವೋತ್ತಮ ನಾಯಕರೆಂದು ಹೇಳುತ್ತಾರೆ?'

'ನನ್ನ ಸೋದರಮಾವ ಸರ್ವೋತ್ತಮ ನಾಯಕರೆಂದು.'

ಈ ಉತ್ತರವನ್ನು ಕೇಳಿ ಟೊಣಪನು ತನ್ನ ತಲೆಯನ್ನು ಪುನಹ ತುರಿಸಿಕೊಂಡನು. 'ಅಮ್ಮ, ನಾನವರನ್ನು ಇದುವರೆಗೆ ನೋಡಿದ್ದಿಲ್ಲವಲ್ಲ!'

'ಚಲೋದಾಯಿತು, ನಾನೂ ಅವನನ್ನು ಇಷ್ಟರವರೆಗೆ ನೋಡಿದ್ದಿಲ್ಲ! ಅಪ್ಪ....ಅಪ್ಪ....ಇಲ್ಲ, ನಾನೇನೂ ಅಳುವುದಿಲ್ಲ, ನಾನು ಅಳಬಾರದೆಂದು ಅಮ್ಮ ಹೇಳಿದ್ದಾರೆ ....ನೋಡಿದೆಯಾ, ನನಗೆ ಅಳುಬಂದರೂ ನಾನು ಅಳಲಿಲ್ಲ!....ಅಪ್ಪ ನನ್ನನ್ನು ಅನೇಕ ಸಾರಿ ಮಂಗಳೂರಿಗೆ ಕರಕೊಂಡು ಬಂದಿದ್ದರು. ಆದರೆ ಒಮ್ಮೆಯಾದರೂ ಅವರು ನನ್ನನ್ನು ಸೋದರಮಾವನಿದ್ದಲ್ಲಿಗೆ ಕರಕೊಂಡು ಹೋಗಲಿಲ್ಲ....ನನ್ನ ಸೋದರಮಾವನೂ ಅಪ್ಪನಂತೆಯೆ ಒಳ್ಳೇ ಮನುಷ್ಯರಾಗಿರಬೇಕಲ್ಲವೇ?....ನಾನು ಅವರಲ್ಲೇ ನಿಲ್ಲಬೇಕೆಂದು ಅಮ್ಮ ಹೇಳಿದ್ದಾರೆ....ಅಪ್ಪ ನನಗೆ ಕಲಿಸಿದಂತೆ ಇನ್ನು ಮುಂದೆ ಅವರೇ ಕಲಿಸುವರಂತೆ....... .... ದೊಡ್ಡವರು ಕಲಿಯುವುದಿಲ್ಲ, ಅಲ್ಲವೇನು? ಅವರು ಕಲಿ

ಸುವುದು ಮಾತ್ರ. ನಾನೂ ದೊಡ್ಡವಳಾದ ಮೇಲೆ ಸಣ್ಣ ಹುಡುಗಿಯರಿಗೆ ಪಾಠಕಲಿಸಿಕೊಡುವೆನು....'

ಟೊಣಪನ ಕಣ್ಣುಗಳಲ್ಲಿ ನೀರು ತುಂಬಿತು. ಅನೇಕ ವರ್ಷಗಳಿಂದೀಚೆಗೆ ಅವನ ಕಣ್ಣುಗಳಲ್ಲಿ ನೀರು ತುಂಬಿದುದು ಇದೇ ಮೊದಲನೆಯ ಸಾರಿ.

'ಅಮ್ಮಾ, ಹೊತ್ತಾಯಿತು. ನಿಮ್ಮ ಸೋದರಮಾವನಾದ ಸರ್ವೋತ್ತಮ ನಾಯಕರು ಯಾರೆಂದು ವಿಚಾರಿಸಿ ಹೋಗಬೇಕಾಗಿದೆ. ಆದುದರಿಂದ ಸ್ಟೇಶನಿನ ಹೊರಗೆ ಹೋಗೋಣ. ನಿಮ್ಮ ಟಿಕೇಟನ್ನು ತೆಗೆಯಿರಿ,' ಎಂದು ಹೇಳಿ ಆ ಬಾಲಿಕೆಯ ಪೆಟ್ಟಿಗೆಯನ್ನು ಒಂದು ಕೈಯಿಂದ ತನ್ನ ಹೆಗಲ ಮೇಲಿಟ್ಟು, ಇನ್ನೊಂದು ಕೈಯಿಂದ ಅವಳ ಕೈಯನ್ನು ಹಿಡಿದುಕೊಂಡು ಸ್ಟೇಶನಿನ ಹೊರಗೆ ಬಂದನು. ಪೆಟ್ಟಿಗೆಯನ್ನು ಅಲ್ಲಿ ಜಗಲಿಯ ಮೇಲೆ ಇರಿಸಿ, 'ಅಮ್ಮಾ, ನೀವು ಈ ಪೆಟ್ಟಿಗೆಯ ಮೇಲೆ ಸ್ವಲ್ಪ ಕುಳಿತುಕೊಳ್ಳಿ. ನಾನು ಬೇಗ ಹೋಗಿ ಅಲ್ಲಿದ್ದ ಒಂದು ಗಾಡಿಯನ್ನು ಗೊತ್ತುಮಾಡಿಕೊಂಡು ಬರುವೆನು' ಎಂದನು.

'ಗಾಡಿಯೇ? ಬಹಳ ಒಳ್ಳೇದಾಯಿತು. ನಾನು ಮರೆತೇ ಬಿಟ್ಟಿದ್ದೆನು. ಗಾಡಿಯಲ್ಲಿಯೇ ಹೋಗಬೇಕೆಂದು ಅಮ್ಮ ಹೇಳಿದ್ದರು. ಇದೋ ನೋಡು, ಗಾಡಿಯವನಿಗೆ ಕೊಡಬೇಕೆಂದು ಅಮ್ಮ ಕೊಟ್ಟಿದ್ದ ಅರ್ಧ ರೂಪಾಯಿ!'

ಟೊಣಪನು ಆ ನಾಣ್ಯವನ್ನು ನೋಡಲಿಲ್ಲ. ಅದನ್ನು ನೋಡಬೇಕೆಂದೂ ಅವನಿಗೆ ಕುತೂಹಲವಿರಲಿಲ್ಲ. ಗಾಡಿಗಳ ಸಮೂಹವಿದ್ದಲ್ಲಿಗೆ ನೆಟ್ಟಗೆ ಹೋಗಿ ಒಂದು ಗಾಡಿಯನ್ನು ಗೊತ್ತುಮಾಡಿಕೊಂಡು ಬಂದನು. ಗಾಡಿಯನ್ನು ನೋಡುತ್ತಲೇ ಹುಡುಗಿಯು ಸಂತೋಷದಿಂದ ಕೈ ಚಪ್ಪಾಳೆ ಹಾಕಿದಳು. 'ಬಿಳೇ ಕುದುರೆಯ ಗಾಡಿ! ಎಷ್ಟು ಸೊಗಸಾದುದು! ಬಿಳೇ ಕುದುರೆಯ ಗಾಡಿಯಲ್ಲಿ ಕೂತುಕೊಳ್ಳುವುದೆಂದರೆ ನನಗೆ ಬಹಳ ಇಷ್ಟ! ಅಪ್ಪ ಯಾವಾಗಲೂ— ನೋಡು, ನಾನೀಗ ಅಳುವುದಿಲ್ಲ....ಇಲ್ಲ ಅಳುವುದಿಲ್ಲ.... ದೊಡ್ಡವರು ಅಳುವುದಿಲ್ಲ....ನಾನೀಗ ದೊಡ್ಡವಳಾಗಿದ್ದೇನಲ್ಲವೇ?....ಆದರೂ....ಆದರೂ....ಅಮ್ಮ ಅಳುತಿದ್ದರು, ....ನಾನು ಮಾತ್ರ ಅಳಬಾರದೆಂದು ಹೇಳುತಿದ್ದರು.... ಇಲ್ಲ, ನಾನು ಅಳುವುದಿಲ್ಲ....'

ಟೊಣಪನು ಮಾತೆತ್ತದೆ ಹುಡುಗಿಯ ಪೆಟ್ಟಿಗೆಯನ್ನು ಗಾಡಿಯೊಳಗಿಟ್ಟನು. ಅವಳನ್ನೂ ಗಾಡಿಯೊಳಗೆ ಕೂತುಕೊಳ್ಳಿಸಿ ಗಾಡಿಯವನ ಬದಿಯಲ್ಲಿ ಕೂತುಕೊಳ್ಳಲಿಕ್ಕೆಂದು ಹೋದನು. ಆದರೆ ಆ ಬಾಲೆಯು ಒಪ್ಪಲಿಲ್ಲ. ಅವನು ಗಾಡಿಯೊಳಗೇನೇ ಕೂತುಕೊಳ್ಳಬೇಕೆಂದು ಹಟ ಹಿಡಿದಳು. ಅವನು ಗಾಡಿಯೊಳಗೇನೇ ಕೂತುಕೊಳ್ಳಬೇಕಾಯಿತು. ಹುಡುಗಿಯು ಕುದುರೆಯನ್ನು ನೋಡಬೇಕೆಂದು ಗಾಡಿಯವನ ಹಿಂದುಗಡೆಯೇ ಕುಳಿತಳು.

ಗಾಡಿಯವನು, 'ಎಲ್ಲಿಗೆ?' ಎಂದನು.

'ಸರ್ವೋತ್ತಮ ನಾಯಕರಲ್ಲಿಗೆ' ಎಂದು ಟೊಣಪನು ಉಪಾಯಾಂತರದಿಂದ ಉತ್ತರ ಕೊಟ್ಟನು.

'ಯಾವ ಸರ್ವೋತ್ತಮ ನಾಯಕರಪ್ಪ? ವಕೀಲ ಸರ್ವೋತ್ತಮ ನಾಯಕರೇ, ಸಾಹುಕಾರ ಸರ್ವೋತ್ತಮ ನಾಯಕರೇ, ಗುಮಾಸ್ತೆ....'

'ನೆನಪಾಯಿತು! ಸಾಹುಕಾರ ಸರ್ವೋತ್ತಮ ನಾಯಕರಲ್ಲಿಗೆ! ನನ್ನ ಸೋದರಮಾವ ಸಾಹುಕಾರರೆಂದು ಅಮ್ಮ ಹೇಳಿದುದು ಈಗ ನೆನಪಾಯಿತು!' ಎಂದು ಹುಡುಗಿಯು ಸಂತೋಷದಿಂದ ಹೇಳಿದಳು. ಟೊಣಪನಿಗೆ ಬಗೆಹರಿಯದ ಪ್ರಶ್ನೆಯೊಂದನ್ನು ಸಡಿಲಿಸಿದಂತಾಯಿತು. 'ಸಾಹುಕಾರ ಸರ್ವೋತ್ತಮ ನಾಯಕರಲ್ಲಿಗೆ ನೆಟ್ಟಗೆ ಹೋಗು' ಎಂದು ಗಾಡಿಯವನಿಗೆ ಹೇಳಿದನು.

ಗಾಡಿಯು ಮುಂದಕ್ಕೆ ಚಲಿಸಿತು. ಹುಡುಗಿಯು ಆ ಬಿಳೇ ಕುದುರೆಯನ್ನು ನೋಡುವ ಸಂತೋಷದಲ್ಲಿ ತನಗೆ ಬಿಗಿದ ದುಃಖವನ್ನು ಒಂದು ಘಳಿಗೆಗೆ ಮುಳುಗಿಸಿದಳು. ಕುದುರೆಯನ್ನು ಹೊಡೆಯಬಾರದೆಂದು ಗಾಡಿಯವನೊಡನೆ ಹಟಹಿಡಿದಳು. ಅವಳನ್ನು ನೋಡುತ್ತಾ ಕೂತುಕೊಳ್ಳುವುದೇ ಟೊಣಪನಿಗೆ ಒಂದು ಹಬ್ಬವಾಯಿತು. ಅವಳ ಮನೆಯ ಸಂಗತಿಗಳನ್ನೆಲ್ಲ ಕೇಳಲಿಕ್ಕೆ ಬಹಳ ಕುತೂಹಲಪಟ್ಟನು. ಆದರೆ ಕೇಳಲಿಕ್ಕೆ ಅವನಿಗೆ ಧೈರ್ಯ ಸಾಲದೇ ಹೋಯಿತು. ಕಟ್ಟಕಡೆಗೆ 'ನಿಮ್ಮ ಹೆಸರೇನಮ್ಮಾ?' ಎಂದು ಕೇಳಿದನು.

ಹುಡುಗಿಯು 'ಕಮಲೆ' ಎಂದಳು.

ಗಾಡಿಯು ಮುಂದಕ್ಕೆ ಚಲಿಸಿತು.

೨.

ಅತ್ತ ಸರ್ವೋತ್ತಮ ನಾಯಕನು ಬೆಳಿಗ್ಗೆ ೭॥ ಗಂಟೆಗೆ ಸರಿಯಾಗಿ ತನ್ನ ಅಕ್ಕಿಯ ಭಂಡಸಾಲೆಯ ಬಾಗಿಲನ್ನು

ಎಂದಿನಂತೆ ತೆರೆದಿದ್ದನು. ಕೂಡಲೇ ಎಂದಿನಂತೆ ನೂರಾರು ಬಡಜನರು ಅವನ ಭಂಡಸಾಲೆಯನ್ನು ಮುತ್ತಿಗೆ ಹಾಕಿದರು. ಇಂದು ಸರ್ವೋತ್ತಮ ನಾಯಕರಿಗೆ ಮನಸ್ಸಿನಲ್ಲಿ ಸುಖವಿರಲಿಲ್ಲ. ಸರಕಾರದವರು ಅಕ್ಕಿಯ ಧಾರಣೆಯನ್ನು ತಗ್ಗಿಸಬೇಕೆಂದು ತನ್ನನ್ನು ಬಲತ್ಕರಿಸುವ ವರೆಗೆ ತಾನು ಅಕ್ಕಿಯ ಧಾರಣೆಯನ್ನು ತಗ್ಗಿಸಲಿಕ್ಕಿಲ್ಲವೆಂದು ಅವನು ನಿಶ್ಚೈಸಿದ್ದನು. ಆದರೆ ಇಂದು ಪ್ರಾತಃಕಾಲದ ರೈಲು ಬಂಡಿಯಲ್ಲಿ ಮದ್ರಾಸಿನ ರೆವಿನ್ಯು ಮೆಂಬರರು ಇಲ್ಲಿಯ ಅಕ್ಕಿಯ ಧಾರಣೆಯ ವಿಚಾರಕ್ಕಾಗಿ ಬರುವರೆಂದು ಅವನು ತಿಳಿದಿದ್ದನು. ಅವರು ಬಂದು ಏನೆಲ್ಲ ಮಾಡುವರೋ, ಅಕ್ಕಿಯ ಧಾರಣೆಗೆ ಜನರು ಕೇಳುವಂತೆ ಸರಕಾರಿ ನಿರ್ಬಂಧವಿರುವಂತೆ ಮಾಡಿಬಿಡುತ್ತಾರೋ ಎಂಬ ಭೀತಿಯು ಅವನ ಎದೆಗೆ ಅಂಟಿಕೊಂಡಿತು. ಅಷ್ಟು ಮಾತ್ರವಲ್ಲ. ಅವನ ಭಂಡಸಾಲೆಯನ್ನು ಮುತ್ತಿದ್ದ ಜನರ ಗಲಾಟೆಯು ವಿಪರೀತವಾಗುತ್ತ ಬಂತು. ಹೆಂಗಸರು ಮತ್ತು ಮಕ್ಕಳು ಗೋಳಿಡಲಾರಂಭಿಸಿದರು. ಯುವಕರು ಭಂಡಸಾಲೆಯನ್ನು ಸುಲಿಗೆ ಮಾಡುವೆವೆಂದು ಬೆದರಿಸಲಾರಂಭಿಸಿದರು. ಮುದುಕರು ನಾಯಕನನ್ನು ಬಾಯಿತುಂಬ ಶಪಿಸತೊಡಗಿದರು. ಮೊನ್ನೆ ತಾನೆ ನಾಯಕನ ಸ್ನೇಹಿತನಾದ ರಾಮಮಲ್ಯರ ಭಂಡಸಾಲೆಯನ್ನು ಮಾಪಿಳ್ಳೆಯವರು ಸುಲಿಗೆ ಮಾಡಿದ್ದರು. ರಾಮಮಲ್ಯರ ಅಕ್ಕಿಗೆ ಪ್ರಾಪ್ತವಾದ ಗತಿಯೇ ತನ್ನ ಅಕ್ಕಿಗೂ ಪ್ರಾಪ್ತವಾಗುವುದೋ ಎಂಬ ಭೀತಿಯೂ ಸರ್ವೋತ್ತಮ ನಾಯಕನನ್ನು ಆವರಿಸಿಕೊಂಡಿತು. ತನ್ನ ಮುಂದಿರುವ ಜನರ ವರ್ತನೆಯನ್ನು ನೋಡಿ ಕೋಪದಿಂದ ಕಿಡಿಕಿಡಿಯಾದನು. 'ನಿಮಗೆ ಅಕ್ಕಿ ಬೇಕಾದರೆ ಕ್ರಯಕೊಟ್ಟು ತೆಕ್ಕೊಳ್ಳಿ, ಇಲ್ಲವಾದರೆ ಇಲ್ಲಿಂದ ಹೋಗಿ. ಗಲಾಟೆಯನ್ನೆಬ್ಬಿಸಿದರೆ ಪೋಲೀಸರನ್ನು ಕರೆಯುವೆನು!' ಎಂದು ಕೂಗಿ ಹೇಳಿದನು. ಇದನ್ನು ಕೇಳಿ ಕಲಹಪ್ರಿಯನಾದ ಒಬ್ಬ ಪುಂಡ ಯುವಕನು, 'ಪೋಲೀಸರನ್ನೋ? ಬೇಗನೇ ಕರೆಯಿರಿ! ಬಂದಿಖಾನೆಯಲ್ಲಾದರೂ ನಮಗೊಂದಿಷ್ಟು ಅನ್ನ ಸಿಕ್ಕೀತು' ಎಂದನು. ಇದನ್ನು ಕೇಳುತ್ತಲೇ ಅಲ್ಲಿದ್ದ ಕೆಲವರು ಗಟ್ಟಿಯಾಗಿ ನಕ್ಕುಬಿಟ್ಟರು. 'ಪೋಲೀಸರನ್ನು ಕರೆಯುವಿರೇ? ಬೇಗನೇ ಕರೆದು ಬಿಡಿ! ಈಗಲೇ ಕರೆದು ಬಿಡಿ!' ಎಂಬ ಬೊಬ್ಬೆಯು ಹರಡಲಾರಂಭಿಸಿತು.

ಗಲಾಟೆಯು ಹೆಚ್ಚೆಚ್ಚಾಗುತ್ತಾ ಬಂತು. ಭಂಡಸಾಲೆಯ ಬಾಗಿಲನ್ನು ಇನ್ನು ತೆರೆದಿರುವುದು ಯೋಗ್ಯವಲ್ಲವೆಂದು ನಾಯಕನು ತಿಳಿದುಕೊಂಡನು. ಕೋಪದಿಂದ ಕೆಂಪಗಾದನು, ಭಯದಿಂದ ಬಿಳುಪೇರಿದನು. 'ಆದದ್ದಾಗುತ್ತದೆ, ಆದರೆ ನನ್ನ ಪ್ರತಿಜ್ಞೆಯನ್ನು ಹಿಂತೆಗೆಯೆನು' ಎಂದು ತನ್ನೊಳಗೆ ಹೇಳುತ್ತಾ ಭಂಡಸಾಲೆಯ ಬಾಗಿಲನ್ನು ಹಾಕಲಿಕ್ಕೆ ತನ್ನ ಆಳಿಗೆ ಆಜ್ಞೆ ಕೊಟ್ಟನು. ಭಂಡಸಾಲೆಯ ಬಾಗಿಲು ಹಾಕುವಾಗಲೆಲ್ಲ ಅಲ್ಲಿ ಕೂಡಿದ್ದ ಜನರು ಹಾಸ್ಯ ಮಾಡತೊಡಗಿದರು. ಗೊಳ್ಳೆಂದು ನೆಗಾಡಿದರು. ಭಂಡಸಾಲೆಯನ್ನು ಸುಲಿಗೆ ಮಾಡುವೆವು ಎಂದು ನಾಯಕನನ್ನು ಮೊದಲು ಬೆದರಿಸಿದವರು ಈಗ ಅವನನ್ನು ನೋಡಿ, 'ಸ್ವಾಮಿೂ ಸರ್ವೋತ್ತಮ ನಾಯಕರೇ, ನೀವು ನಮಗೆ ಹೆದರಿ ಭಂಡಸಾಲೆಯ ಬಾಗಿಲನ್ನು ಮುಚ್ಚಬೇಕೆಂತಿಲ್ಲ. ನಾವೇನು ನಿಮ್ಮ ಅನ್ನವನ್ನು ತೆಗೆಯಲಿಕ್ಕೆ ಬಂದವರಲ್ಲ!' ಎಂದು ಹಾಸ್ಯಮಾಡಿದರು.

ನಾಯಕನು ಮನಸ್ಸಿನೊಳಗೇ ರೇಗಿಕೊಂಡನು. ಏನು ಮಾಡಬೇಕೆಂದು ಅವನಿಗೆ ತಿಳಿಯಲಿಲ್ಲ. ಭಂಡಸಾಲೆಯ ಬಾಗಿಲನ್ನು ಮುಚ್ಚಿಯೇ ಬಿಟ್ಟನು. ಕೋಪದಿಂದ ಕಂಪಿಸುತ್ತಾ ತನ್ನ ಮನೆಗಾಗಿ ಹೊರಟನು. ಆದರೆ ಊಟಕ್ಕಿಲ್ಲದೆ ಹತಾಶರಾದ ಆ ಜನರು ಅವನನ್ನು ಬಿಡುವರೇ? ಕೂಡಲೇ ಅಲ್ಲಿಂದ ಗುಂಪು ಗುಂಪಾಗಿ ಅವನ ಹಿಂದೆಯೇ ಹೋದರು. ಅವನ ಭಂಡಸಾಲೆಯನ್ನು ಮೊದಲು ಮುತ್ತಿಗೆ ಹಾಕಿದವರು ಈಗ ಅವನ ಮನೆಯನ್ನೇ ಮುತ್ತಿಗೆ ಹಾಕಿದರು.

ಸರ್ವೋತ್ತಮ ನಾಯಕನು ತನ್ನ ಕೋಣೆಯಲ್ಲಿ ಪಂಜರದಲ್ಲಿ ಹಾಕಿದ ಸಿಂಹದಂತಾದನು. ಹೊರಗಿನಿಂದ ಜನರ ಗದ್ದಲವು ಅವನ ಕಿವಿಯಲ್ಲಿ ಬೀಳುತ್ತಲೇ ಇತ್ತು. ಒಂದು ಸಲ ಹೆಂಗಸರ ಗೋಳು, ಮತ್ತೊಂದು ಸಲ ಮಕ್ಕಳ ಕೂಗು, ಇನ್ನೊಂದು ಸಲ ಮುದುಕರ ಕರ್ಕಶವಾದ ಧ್ವನಿಯು, ಮಗುಳೊಂದು ಸಲ ಹರೆಯದವರ ಹಾಸ್ಯ ಇವುಗಳೆಲ್ಲ ಆಗಾಗ್ಗೆ ಅವನ ಲಕ್ಷ್ಯವನ್ನು ಎಳೆಯುತ್ತಲೇ ಇದ್ದುವು. ಸರ್ವೋತ್ತಮ ನಾಯಕನು ಇನ್ನೊಬ್ಬನಾಗಿದ್ದರೆ ಅವನ ಮನಸ್ಸು ಆಗಲೇ ಕರಗಿ ತನ್ನ ಒಂದು ಮಾತಿನಿಂದ ಅಲ್ಲಿ ಕೂಡಿದವರೆಲ್ಲರ ಮನಸ್ಸನ್ನು ಸಂತೋಷಪಡಿಸಿ ಅವರನ್ನು ಆಗಲೇ ಕಳುಹಿಸಿ ಬಿಡುತಿದ್ದನು. ಆದರೆ ಸರ್ವೋತ್ತಮ ನಾಯಕನು ಸರ್ವೋತ್ತಮ ನಾಯಕನೇ. ಬಹಳ ಹಟವಾದಿಯು. ಕಲ್ಲೆದೆಯುಳ್ಳವನು. ಕೋಪಿಷ್ಠನು.

ಹೊರಗೆ ಕೂಡಿದ ನೂರಾರು ಜನರೆಲ್ಲರೂ ಅಷ್ಟೇ ಹುಳುಗಳಾಗಿದ್ದರೆ ಅವನು ಅವರನ್ನೆಲ್ಲ ತನ್ನ ಒಂದೇ ತುಳಿತದಿಂದ ಜಜ್ಜಿಬಿಡುತಿದ್ದನೆಂಬುದರಲ್ಲಿ ಸಂಶಯವಿಲ್ಲ. ಅಂತಹ ಹುಳುಗಳಂತಿರುವ ಅವರಿಗೆ ಬೆದರಿ ತನ್ನ ಭಂಡಸಾಲೆಯ ಬಾಗಿಲನ್ನು ಮುಚ್ಚಿದ ತನ್ನ ಹೇಡಿತನಕ್ಕೆ ಈಗ ಅವನು ವಿಶೇಷವಾಗಿ ವ್ಯಸನಪಟ್ಟನು. ತನ್ನೊಂದಿಗೆ ತಾನೇ ಕೋಪಗೊಂಡನು. ಅವನ ಮುಖದ ಭಾವವನ್ನು ನೋಡಿ ಮನೆಯುವರಲ್ಲಿ ಒಬ್ಬರಾದರೂ ಅವನ ಮುಂದೆ ಬರಲಿಕ್ಕೆ ಇಷ್ಟಪಡಲಿಲ್ಲ. ತಾನಿದ್ದೆಡೆಗೆ ಯಾರನ್ನಾದರೂ ಬರಲಿಕ್ಕೆ ಬಿಡಬಾರದೆಂತಲೂ ಅವನು ತನ್ನ ಆಳಿಗೆ ಆಜ್ಞಾಪಿಸಿ ಅವನನ್ನು ತನ್ನ ಕೋಣೆಯ ಬಾಗಿಲಿನಲ್ಲಿ ಕಾವಲಾಗಿ ಕುಳ್ಳಿರಿಸಿದನು. ಮತ್ತೇನು ಮಾಡಬೇಕೆಂದು ತೋರದೆ ತನ್ನ ಲೆಕ್ಕಾಚಾರದ ಪುಸ್ತಕಗಳನ್ನು ತೆಗೆದು ತಾನು ಅಕ್ಕಿಯ ಮೇಲೆ ಅಷ್ಟರ ವರೆಗೆ ಎಷ್ಟು ಲಾಭವನ್ನು ಪಡೆದಿದ್ದೇನೆಂದೂ, ಇನ್ನು ಮುಂದೆ ಸರಕಾರದವರು ಅಕ್ಕಿಯ ಧಾರಣೆಗೆ ಮಿತಿ ಇಡುವುದಾದರೆ ತಾನು ಎಣಿಸಿದ ಲಾಭದಿಂದ ಎಷ್ಟು ಕಳಕೊಳ್ಳಬೇಕಾಗುವುದೆಂದೂ ಲೆಕ್ಕವನ್ನು ಹಾಕಲಿಕ್ಕೆ ಪ್ರಾರಂಭಿಸಿದನು.

ಅಷ್ಟರೊಳಗೆ ತನ್ನ ಮನೆಯ ಮುಂದೆ ಒಂದು ಗಾಡಿ ಬಂದು ನಿಂತ ಶಬ್ದವನ್ನು ಕೇಳಿದನು. ಕೊಂಚ ಸಮಯದ ನಂತರ ತನ್ನ ಜಗಲಿಯ ಮೇಲೆ ಒಂದು ಪೆಟ್ಟಿಗೆಯನ್ನಿಟ್ಟ ಶಬ್ದವನ್ನು ಕೇಳಿದನು. ಇದಾದ ಸ್ವಲ್ಪ ಸಮಯದಲ್ಲಿಯೇ ಒಂದು ವ್ಯಕ್ತಿಯು ತನ್ನ ಕೋಣೆಯ ಬಾಗಿಲಿನಲ್ಲಿ ಕಾವಲಾಗಿ ನಿಂತಿದ್ದ ತನ್ನ ಆಳಿನೊಡನೆ ಚರ್ಚಿಸುವುದನ್ನು ಕೇಳಿದನು. ಕೊಂಚ ಸಮಯದಲ್ಲಿಯೇ ಅವನ ಕೋಣೆಯ ಬಾಗಿಲು ತೆರೆಯಲ್ಪಟ್ಟಿತು. ಸರ್ವೋತ್ತಮನು ನಾಯಕನು ಕೋಪದಿಂದ ತನ್ನ ಕುರ್ಚಿಯಿಂದೆದ್ದು ಬಾಗಿಲಿನ ಕಡೆಗೆ ನೋಡಿದನು. ಏಳು ವರ್ಷದ ಕೋಮಲವಾದ ಬಾಲಿಕೆಯು ಅವನ ಕಣ್ಣಿಗೆ ಬಿದ್ದಳು.

ದೊಡ್ಡವರು ಯಾರೇ ಆದರೆ ಕೂಡಲೇ ನಾಯಕನು ಅವರ ಮೇಲೆ ರೇಗಿ ಹಾಯಲಿಕ್ಕೆ ಹೋಗುತಿದ್ದನೆಂಬುದರಲ್ಲಿ ಸಂಶಯವಿಲ್ಲ. ಆದರೆ ಬಂದವಳು ಬರೇ ಒಬ್ಬ ಹುಡುಗಿಯು. ಅವಳನ್ನು ನೋಡಿ ಅವನ ಕೋಪವು ತಾತ್ಸಾರರೂಪವಾಗಿ ಮಾರ್ಪಟ್ಟಿತು.

'ಯಾರೇ, ನೀನು?' ಎಂದು ಅವಳನ್ನು ಕೇಳಿದನು. ಅವನ ಸ್ವರವನ್ನು ಕೇಳಿ ಹುಡುಗಿಯು ಬಾಗಿಲಿನಲ್ಲೇ ನಿಂತುಬಿಟ್ಟಳು.

'ನಾನು....ನಾನು....'ಎಂದು ನಡುಗುತ್ತಾ ಹೇಳಲಿಕ್ಕೆ ಪ್ರಾರಂಭಿಸಿದಳು.

'ಯಾರೆಂದು ಬೇಗ ಹೇಳಬಾರದೇ?'

'ನಾನು, ಕಮಲೆ.'

'ನೀನು ಕಮಲೆ ಎಂದರೆ?—'

'ಕಮಲೆ.'

'ನಿನ್ನ ಹೆಸರನ್ನು ಕೇಳಲಿಲ್ಲ, ನಾನು. ನೀನು ಯಾರೆಂದು ಕೇಳಿದ್ದು.'

'ನಾನು ಕಮಲೆ ಎಂದು ಹೇಳಲಿಲ್ಲವೇ?'

'ಇನ್ನೂ 'ಕಮಲೆ!' ನಿನಗೆ ಭಾಷೆ ಬರುವುದಿಲ್ಲವೇ? ನಿನ್ನ ತಂದೆಯ ಹೆಸರೇನು?'

'ನನಗೆ ಗೊತ್ತಿಲ್ಲ. ನಾನು....ಅಪ್ಪ...ಅಪ್ಪನೆಂದು ಕರೆಯುತಿದ್ದೆನು.... ನನಗೆ ಅಳು ಬರುತ್ತದೆ....'

'ಛೀ, ಇಲ್ಲಿ ಅಳಬೇಡ. ನೀನು ಇಲ್ಲಿ ಬಂದದ್ದು ಯಾಕೆ?'

'ನನಗೆ ಗೊತ್ತಿಲ್ಲ. ನನಗೆ ಇಲ್ಲಿ ಬರಲಿಕ್ಕೆ ಮನಸ್ಸು ಇರಲಿಲ್ಲ. ಆದರೆ ಅಮ್ಮ ಒತ್ತಾಯಮಾಡಿ ನನ್ನನ್ನು ಕಳುಹಿಸಿದರು. ಅಮ್ಮನನ್ನು ಬಿಟ್ಟು ಬಂದುದಕ್ಕೆ ನನಗೆ ಈಗ ಅಳು ಬರುತ್ತದೆ....ನಾನು ಇಲ್ಲೇ ನಿಲ್ಲಬೇಕೆಂದು ಅಮ್ಮ ಹೇಳಿದ್ದಾರೆ—'

'ಇಲ್ಲೇ ನಿಲ್ಲಬೇಕೆಂದು! ಇದೇನು ಛತ್ರವೆಂದು ನಿನ್ನ ಅಮ್ಮ ತಿಳಿದುಕೊಂಡಿದ್ದಾಳೋ?'

'ನನಗೆ ಗೊತ್ತಿಲ್ಲ... ಅಪ್ಪ....ಇಂದು.......ಬೆಳಗ್ಗೆ ತೀರಿ ಹೋದರು....'

'ನಿನ್ನಪ್ಪ ತೀರಿ ಹೋದರೆ ನಿನ್ನಮ್ಮ ನಿನ್ನನ್ನು ಇಲ್ಲಿಗೆ ಕಳುಹಿಸಬೇಕೇ?'

'ನಾನು ಇಲ್ಲಿಯೇ ನಿಲ್ಲಬೇಕೆಂದು ಅಮ್ಮ ನನ್ನನ್ನು ಕಳುಹಿಸಿದ್ದಾರೆಂದು ಹೇಳಿದ್ದೇನಲ್ಲವೇ?'

'ನಿನ್ನ ಅಮ್ಮ ಭಲಾ ಹೆಂಗಸು! ಇದೊಂದು ಛತ್ರ—ಅಲ್ಲ ತಪ್ಪಾಯಿತು—ಅನಾಥಶಾಲೆಯೆಂದು ನಿನ್ನ

ಅಮ್ಮನು ತಿಳಿದುಕೊಂಡಿರುವಂತೆ ಕಾಣುತ್ತದೆ. ಇರಲಿ. ನೀನು ಇಲ್ಲಿಂದ ಬಂದ ಹಾಗೆ ಹೋಗಿ, ಇದೊಂದು ಛತ್ರವೂ ಅಲ್ಲ, ಮುಸಾಫರ್‌ಖಾನೆಯೂ ಅಲ್ಲವೆಂದು ನಿನ್ನ ಅಮ್ಮನ ಕೂಡೆ ಹೇಳು; ಹೋಗು!'

ಕಮಲೆಯ ಕಣ್ಣುಗಳಲ್ಲಿ ನೀರು ತುಂಬಿತು. ತನ್ನಲ್ಲಿ ಉಕ್ಕಿ ಉಕ್ಕಿ ಬರುವ ಅಳುವನ್ನು ನಿಲ್ಲಿಸಲಿಕ್ಕೆ ಶತಪ್ರಯತ್ನಗಳನ್ನು ಮಾಡಿದಳು. 'ನೀನು ಅಳಬಾರದು' ಎಂದು ಅವಳ ತಾಯಿಯು ಹೇಳಿದ ಮಾತು ಅವಳ ನೆನಪಿಗೆ ಪುನಃ ಬಂತು. ಆದರೆ ಅವಳು ಎಲ್ಲಿ ಹೋಗಲಿ? ಯಾರಲ್ಲಿಗೆ ಹೋಗಲಿ? ಕಾಸರಗೋಡಿಗಾದರೂ ಅವಳನ್ನು ಯಾರು ಕರಕೊಂಡು ಹೋಗುವರು? ಅವಳು ಬಂದ ಗಾಡಿಯೂ ವಾಪಸು ಹೋಯಿತು. ಅವಳನ್ನು ನಾಯಕರಲ್ಲಿಗೆ ಕರಕೊಂಡು ಬಂದ ಆ ದಯಾಳುವಾದ ಕೂಲಿಯವನೂ ವಾಪಸು ಹೋದನು. ಇನ್ನು ಬರೇ ಬಾಲಿಕೆಯಾದ ಅವಳು ಯಾರ ಮುಖವನ್ನು ನೋಡುವುದು?

'ಏನು, ನೀನು ಇಲ್ಲಿಂದ ಇನ್ನೂ ಹೋಗಲಿಲ್ಲವೇ?' ಎಂದು ನಾಯಕನು ಗದರಿಸಿ ಕೇಳಿದನು.

ಇದಕ್ಕೆ ಉತ್ತರವಾಗಿ ಕಮಲೆಯು ಗದ್ಗದ ಕಂಠದಿಂದ ನಾಯಕನನ್ನು 'ಮಾವಯ್ಯ!' ಎಂದು ಕರೆದಳು.

ಇದನ್ನು ಕೇಳಿ ಸರ್ವೋತ್ತಮ ನಾಯಕನು ಬೆಚ್ಚಿಬಿದ್ದನು. 'ಮಾವಯ್ಯ! ನಾನು ನಿನ್ನ ಮಾವಯ್ಯ! ನಾನು ನಿನ್ನನ್ನು ಇದುವರೆಗೆ ನೋಡಲಿಲ್ಲವಲ್ಲ!'

'ಮಾವಯ್ಯ, ನಾನೂ ನಿಮ್ಮನ್ನು ಇದುವರೆಗೆ ನೋಡಲಿಲ್ಲ!'

'ಹಾಗಾದರೆ ನಾನು ನಿನ್ನ ಮಾವಯ್ಯನೆಂದು ನಿನಗೆ ಯಾರು ಹೇಳಿದರು?'

'ನನ್ನ ಅಮ್ಮ ಹೇಳಿದರು.'

ನಾಯಕನ ಮುಖದಲ್ಲಿ ನಸುನಗೆಯ ಒಂದು ಛಾಯೆಯು ತಲೆದೋರಿತು. 'ಸಾಕು, ತಿಳಿಯಿತು. ನಿನ್ನಮ್ಮ ಅವಳು ಯಾರೇ ಆಗಲಿ—ಬಹಳ ಚತುರಳು. ಅವಳು ಬಹಳ ಚತುರಳೆಂದೂ ನಾನು ಹೇಳಿದ್ದೇನೆಂದು ಅವಳಿಗೆ ತಿಳಿಸು. ಇನ್ನು ಇಲ್ಲಿ ನಿಲ್ಲಬೇಡ, ಹೋಗು. ನನಗೆ ಕೆಲಸ ಉಂಟು.—ಬಂಟೂ, ಈ ಹುಡುಗಿಯನ್ನು ಹೊರಗೆ ಕರಕೊಂಡು ಹೋಗಿ ಬಿಡು!'

ಬಾಗಿಲನ್ನು ಕಾಯುತಿದ್ದ ಬಂಟು ಕೋಣೆಯೊಳಗೆ ಬಂದನು. ಕಮಲೆಯ ಮುಖವು ಪುನಃ ಬಾಡಿಹೋಯಿತು. ಆದರೂ, ಪಾಪ, ಅವಳು ಹತಾಶಳಾಗಲಿಲ್ಲ.

'ಮಾವಯ್ಯ!'

'ನಾನು ನಿನ್ನ ಮಾವಯ್ಯನಲ್ಲವೆಂದು ಹೇಳಿದ್ದೇನಲ್ಲವೇ?'

'ನೀವು ನನ್ನ ಸೋದರಮಾವ ಸರ್ವೋತ್ತಮ ನಾಯಕರಲ್ಲವೇ?'

'ನಾನು ಸರ್ವೋತ್ತಮ ನಾಯಕನು ಹೌದು. ಆದರೆ ನಾನು ನಿನ್ನ ಸೋದರ ಮಾವಯ್ಯನೂ ಅಲ್ಲ, ಗೀದರ ಮಾವಯ್ಯನೂ ಅಲ್ಲ, ತಿಳಿಯಿತೇನು? ಇನ್ನು ಮಾತೆತ್ತದೆ ಹೋಗು, ನೋಡೋಣ. ಇಲ್ಲಿ ಸುಮ್ಮನೆ ಕರಕರೆ ಮಾಡಬೇಡ!'

'ಮಾವಯ್ಯ, ನಾನೀಗ ಹೋಗುವುದಾದರೂ ಎಲ್ಲಿಗೆ?'

'ನೀನೆಲ್ಲಿಂದ ಬಂದದ್ದೋ, ಅಲ್ಲಿಗೆ.'

'ಮಾವಯ್ಯ, ನಾನು ಕಾಸರಗೋಡಿನಿಂದ ಬಂದದ್ದು.'

ಸರ್ವೋತ್ತಮ ನಾಯಕನು ಪುನಃ ಬೆಚ್ಚಿಬಿದ್ದನು. 'ಏನು, ನೀನು ಈಗ ಅಷ್ಟು ದೂರದಿಂದ ಬಂದವಳೇ?'

'ಹೌದು, ಮಾವಯ್ಯ—'

'ನಿನ್ನನ್ನು ಕರಕೊಂಡು ಬಂದವರ್‍ಯಾರು?'

'ಯಾರೂ ಇಲ್ಲ.'

'ಯಾರೂ ಇಲ್ಲ?'

'ಹೌದು, ಮಾವಯ್ಯ. ಅಪ್ಪ....ಇಂದು ಬೆಳಿಗ್ಗೆ ........ತೀರಿಹೋದರು. ಅಮ್ಮ ನನ್ನನ್ನು ತಬ್ಬಿಕೊಂಡು ಅಳುತ್ತಾ ನಾನು ಇನ್ನು ನನ್ನ ಸೋದರಮಾವನಲ್ಲಿಗೆ ಹೋಗಬೇಕೆಂದರು. ನನ್ನನ್ನು ಒತ್ತಾಯದಿಂದ ರೈಲು ಬಂಡಿಯಲ್ಲಿ ಕುಳ್ಳಿರಿಸಿದರು. ಅಮ್ಮನನ್ನು ಬಿಟ್ಟು ಬರಬೇಕಾಯಿತು. ನಾನು ಅಳಬಾರದೆಂದು ಅಮ್ಮ ಅನೇಕ ಬಾರಿ ಹೇಳಿದರು. ಆದರೆ ಹಾಗೆ ಹೇಳುವಾಗಲೆಲ್ಲ ಅಮ್ಮ ಧಾರಾಳವಾಗಿ ಅಳುತಿದ್ದರು....ಮಾವಯ್ಯ, ನನಗೆ ಈಗ ಅಳು ಬರುತ್ತದೆ....ನಾನು ಅಳಲೇ?....ಇಲ್ಲ, ಮಾವಯ್ಯ ....ಅಳುವುದಿಲ್ಲ....ಮಂಗಳೂರು ಸ್ಟೇಶನಿನಲ್ಲಿ ಒಬ್ಬ ಕೂಲಿ

ಯಾಳು ಸಿಕ್ಕಿದನು. ಅವನು ಬಹಳ ಒಳ್ಳೆಯ ಮನುಷ್ಯನು, ಮಾವಯ್ಯ. ನನಗಾಗಿ ಗಾಡಿಮಾಡಿಕೊಂಡು ಇಲ್ಲಿ ವರೆಗೆ ಕರಕೊಂಡು ಬಂದನು. ಮಾವಯ್ಯ, ಅವನೊಬ್ಬ ಪುಣ್ಯಾತ್ಮ ನಲ್ಲವೇ? ಅನ್ನು ಕಾಸರಗೋಡಿನಲ್ಲಿ ನನಗೆ ಹೇಳಿದ್ದರು, ನನ್ನನ್ನು ಯಾರಾದರೂ ಒಬ್ಬ ಪುಣ್ಯಾತ್ಮರು ಇಲ್ಲಿಗೆ ಕರ ಕೊಂಡು ಬರುವರು ಎಂದು. ಹಾಗೆಯೇ ಆಯಿತಲ್ಲವೇ?'

ಕಮಲೆಯ ಈ ತೊದಲುನುಡಿಗಳನ್ನು ಕೇಳಿ ಸರ್ವೋತ್ತ್ರಮ ನಾಯಕನಿಗೆ ಅವಳ ಮೇಲಿದ್ದ ತಾತ್ಸಾರವು ಅಳಿದು ಹೋಯಿತು. ತನ್ನ ಹತ್ತಿರ ಹೇರಳ ದ್ರವ್ಯವಿದ್ದುದರಿಂದ ಯಾರೋ ಒಬ್ಬ ಬಡ ಹೆಂಗಸು ತನಗೆ 'ಠಕ್ಕಾರು' ಹೊಡೆಯ ಬೇಕೆಂದುದ್ದೇಶಿಸಿ ಈ ಬಾಲಿಕೆಯನ್ನು ತನ್ನಲ್ಲಿಗೆ ಕಳುಹಿಸಿ ದ್ದಿರಬೇಕು ಎಂಬ ಭಾವನೆಯು ಮಾರ್ಪಟ್ಟು ಈ ಇಡೀ ಸಂಗತಿಯು ಅತ್ಯಂತ ಶೋಕಾಸ್ಪದಕರವಾದುದೆಂಬ ಭಾವ ನೆಯು ಅವನ ಹೃದಯಲ್ಲಿ ನಾಟಕೊಳ್ಳಲಾರಂಭಿಸಿತು. ಹುಡುಗಿಯು ಏನೋ ತನ್ನನ್ನು ಮಾವಯ್ಯನೆಂದು ಕರೆಯು ತ್ತಿರುವಳು. ಆದರೆ ಅದರಿಂದೇನು? ಪಾಪ, ತನ್ನನ್ನು ಬೇಕಾದ ಹಾಗೆ ಕರೆಯಲಿ ಎಂದು ತಿಳಿದುಕೊಂಡನು. ಆದರೂ ಅವಳನ್ನು ತನ್ನ ಮನೆಯಲ್ಲಿಟ್ಟುಕೊಂಡು ಸಾಕಿ ಸಲಹುವ ಆಲೋಚನೆಯನ್ನು ಅವನು ಕ್ಷಣಮಾತ್ರಕ್ಕೂ ಮಾಡಲಿಲ್ಲ. ಏನು, ಅವನ ಮನೆಯೊಂದು ಛತ್ರವೇ, ಅಥವಾ ಅನಾಥರ ಆಶ್ರಯವೇ? ಅವನಲ್ಲಿ ಹೇರಳ ಹಣ ವಿತ್ತೆಂಬುದೇನೋ ನಿಜವು. ಆದರೆ ಈ ಒಂದು ಸಂಗತಿಯಲ್ಲಿ ಸ್ವಲ್ಪ ಸಡಿಲು ಬಿಟ್ಟರೆ ಅವನ ಮನೆಯು ಬೇಗನೇ ಅಂತಹ ಸಂಸ್ಥೆಗಳಲ್ಲಿ ಒಂದಾಗುವುದರಲ್ಲಿ ಆಶ್ಚರ್ಯವಿಲ್ಲವೆಂದು ಅವನು ತಿಳಿದುಕೊಂಡನು. ಅದರಲ್ಲಿಯೂ ಸರ್ವೋತ್ತಮನು ನಾಯಕನು ಹಣದ ದಾಸಾನುದಾಸನಾಗಿದ್ದನೆಂದು ನಾನು ಮೊದಲೇ ಹೇಳಲಿಲ್ಲವೇ? ಆದುದರಿಂದ ಹುಡುಗಿಯನ್ನು ಸಾಕಿ ದೊಡ್ಡವಳಾಗಿ ಮಾಡುವ ಆಲೋಚನೆಯನ್ನು ಅವನು ಒಂದು ಕ್ಷಣಕ್ಕಾದರೂ ಅಂಗೀಕರಿಸಲಿಲ್ಲ. ಅವಳ ಕೈಯಲ್ಲಿ ಹತ್ತು ಹದಿನೈದು ರೂಪಾಯಿಗಳನ್ನು ಕೊಟ್ಟರೂ ಚಿಂತೆ ಇಲ್ಲ. ಅವಳನ್ನು ಆ ದಿನದ ಸಂಜೆಯ 'ಶಟ್ಲ'ನಲ್ಲೇ ಕಾಸರಗೋಡಿಗೆ ಕಳುಹಿಸಬೇಕೆಂದು ನಿರ್ಧರಿಸಿದನು.

'ಮಾವಯ್ಯಾ—'

'ಏನು, ಮಗು?'

ನಾಯಕನಿಗೆ ತನ್ನ ಮೇಲಿದ್ದ ತಾತ್ಸಾರವಾದ ಭಾವವು ಈ ರೀತಿಯಾಗಿ ಮಾರ್ಪಟ್ಟಿರುವುದನ್ನು ನೋಡಿ ಕಮ ಲೆಯು ಸಂತೋಷಪಟ್ಟಳು. ಸಂತೋಷದಿಂದ ಅವಳ ಕಣ್ಣುಗಳಲ್ಲಿ ನೀರು ತುಂಬಿತು.

'ಮಾವಯ್ಯ, ನೀವು ಅಪ್ಪ....ಅಪ್ಪ....ನಂತೆ ಒಳ್ಳೆಯ ಮನುಷ್ಯರಲ್ಲವೇ? ಅಪ್ಪನನ್ನು ನಾನು ಪ್ರೀತಿಸುವಂತೆಯೇ ನಿಮ್ಮನ್ನೂ ಪ್ರೀತಿಸುವೆನು.'

'ಆದೀತು, ಮಗು.'

'ಮಾವಯ್ಯ, ನೀವು ಇನ್ನು ನನ್ನನ್ನು ಇಲ್ಲಿಂದ ಹೋಗಬೇಕೆಂದು ಒತ್ತಾಯಪಡಿಸುವುದಿಲ್ಲವೇನು?'

'ಇಲ್ಲ, ಮಗು—ಸದ್ಯಕ್ಕೆ ಇಲ್ಲ.'

'ಅಪ್ಪನನ್ನು....ಒಮ್ಮೆ....ನೋಡಬೇಕೆಂದು ಕಾಣು ತ್ತದೆ, ಮಾವಯ್ಯ. ನಾನಿನ್ನು ಅಪ್ಪನನ್ನು ನೋಡಲಾರೆನೇ? ಇಲ್ಲವೇ?....ಮಾವಯ್ಯ, ನನಗೆ ಅಳಬೇಕೆಂದು ಕಾಣು ತ್ತದೆ....ಬಹಳವಾಗಿ ಕಾಣುತ್ತದೆ........ಆವಾಗ್ಗಿನಿಂದಲೂ ನನಗೆ ಅಳು ಬರುತ್ತದೆ. ಮಾವಯ್ಯ, ನಾನು ಅಳಬಹುದೇ?

'ಬೇಡ, ಮಗು; ಈಗ ಬೇಡ. ನಿನಗೆ ಹಸಿವೆಯಾಗಿರ ಬೇಕು. ಒಳಗೆ ಹೋಗಿ ಊಟಮಾಡಿಕೊಂಡು ಬಾ, ಆ ಮೇಲೆ ಅಳಬಹುದು.'

ನಾಯಕನು ಅವಳನ್ನು ಒಳಗೆ ಕರಕೊಂಡು ಹೋಗಿ ಅವಳಿಗೆ ಅನ್ನ ಬಡಿಸುವಂತೆ ಮಾಡಿ, ಪುನಹ ತನ್ನ ಬೈಠಕ ಕೋಣೆಗೆ ಬಂದನು. ಹೊರಗಿನಿಂದ ಆ ಬಡ ಜನರ ಗಲಾ ಟೆಯು ಇನ್ನೂ ಅವನಿಗೆ ಕೇಳಿಸಿತು. ಆದರೆ ಅವರ ಮೇಲಿದ್ದ ಅವನ ಕೋಪವೂ ತಾತ್ಸಾರವೂ ಈಗ ಬಹಳ ಮಟ್ಟಿಗೆ ಕಡಮೆಯಾದುವು. ಅವರಲ್ಲೊಬ್ಬೊಬ್ಬರಿಗೆ ಒಂದೊಂದು ಅರ್ಧ ಪಾವು ಅಕ್ಕಿ ಹಾಕಿ ಅವರನ್ನೆಲ್ಲ ಕಳು ಹಿಸಿಬಿಡಲೇ ಎಂದು ಆಲೋಚಿಸಿದನು. ಆದರೆ ಅವರ ಗೋಳು ಭಿಕ್ಷೆಯನ್ನಿತ್ತುವುದಕ್ಕಲ್ಲ, ಅಕ್ಕಿಯ ಧಾರಣೆ ಯನ್ನು ಕಡಮೆಮಾಡುವುದಕ್ಕೆ ಎಂದು ಅವನು ಚೆನ್ನಾಗಿ ತಿಳಿದಿದ್ದನು. ಇದು ಅವನ ನೆನಪಿಗೆ ಬರುತ್ತಲೇ ಮೆಲ್ಲ ಮೆಲ್ಲನೆ ದ್ರಾವಕವಾಗುತ್ತಿರುವ ಅವನ ಹೃದಯವು ಪುನಹ ಗಟ್ಟಿಯಾಗಲಿಕ್ಕೆ ಪ್ರಾರಂಭಿಸಿತು. ಕೂಡಲೇ ಅವರಿಗೆ ಭಿಕ್ಷೆ ಹಾಕುವ ಆಲೋಚನೆಯನ್ನು ಕೂಡ ದೂರಮಾಡಿದನು. ಪುನಹ ತನ್ನ ಲೆಕ್ಕಾಚಾರದ ಪುಸ್ತಕಗಳನ್ನು ತೆಗೆದುಕೊಂಡು ತನ್ನ ಲಾಭ–ನಷ್ಟದ ಲೆಕ್ಕ ಹಾಕುವುದರಲ್ಲಿ ಮಗ್ನನಾದನು.

ಅಷ್ಟರೊಳಗೆ ಕಮಲೆಯು ಊಟಮಾಡಿಕೊಂಡು ಅವನಿದ್ದೆಡೆಗೆ ಪುನಹ ಬಂದಳು. ತನ್ನ ಪೆಟ್ಟಿಗೆಯ ಬಾಗಿಲನ್ನು ತೆರೆದು ಒಂದು ಪುಸ್ತಕವನ್ನು ಹೊರಗೆ ತೆಗೆದಳು.

'ಮಾವಯ್ಯ, ಈ ಪುಸ್ತಕವನ್ನು ನೋಡಿದಿರಾ?'

'ಇಲ್ಲ, ಮತ್ತೆ ನೋಡುವೆನು. ಈಗ ನನಗೆ ಕೆಲಸ ಉಂಟು' ಎಂದು ನಾಯಕನು ತನ್ನ ತಲೆಯನ್ನು ಕೂಡ ಎತ್ತದೆ ಹೇಳಿದನು.

ಹುಡುಗಿಯು ಪುಸ್ತಕವನ್ನು ತಗೆದುಕೊಂಡು ಅವನ ಹತ್ತಿರ ಹೋದಳು.

'ಮಾವಯ್ಯ, ನೋಡಿ, ಅಮ್ಮ ಇದನ್ನು ನನಗೆ ಕಲಿಸುತಿದ್ದರು. ಇದು ನಿಮ್ಮ ಪುಸ್ತಕವಂತೆ....ನೀವೂ ಅಮ್ಮನೂ ಒಟ್ಟುಗೂಡಿ ಕಲಿತ ಪುಸ್ತಕವಂತೆ........'

ಕಮಲೆಯ ಈ ಮಾತು ಅವನ ಮನಸ್ಸನ್ನು ಅವಳು ಹಿಡಿದಿದ್ದ ಪುಸ್ತಕದ ಕಡೆಗೆ ಸೆಳೆಯಿತು. ಪುಸ್ತಕವನ್ನು ನೋಡಿದನು. ಬಹಳ ಹಳೆದಾದ ಪುಸ್ತಕವಾಗಿತ್ತು. ಕುರ್ಚಿಯಿಂದ ತಟಕ್ಕನೇ ಎದ್ದನು.

'ಏನು, ಏನು? ನೀನು ಹೇಳಿದ್ದೇನು?' ಎಂದು ತವಕದಿಂದ ಕೇಳಿದನು.

ಕಮಲೆಯು ಕೂಡಲೇ ನೆಲದ ಮೇಲೆ ಕೂತುಕೊಂಡು ಪುಸ್ತಕದ ಹಾಳೆಗಳನ್ನು ಮಗುಚಿದಳು. ನಾಯಕನು ಅವಳ ಹಿಂದೆಯೇ ಬಗ್ಗಿಕೊಂಡು ನಿಂತು ಅವಳ ತಲೆಯ ಮೇಲಿನಿಂದ ಪುಸ್ತಕವನ್ನು ನೋಡಿದನು.

'ನೋಡಿ, ಮಾವಯ್ಯ, ಇದು ನೀವು ಬರೆದ ನಿಮ್ಮ ಹೆಸರೆಂದು ಅಮ್ಮ ಹೇಳುತಿದ್ದರು. ನೋಡಿ, ಇದರ ಕೆಳಗೇನೇ ಅಮ್ಮನು ಬರೆದ ಅವರ ಹೆಸರು....ಇದು ನೀವು ಮಾಡಿದ ಗುರುತು ಅಂತೆ........'

ನಾಯಕನು ಮೈಮರೆತನು. ಕೂಡಲೇ ಹುಡುಗಿಯಿಂದ ಆ ಪುಸ್ತಕವನ್ನು ಕಿತ್ತುಕೊಂಡನು. ಅಲುಗಾಡುವ ಬೆರಳುಗಳಿಂದ ಅದರ ಹಾಳೆಗಳನ್ನು ಮಗುಚಿದನು. ....ಕೂಡಲೇ ಒಂದು ದೊಡ್ಡ ಅರಚನ್ನು ಹಾಕಿ ಪುಸ್ತಕವನ್ನು ಕೆಳಗೆ ಬಿಟ್ಟುಬಿಟ್ಟನು....ಪುಸ್ತಕವು ನೆಲದ ಮೇಲೆ ಧೊಪ್ಪನೆ ಬಿತ್ತು........ನಾಯಕನು ರೆಪ್ಪೆಗೆ ರೆಪ್ಪೆಯನ್ನು ತಾಗಿಸದೆ ಕಮಲೆಯನ್ನು ದೀರ್ಘ ಸಮಯದ ವರೆಗೆ ನೋಡಿದನು. ಹತ್ತು ವರ್ಷಗಳ ದಪ್ಪನಾದ ಪದರಗಳು ಅವನ ಕಣ್ಣುಗಳನ್ನು ಮುಚ್ಚಿದ್ದುವು. ಅವುಗಳೆಲ್ಲ ಈಗ ಫಕ್ಕನೆ, ಒಂದೇ ಸವನೆ ಉದುರಿಬಿದ್ದುವು.... ಕಮಲೆಯು ಕೂತಲ್ಲಿಂದ ಏಳದೆ ನಾಯಕನ ಈ ಭಾವಾಂತರವನ್ನು ನೋಡಿ ಅವನನ್ನು ಆಶ್ಚರ್ಯದಿಂದ ನೋಡುತ್ತಾ ಕೂತುಕೊಂಡಳು....

'ಕಮಲೆ.... ಕಮಲೆ........' ಎಂದು ನಾಯಕನು ಮೆಲ್ಲಮೆಲ್ಲಗೆ ಹೇಳಿದನು.

'ಏನು, ಮಾವಯ್ಯ?' ಎಂದು ಕಮಲೆಯು ಕೇಳಿದಳು.

'ನಾನು....ನಾನು....ನಿಜವಾಗಿಯೂ ನಿನ್ನ ಸೋದರ ಮಾವನು....'

'ನಿಮಗೆ ಸಂಶಯವಿತ್ತೇ?....ನಾನು ಮೊದಲೇ ಹೇಳಲಿಲ್ಲವೇ?' ಎಂದು ಕಮಲೆಯು ಹೇಳಿದಳು.

ನಾಯಕನು ಉತ್ತರ ಕೊಡಲಿಲ್ಲ........ಹೊರಗೆ ಜನರ ಗಲಾಟೆಯು ಇನ್ನೂ ನಿಂತಿರಲಿಲ್ಲ. ಆದರೆ ಅದಕ್ಕೆಲ್ಲ ನಾಯಕನು ಈಗ ಕಿವುಡಾದನು........ಹತ್ತು ವರ್ಷ!.... ಹತ್ತು ವರ್ಷಗಳ ಕೆಳಗೆ ನಾಯಕನೂ ಅವನ ತಂಗಿ ರುಕ್ಮವೂ ಬಹಳ ಅನ್ಯೋನ್ಯದಲ್ಲಿದ್ದರು! ಹತ್ತು ವರ್ಷಗಳ ಕೆಳಗೆ ಅವನ ತಂಗಿ ರುಕ್ಮ ತನ್ನ ತವರುಮನೆಯಲ್ಲಿ ನಿಲ್ಲಬೇಕೆಂದು ಬಂದಿದ್ದಳು...ಒಂದು ತಿಂಗಳು ನಿಂತಿದ್ದಳು...ಒಂದು ತಿಂಗಳು ಸುಖವಾಗಿ ನಿಂತಿದ್ದಳು. ಆದರೆ ತಿಂಗಳು ಅಂತ್ಯವಾಗುವಷ್ಟರಲ್ಲಿಯೇ ಯಾವುದೋ ಒಂದು ಚಿಕ್ಕ ಸಂಗತಿಯು ಅವರೊಳಗೆ ಮನಃಕ್ಲೇಶವನ್ನು ಎಬ್ಬಿಸಿತು ...ಸಂಗತಿಯೇನೋ ಬಹಳ ಅಲ್ಪವಾಗಿತ್ತು. ಆದರೆ ಅದರಿಂದುದ್ಭವಿಸಿದ ಪರಿಣಾಮವು ಘೋರವಾಗಿ ಪರಿಣಮಿಸಿತು. ನಾಯಕನು ತನ್ನ ತಂಗಿಯನ್ನು ತನಗೆ ಜೀವವಿರುವವರೆಗೆ ನೋಡಲಾರೆನೆಂದು ಶಪಥಹಾಕಿಕೊಂಡನು. ರುಕ್ಮವು ತನಗೆ ಪ್ರಾಣವಿರುವವರೆಗೆ ತನ್ನಣ್ಣನ ಮನೆಯಲ್ಲಿ ಕಾಲಿಡಲಾರಳೆಂದು ಆಣೆ ಹಾಕಿಕೊಂಡಳು. ಆ ದಿನವೇ ರುಕ್ಮವು ತವರುಮನೆಯಿಂದ ಗಂಡನ ಮನೆಗೆ ಹೊರಟದ್ದಳು!....ಹತ್ತು ವರ್ಷ!....ಹತ್ತು ವರ್ಷಗಳು ಮನುಷ್ಯನ ಜೀವಮಾನದಲ್ಲಿ ಅಲ್ಪವಾದ ಸಮಯವಲ್ಲ!...ಆದರೆ ನಾಯಕನು ಹಟವಾದಿ ಎಂದು ನಾನು ಮೊದಲೇ ಹೇಳಲಿಲ್ಲವೇ? ರುಕ್ಮವು ಅವನ ತಂಗಿಯು. ಅದರಲ್ಲಿಯೂ ಹೆಂಗಸು. ಅವಳೂ ಹಟವಾದಿ

ಯಾದುದರಲ್ಲಿ ಆಶ್ಚರ್ಯವೇನು? ಈ ಹತ್ತು ವರ್ಷಗಳ ಪರ್ಯಂತವೂ ಅಣ್ಣ—ತಂಗಿಯರು ತಮ್ಮ ತಮ್ಮ ಪ್ರತಿಜ್ಞೆಯನ್ನು ಪಾಲಿಸಿಕೊಂಡು ಬಂದಿದ್ದರು. ನಾಯಕನು ಗಂಡಸು. ಅದರಲ್ಲಿಯೂ ಧನದಲ್ಲಿ ಆಸಕ್ತಿಯುಳ್ಳವನು. ಧನವನ್ನು ಶೇಖರಿಸುವುದರಲ್ಲಿ ರುಕ್ಮನನ್ನು ಕೂಡಲೇ ಮರೆತುಬಿಟ್ಟದ್ದನು. ತೀರಾ ಮರೆತುಬಿಟ್ಟದ್ದನು. ಈ ಹತ್ತು ವರ್ಷಗಳಲ್ಲಿಯೂ ಅವಳು ಜೀವದಲ್ಲಿದ್ದಳೋ ಇಲ್ಲವೋ ಎಂಬುದನ್ನು ಕೂಡ ಅವನು ಅರಿಯದಿದ್ದನು. ಈ ಹತ್ತು ವರ್ಷಗಳಲ್ಲಿಯೂ ಅವನ ಹೃದಯದಿಂದ ರುಕ್ಮವು ತೀರಾ ಮಾಯವಾಗಿ ಹೋಗಿದ್ದಳು.

ಆದರೆ, ಹತ್ತು ವರ್ಷಗಳ ಕೆಳಗೆ!—ಹತ್ತು ವರ್ಷಗಳ ಕೆಳಗೆ ಅವರೊಳಗಿದ್ದ ಮಮತೆಯು ಅಷ್ಟಿಷ್ಟಾಗಿರಲಿಲ್ಲ! ಕಮಲೆಯು ಹಿಡಿದಿದ್ದ ಆ ಪುರಾತನವಾದ ಪುಸ್ತಕವೇ ಅವರೊಳಗಿದ್ದ ಮಮತೆಯ ಮೂಕವಾದ ಸಾಕ್ಷಿಯಾಗಿತ್ತು.... ಪ್ರತಿಜ್ಞೆ... ಪ್ರತಿಜ್ಞೆಯು ಹಾಳಾಗಿ ಹೋಗಲಿ! ರುಕ್ಮವು ಸಂಕಷ್ಟದಲ್ಲಿರುವಳು! ಅವಳ ಸರ್ವಸ್ವವಾದ ಅವಳ ಪತಿಯು ಈಗ ಅವಳ ಕೈಯನ್ನು ಬಿಟ್ಟು ಹೋಗಿರುವನು! ಅವಳು ಈಗ ಅನಾಥೆಯಾಗಿರುವಳು! ಮರಣದ ಎದುರಿಗೆ ಆ ಹಾಳು ಪ್ರತಿಜ್ಞೆಯೇ? ರುಕ್ಮವು ಸಂಕಷ್ಟದ ಸಮಯದಲ್ಲಿ ತನ್ನನ್ನು ಮರೆಯಲಿಲ್ಲ! ತನ್ನ ಪ್ರತಿಜ್ಞೆಯನ್ನು ಭಂಗ ಮಾಡಿಕೊಂಡಳು! ಕಮಲೆಯನ್ನು ಕೂಡಲೇ ತಾನಿದ್ದೆಡೆಗೆ ಕಳುಹಿಸಿದಳು! ತಾನು ಈಗ ಹೇಡಿಯಾಗಬಹುದೇ?...ಇದೇ ರೀತಿಯಲ್ಲಿ ನಾಯಕನು ಆಲೋಚಿಸತೊಡಗಿದನು.....

ಹೊರಗಿನ ಗಲಾಟೆಯು ಇನ್ನೂ ನಿಂತಿರಲಿಲ್ಲ. ಕಮಲೆಯು ಅದನ್ನು ಕೇಳಿ ಸ್ವಲ್ಪ ಬೆದರಿದಳು. 'ಮಾವಯ್ಯ, ಹೊರಗೆ ಕೂಡಿದ ಜನರು ಯಾರು?' ಎಂದು ಕೇಳಿದಳು.

'ಬೇಡುವವರು.'

'ಇವತ್ತು ಶನಿವಾರ ಅಲ್ಲವಲ್ಲ?'

'ಅವರಿಗೆ ಎಲ್ಲಾ ದಿನಗಳೂ ಶನಿವಾರ ದಿನಗಳೇ.'

'ಅದೇನು ಮಾವಯ್ಯ, ಅವರು ಬಹಳ ಬಡವರೇ? ಪಾಪ....ಮಕ್ಕಳು ಹೇಗೆ ಅಳುತ್ತವೆ!....ಹೊಟ್ಟೆ ಹಸಿವೆಯಾಗಿದೆಯೋ ಏನೋ....'

ನಾಯಕನು ತನ್ನ ತುಟಿಗಳನ್ನು ಕಚ್ಚಿಕೊಂಡನು. ಕಮಲೆಯು ತನ್ನ ಕೈಯಲ್ಲಿದ್ದ ಪುಸ್ತಕದ ಹಾಳೆಗಳನ್ನು ಮಗುಚಿದಳು........

'ಮಾವಯ್ಯ—'

'ಏನು, ಮಗು?'

'ನೀವು ನನ್ನನ್ನು ಕಲಿಸುವಿರಲ್ಲವೇ? ನನಗೆ ಕಲಿಯುಬೇಕೆಂದು ಬಹಳ ಆಸೆಯಿದೆ.'

'ಅಗತ್ಯವಾಗಿಯೂ ಕಲಿಸುವೆನು, ಮಗು.'

'ಈಗಲೇ ಕಲಿಸುವಿರೋ? ಇದೋ, ನೋಡಿ, ನನಗೆ ಅಮ್ಮ ಇಲ್ಲಿವರೆಗೆ ಕಲಿಸಿದ್ದಾರೆ—'

'ಈಗ ಬೇಡ, ಮಗೂ, ಮತ್ತೆ ನೋಡೋಣ.'

'ಮಾವಯ್ಯ, ಇಲ್ಲಿ ನೋಡಿ. ಗಾಡಿಯ ಚಿತ್ರ....' ನಾನು ಇಂದು ಬಿಳೀ ಕುದುರೆಯ ಗಾಡಿಯಲ್ಲಿ ಬಂದಿದ್ದೆನು. ಬಿಳೀ ಕುದುರೆ ಬಹಳ ಚಂದವಲ್ಲವೇ?'

'ಹೌದು, ಮಗು.'

'ಅಪ್ಪ....ಅಪ್ಪ....ನನ್ನನ್ನು ಯಾವಾಗಲೂ ಬಿಳೀ ಕುದುರೆಯ ಗಾಡಿಯಲ್ಲೇ ಕುಳ್ಳಿರಿಸುತ್ತಿದ್ದರು............ ಮಾವಯ್ಯ—'

'ಏನು, ಮಗು?'

'ನಾನಿನ್ನು ಎಂದಾದರೂ ಅಪ್ಪನನ್ನು ನೋಡಲಾರೆನೇ?'

ನಾಯಕನಿಗೆ ಉತ್ತರ ಕೊಡಲಿಕ್ಕೆ ಮಾತು ಬರಲಿಲ್ಲ.

ಹೊರಗೆ ಜನರ ಗುಜುಗುಜು ಇನ್ನೂ ನಿಂತಿರಲಿಲ್ಲ.

'ಕಮಲೇ—'

'ಏನು, ಮಾವಯ್ಯ?'

'ನಿನಗೆ ತಮ್ಮನಾಗಲಿ, ತಂಗಿಯಾಗಲಿ ಇಲ್ಲವೇ?'

'ಇಲ್ಲ, ಮಾವಯ್ಯ. ಮನೆಯಲ್ಲಿ ನಾನೊಬ್ಬಳೇ. ನನಗೊಬ್ಬ ತಮ್ಮನಿರಬೇಕೆಂದು ಬಹಳ ಆಸೆಯಾಗುತ್ತದೆ.... ನಮ್ಮ ನೆರೆಮನೆಯ ಕಾವೇರಿಗೆ ತಮ್ಮನಿರುವನು. ನನಗೆ ಮಾತ್ರ ತಮ್ಮನಿಲ್ಲ. ನನಗೂ ಒಬ್ಬ ತಮ್ಮನಾಗಲಿಕ್ಕಿಲ್ಲವೇ?'

ನಾಯಕನ ಕಣ್ಣುಗಳಲ್ಲಿ ನೀರು ತುಂಬಿತು. ಆದರೆ ಕಮಲೆಗೆ ತೋರಿಸಿಕೊಳ್ಳಲಿಲ್ಲ.

'ಮಾವಯ್ಯ, ಅಮ್ಮನನ್ನೂ ನಾನು ಇನ್ನು ನೋಡಲಾರೆನೇ?'

'ಹಾಗೇಕೆ ಕೇಳುತ್ತೀ, ಮಗು? ನಿನ್ನಮ್ಮನನ್ನು ನೀನು ಇನ್ನು ಯಾವಾಗಲೂ ನೋಡುವಿ.'

'ಏನು, ನನ್ನನ್ನು ಕಾಸರಗೋಡಿಗೆ ಕಳುಹಿಸುವಿರೇ?'

'ಇಲ್ಲ, ಮಗು. ನಿನ್ನಮ್ಮನನ್ನು ನೀನು ಇಲ್ಲೇ ಯಾವಾಗಲೂ ನೋಡುವಿ.'

'ನಿಜವೇ, ಮಾವಯ್ಯ?'

'ನಿಜವಾಗಿಯೂ, ಮಗು.'

ಸಂತೋಷದಿಂದ ಆ ಬಾಲಿಕೆಯು ಒಂದು ಕ್ಷಣಕ್ಕೆ ಮೈಮರೆತಳು. ಆದರೆ ಕೂಡಲೇ ಅವಳ ಕೋಮಲವಾದ ಮುಖದಲ್ಲಿ ಸಂಶಯದ ಒಂದು ಮೋಡವು ಕವಿಯಿತು.

'ನಾನು ನಂಬುವುದಿಲ್ಲ, ಮಾವಯ್ಯ.'

ನಾಯಕನು ಆಶ್ಚರ್ಯದಿಂದ ಯಾಕೆಂದು ಕೇಳಿದನು.

ಹೊರಗಿನಿಂದ ಜನರ ಗಲಾಟೆಯು ಇನ್ನೂ ಕೇಳ ಬರುತಿತ್ತು.

'ಅಮ್ಮ ಆಡಿದ ಮಾತನ್ನು ತಪ್ಪುವುದಿಲ್ಲ....ನನ್ನನ್ನು ಇಲ್ಲಿ ಕಳುಹಿಸುವಾಗ್ಗೆ ನನ್ನನ್ನು ಇನ್ನು ನೋಡಲಾರಳೆಂದು ಹೇಳಿದ್ದರು....ಮಾವಯ್ಯ, ನನಗೆ ಅಳು ಬರುತ್ತದೆ.... ನಾನು ಈಗಲಾದರೂ ಅಳಲೇ?....'

ಇದನ್ನು ಕೇಳಿ ನಾಯಕನು ದಿಗಿಲುಬಿದ್ದಿನು. ಒಂದು ಘೋರವಾದ ಸಂಶಯವು ಅವನ ಮನಸ್ಸಿಗೆ ಹತ್ತಿತು. ಅವನ ದೇಹವು ಕಂಪಿಸಲಿಕ್ಕೆ ಪ್ರಾರಂಭಿಸಿತು. ತನ್ನ ಲೆಕ್ಕಾಚಾರದ ಪುಸ್ತಕದೊಂದರ ಖಾಲಿ ಕಾಗದವೊಂದನ್ನು ಹರಿದು ಅದರಲ್ಲಿ ತವಕದಿಂದ ಅಲುಗಾಡುತ್ತಿರುವ ತನ್ನ ಬೆರಳುಗಳಿಂದ ಏನೋ ಗೀಚಿದನು. ಕೂಡಲೇ ತನ್ನ ಆಳನ್ನು ಕರೆದು ಅವನೊಡನೆ ಆ ಕಾಗದವನ್ನೂ ಒಂದು ಐದು ರೂಪಾಯಿಯ ನೋಟನ್ನೂ ಕೊಟ್ಟು ಆ ಕ್ಷಣವೇ ಅವನನ್ನು ತಂತೀ ಆಫೀಸಿಗೆ ಕಳುಹಿಸಿದನು.

ತನ್ನ ತಂತಿಗೆ ಜವಾಬು ಬರುವ ವರೆಗೆ ತಾನು ಊಟ ಮಾಡುವುದಿಲ್ಲವೆಂದು ಒಳಗೆ ಹೇಳಿ ಕಳುಹಿಸಿದನು.

'ಕಮಲೆ—'

ಏನು, ಮಾವಯ್ಯ?'

'ನಿನಗೆ ಪುಣ್ಯವಿದ್ದರೆ....ಪುಣ್ಯವಿದ್ದರೆ....' ನಾಯಕನಿಗೆ ಮಾತು ಮುಂದರಿಸಲಿಕ್ಕಾಗಲಿಲ್ಲ.

ಹೊರಗಿನಿಂದ ಜನರ ಗಲಾಟೆಯು ಇನ್ನೂ ಕೇಳ ಬರುತಿತ್ತು.

ಎರಡು ತಾಸುಗಳು ಕಳೆದವು. ನಾಯಕನು ಈ ಎರಡು ತಾಸುಗಳ ವರೆಗೂ ಕುರ್ಚಿಯಲ್ಲಿ ಕದಲದೆ ಕುಳಿತಿದ್ದನು. ಪ್ರತಿ ಒಂದು ಕ್ಷಣ ಬಾಗಿಲಿನ ಕಡೆಗೆ ತವಕದಿಂದ ನೋಡುತಿದ್ದನು. ಕಮಲೆಯು ನೆಲದ ಮೇಲೆ ಕುಳಿತುಕೊಂಡು ಗಿಳಿಯಂತೆ ಮಾತಾಡುತಿದ್ದಳು. ಅವಳ ನಿರ್ಮಲವಾದ ಮಾತುಗಳು ಅವನ ಹೃದಯದಲ್ಲಿ ಉರಿಯುತ್ತಿರುವ ಜ್ವಾಲೆಯನ್ನು ಸ್ವಲ್ಪ ಮಟ್ಟಿಗಾದರೂ ತಣ್ಣಗೆ ಮಾಡುತಿದ್ದುವು.... ಕಟ್ಟಕಡೆಗೆ ಅವರಿದ್ದ ಕೊಠಡಿಯ ಬಾಗಿಲು ತೆರೆಯಿತು. ತಂತೀ ಜವಾನನು ಬಾಗಿಲ ಬಳಿಯಲ್ಲಿ ನಿಂತನು. ಸರ್ವೋತ್ತಮನು ನಾಯಕನು ಕೂಡಲೇ ಅವನಿದ್ದಲ್ಲಿಗೆ ಹೋಗಿ ಅವನು ಹಿಡಿದಿದ್ದ ಲಕ್ಕೋಟೆಯನ್ನು ಅವನ ಕೈಯಿಂದ ಎಳೆದುಕೊಂಡನು. ಅವನು ತೋರಿಸಿದ್ದ ಒಂದು ಕಾಗದದ ಚೂರಿನ ಎಡೆಯಲ್ಲಿಯೂ ತನ್ನ ದಸ್ಕತನ್ನು ಗೀಚಿದನು. ಉತ್ಸುಕತೆಯಿಂದ ಅಲುಗಾಡುತ್ತಿರುವ ಬೆರಳುಗಳಿಂದ ಲಕೋಟೆಯನ್ನು ಹರಿದು ತನ್ನ ತಂತಿಗೆ ಬಂದ ಜವಾಬನ್ನು ಓದಿ ನೋಡಿದನು...........

ನಾಯಕನಿಗೆ ತಲೆಗೆ ಸಿಡಿಲು ಬಡಿದಂತಾಯಿತು. ಎಲ್ಲವೂ ಅಂಧಕಾರಮಯವಾಯಿತು. 'ಕಮಲೆ....ಕಮಲೆ' ಎಂದು ಕರೆದನು. ಕಮಲೆಯು ಅವನ ಹತ್ತಿರ ಓಡಿ ಹೋದಳು. ಅವನು ಅವಳನ್ನು ಬಿಗಿದಾಗಿ ಅಪ್ಪಿಕೊಂಡನು. 'ನಾನು ಪಾಪಿಷ್ಠನು! ನನ್ನಷ್ಟು ಪಾಪಿಷ್ಠನು ಈ ಲೋಕದಲ್ಲಿ ಬೇರೆ ಯಾರೂ ಇಲ್ಲ!' ಎಂದು ತನ್ನ ಹಣೆಯನ್ನು ಬಡೆದುಕೊಳ್ಳಲಾರಂಭಿಸಿದನು. ತನ್ನ ಎರಡೂ ಕೈಗಳಿಂದ ತನ್ನ ಮುಖವನ್ನು ಮುಚ್ಚಿಕೊಂಡು ಮಕ್ಕಳಂತೆ ಅತ್ತನು. ತನ್ನ ಮಾವನ ಅವಸ್ಥೆಯನ್ನು ನೋಡಿ ಕಮಲೆಯ ಕಣ್ಣುಗಳಲ್ಲಿಯೂ ನೀರು ತುಂಬಿತು. ಆದರೂ ಅವನನ್ನು ಸಂತೈಸಲಿಕ್ಕೆ ಪ್ರಯತ್ನಿಸಿದಳು.

'ಮಾವಯ್ಯ! ದೊಡ್ಡವರು ಅಳುವುದಿಲ್ಲವಲ್ಲವೇ?'

'ಇಲ್ಲ, ಮಗೂ. ದೊಡ್ಡವರು ಅಳುವುದಿಲ್ಲ. ಆದರೆ ನಾನು ಅಳುವಂತೆ ಮಾಡಿಕೊಂಡಿದ್ದೇನೆ........ನಾನೊಬ್ಬ ಪಾಪಿಷ್ಠನು, ಮಗು....ಒಂದು ನರಪಿಶಾಚಿಯು........'

'ಮಾವಯ್ಯ, ಅಮ್ಮ ಇಲ್ಲಿ ಬರುವುದಿಲ್ಲವೇ?'

'ಇಲ್ಲ, ಮಗು........'

'ಎಂದಾದರೂ ಬರಲಿಕ್ಕಿಲ್ಲವೇ?'

'ಇಲ್ಲ, ಮಗು. ಅವಳು ನಿನ್ನ ಅಪ್ಪನ ಹಿಂದೆಯೇ ಹೋಗಿರುವಳು—'

'ಮಾವಯ್ಯ....ಮಾವಯ್ಯ....ನನ್ನನ್ನೂ ಕರಕೊಂಡು ಹೋಗಬಹುದಿತ್ತಲ್ಲವೇ?...ಅಮ್ಮ!....ಅಪ್ಪ!....'

ಆ ಬಾಲೆಯು ಶೋಕಿಸುವುದನ್ನು ನೋಡಿ ನಾಯಕನ ಎದೆಗೆ ಶೂಲವನ್ನು ಹಾಕಿದಂತಾಯಿತು. ತಾನು ಪಡುವ ದುಃಖವನ್ನು ಬಿಗಿದಾಗಿ ಮಾಡಿಕೊಂಡು ಅವಳ ತಲೆಯನ್ನು ತನ್ನ ಎರಡು ಕೈಗಳಲ್ಲಿ ಹಿಡಿದುಕೊಂಡನು. ಅವಳ ವಿಶಾಲವಾದ ಕಣ್ಣುಗಳಲ್ಲೇ ನೋಡುತ್ತಾ ಅವಳ ಹಣೆಗೆ ಮುದ್ದಿಟ್ಟನು. 'ಮಗೂ, ಅಳಬೇಡ' ಎಂದು ಅವಳನ್ನು ಸಂತೈಸಿದನು.

'ಮಾವಯ್ಯ, ನಾನು ಅಳುವನ್ನು ಇನ್ನೆಷ್ಟು ಹೊತ್ತು ತಡೆದುಕೊಳ್ಳಲಿ? ಆಗುವುದಿಲ್ಲ, ಮಾವಯ್ಯ, ನಾನು ಅಳುವೆನು....ಈಗಲಾದರೂ ಅಳುವೆನು........'

ಹೊರಗಿನಿಂದ ಜನರ ಗಲಾಟೆಯು ಇನ್ನೂ ಕೇಳಬರುತಿತ್ತು.

ಅದನ್ನು ಕೇಳಿದ ಕೂಡಲೇ ನಾಯಕನ ಮುಖದಲ್ಲಿ ನೂತನವಾದ ಪ್ರಕಾಶವೊಂದು ಹೊಳೆಯಲಾರಂಭಿಸಿತು. ಕಮಲೆಯನ್ನು ಬಿಗಿದಾಗಿ ಅಪ್ಪಿಕೊಂಡು ಅವಳ ಕಣ್ಣುಗಳಲ್ಲಿ ಪುನಹ ನೋಡಿದನು.

'ಮಗೂ, ಕಮಲೇ—'

'ಏನು ಮಾವಯ್ಯ?'

'ನೀನು ಬೇಕಾದಷ್ಟು ಅಳಬಹುದು. ಆದರೆ ಈಗ ಬೇಡ. ನನ್ನದೊಂದು ಚಿಕ್ಕ ಕೆಲಸವನ್ನು ಮಾಡುವಿಯಾ? ಆ ಮೇಲೆ ಅಳಬಹುದು....'

'ಯಾವ ಕೆಲಸ, ಮಾವಯ್ಯ?'

'ಹೊರಗೆ ನೂರಾರು ಜನರಿದ್ದಾರಲ್ಲವೇ?'

'ಹೌದು, ಮಾವಯ್ಯ, ಅವರು ಇನ್ನೂ ಹೋಗಲಿಲ್ಲ.'

'ಅವರ ಮುಂದೆ ಹೋಗಿ ನಿಲ್ಲಲಿಕ್ಕೆ ನಿನಗೆ ಹೆದರಿಕೆಯಾದೀತೇ?'

'ಇಲ್ಲ, ಮಾವಯ್ಯ. ಹೆದರಿಕೆ ಏನು?'

'ನಾನೀಗ ನಿನ್ನ ಹತ್ತಿರ ಹೇಳುವಂಥಾದ್ದನ್ನು ನೀನು ಅವರ ಮುಂದೆ ಹೇಳುವಿಯಾ?'

'ಅಡ್ಡಿಯೇನು, ಮಾವಯ್ಯಾ? ಏನೆಂದು ಹೇಳಬೇಕು?'

'ಮಗೂ, ಅವರಿದ್ದಲ್ಲಿಗೆ ಹೋಗಿ ನಾನು ನಾಳೆ ಬೆಳಗ್ಗಿನಿಂದ ನನ್ನ ಹತ್ತಿರ ಇದ್ದ ಅಕ್ಕಿಯನ್ನೆಲ್ಲ ಮುಡಿ ಒಂದಕ್ಕೆ ಐದು ರೂಪಾಯಿಯಂತೆ ಮಾರುತ್ತೇನೆಂದು ಹೇಳಿ ಬಾ....ಹೋಗು, ಮಗು.'

ಕಮಲೆಯು ತನ್ನ ಮುಖವನ್ನು ಒರಸಿಕೊಂಡು ಹೊರಗೆ ಹೋದಳು. ಆ ನೂರಾರು ಮಂದಿ ಜನರ ಮುಂದೆ ಜಗಲಿಯ ಮೇಲೆ ನಿಂತುಕೊಂಡಳು. ಅವರೆಲ್ಲರನ್ನು ಒಂದು ಬಾರಿ ನೋಡಿದಳು. ಅವರೆಲ್ಲರೂ ತಾವು ಮಾಡುತ್ತಿರುವ ಗದ್ದಲವನ್ನು ಕೂಡಲೇ ನಿಲ್ಲಿಸಿ ಆ ಕೋಮಲವಾದ ಬಾಲಿಕೆಯನ್ನು ನೋಡಲಾರಂಭಿಸಿದರು.

'ನನ್ನ ಸೋದರಮಾವ ಸರ್ವೋತ್ತಮ ನಾಯಕರು ನನ್ನನ್ನು ನಿಮ್ಮ ಹತ್ತಿರ ಕಳುಹಿಸಿದ್ದಾರೆ' ಎಂದು ಕಮಲೆಯು ಸ್ವಲ್ಪವಾದರೂ ಭೀತಿಯಿಲ್ಲದೆ ಪ್ರಾರಂಭಿಸಿದಳು. ಅವರೆಲ್ಲರೂ ತಮ್ಮ ತಮ್ಮ ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಅವಳು ಹೇಳಬಹುದಾದ ಮಾತುಗಳನ್ನು ಕೇಳಲಿಕ್ಕೆ ತವಕಗೊಂಡರು.

ಕಮಲೆಯು ತನ್ನ ಮುಂದೆಯೇ ನೋಡುತ್ತಾ ತನ್ನ ಮೃದುವಾದ ಸ್ವರದಿಂದ ಮೆಲ್ಲಗೆ ಹೇಳಿದಳು:—'ನನ್ನ ಮಾವ ಸರ್ವೋತ್ತಮ ನಾಯಕರು ನಾಳೆ ಬೆಳಗ್ಗಿನಿಂದ ತಮ್ಮ ಹತ್ತಿರವಿದ್ದ ಅಕ್ಕಿಯನ್ನೆಲ್ಲಾ ಮುಡಿ ಒಂದಕ್ಕೆ ಐದು ರೂಪಾಯಿಯಂತೆ ಮಾರುತ್ತಾರೆ. ಇದನ್ನು ನಿಮಗೆ ತಿಳಿಸಲಿಕ್ಕೆ ನನ್ನನ್ನು ನಿಮ್ಮ ಹತ್ತಿರ ಕಳುಹಿಸಿದ್ದಾರೆ....ಇನ್ನು ನೀವೆಲ್ಲರೂ ಹೋಗುವಿರೇನು?'

ಇದನ್ನು ಕೇಳುತ್ತಲೇ ಆ ಬಡಜನರ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಸರ್ವೋತ್ತಮ ನಾಯಕರನ್ನು ತುಂಬಾ ಹೊಗಳಲಿಕ್ಕೆ ಪ್ರಾರಂಭಿಸಿದರು. ಆ ಬಾಲಿಕೆಯನ್ನು ತುಂಬಾ ಹರಸಿದರು. ಇಬ್ಬರು ಮುದುಕರು ಮುಂದಕ್ಕೆ ಬಂದು ಕಮಲೆಯ ತಲೆಯ ಮೇಲೆ ತಮ್ಮ ಕೈಗಳನ್ನಿಟ್ಟು, 'ದೇವರು ನಿನಗೆ ಒಳ್ಳೇದು ಮಾಡಲಿ!'

ಎಂದರು. ಇದನ್ನೆಲ್ಲ ನೋಡಿ ಕಮಲೆಯ ಕಣ್ಣುಗಳಿಗೆ ನೀರು ಬಂತು. ಅವಳು ಕೂಡಲೇ ತನ್ನ ಸೋದರಮಾವ ನಿದ್ದಲ್ಲಿಗೆ ಓಡಿಹೋದಳು. ನಾಯಕನು ಹೊರಗೆ ಆಗುತಿದ್ದುದನ್ನೆಲ್ಲ ನೋಡುತ್ತಲೂ, ಕೇಳುತ್ತಲೂ ನಿಂತುಕೊಂಡಿದ್ದನು. ಕಮಲೆಯು ತನ್ನ ಹತ್ತಿರ ಬಂದಾಕ್ಷಣ ಅವಳನ್ನು ಬಿಗಿಯಾಗಿ ಅಪ್ಪಿಕೊಂಡನು. ಅವಳಲ್ಲಿ ಅಳುವು ಉಕ್ಕಿ ಉಕ್ಕಿ ಬರಲಾರಂಭಿಸಿತು.

'ಮಾವಯ್ಯ ....ನಾನೀಗಲಾದರೂ........ಅಳಲೇ? ನನಗೆ ಬಹಳವಾಗಿ....ಅಳು....ಬರುತ್ತದೆ....'

'ಈಗ ಬೇಕಾದಷ್ಟು ಅಳು, ಮಗು!' ಎಂದು ನಾಯಕನು ಅವಳ ಕೋಮಲವಾದ ತಲೆಯನ್ನು ತನ್ನ ಹೃದಯಕ್ಕೆ ಒತ್ತಿಕೊಂಡು, ನೋಡುವವರ ಹೃದಯವು ಕರಗಿ ನೀರಾಗಿ ಹೋಗುವಂತೆ ಅವಳೊಂದಿಗೆ ತಾನೂ ಧಾರಾಳವಾಗಿ ಅತ್ತನು....

ನಾಗಣ್ಣನು ಕಥೆಯನ್ನು ಹೇಳುವುದನ್ನು ನಿಲ್ಲಿಸಿದನು. ಕೇಸರಿಯು ಮಾತೆತ್ತದೆ ಅಲ್ಲಿಂದೆದ್ದು ತನ್ನ ಕೊಠಡಿಗೆ ನೆಟ್ಟಗೆ ಹೋದಳು. ನಾನೂ ಅವಳನ್ನು ಹಿಂಬಾಲಿಸಿ ಹೋದೆನು. ಅವಳ ಕಣ್ಣುಗಳು ನೀರಿನಿಂದ ತುಂಬಿ ಕೆಂಪಾಗಿದ್ದುವು. 'ನನಗೆ ಒಂದು ಕ್ಷಣಕ್ಕೆ ಇಲ್ಲಿ ಒಂಟಿಯಾಗಿ ಕೂತುಕೊಳ್ಳಬೇಕು' ಎಂದಳು. ನನಗೆ ಅರ್ಥವಾಯಿತು. ನಾನು ಕೂಡಲೇ ಹೊರಗೆ ಹೋದೆನು. ಆದರೆ ನಾಗಣ್ಣನು ಅಲ್ಲಿರಲಿಲ್ಲ. ಅವನು ಅಷ್ಟರೊಳಗೆ ಪಲಾಯನಮಾಡಿಬಿಟ್ಟಿದ್ದನು.




## ಸೆರೆಯಾಳಿನ ಬಾಳು.

(ಗೋವಿನ ಕಥೆಯ ಮಟ್ಟು)

ಮಾನ ಹೋಯಿತು ಹಾನಿಯಾಯಿತು ।
ಹೀನ ಬಾಳ್ವೆಯು ಒದಗಿತು ॥
ಸ್ಥಾನವಿಲ್ಲವು ಊನವೆಲ್ಲವು ।
ಶ್ವಾನ ಜನ್ಮವು ಬಂದಿತು ॥ ೧ ॥

ಕರುಣೆ ತೋರರು ಮೊರೆಯ ಕೇಳರು ।
ಅರಸನಾಳ್ಗಳು ಹೀನರು ॥
ಕರೆಸಿ ಎನ್ನನು ಇರಿಸಿ ಬಂಧನ ।
ಸರಿದು ಪೋದರು ಜಾಣರು ॥ ೨ ॥

ತಡೆಯಲಾರದೆ ಮಡದಿ ಮಕ್ಕಳು ।
ಬಿಡದೆ ಗೈಯುವ ಗೋಳನು ॥
ಕಡನ ಮಾಡಿದೆ ಕಡೆಗೆ ಸಾಲವು ।
ಒಡನೆ ಏರಿತು ಹೆಚ್ಚಿತು ॥ ೩ ॥

ಹುಟ್ಟಿ ಕಡವೂ ಸೃಷ್ಟಿಯೊಳಗೆ ।
ಕೆಟ್ಟ! ಬಡವನು ಕೆಟ್ಟನು ॥
ಕಷ್ಟಪಡುವೆನು ಭ್ರಷ್ಟನಾದೆನು ।
ನಿಷ್ಠುರಾಯಿತು ಲೋಕದಿ ॥ ೪ ॥

ಮೂಲವಿಲ್ಲವು ಸಾಲ ಸಲಿಸಲು ।
ಕಾಲ ಕಡಿದಂತಾಯಿತು ॥
ಪಾಲುಮಾರಿಕೆ ಮಾಡಲಿಲ್ಲವು ।
ಜಾಲದಲಿ ತಗ್ಗಿತು ಕುಗ್ಗಿತು ॥ ೫ ॥

ಕೂಳಿಗಿಲ್ಲದೆ ಕಾಳು ತರುವರೆ ।
ಸಾಲವನು ನಾ ಗೈದೆನು ॥
ಹಾಳು ಜನ್ಮವು ಬಾಳು ಕೆಡಿಸಿತು ।
ಜಾಲದಲಿ ನಾ ಬಿದ್ದೆನು ॥ ೬ ॥

ಎಲ್ಲಿ ಮಿತ್ರರು? ಎಲ್ಲಿ ಪುತ್ರರು ।
ಎಲ್ಲರಿದ್ದರು ಹಿಂದಕೆ ॥
ಸೊಲ್ಲನಾಡರು ಎಲ್ಲರೋಡ್ವರು ।
ಇಲ್ಲವಾದರೆ ದೂರಕೆ ॥ ೭ ॥

ಅಣ್ಣ ಬಾರನು ತಮ್ಮ ತೋರನು ।
ಕಣ್ಣ ನೀರನು ಮಿಡಿವೆನು ॥
ಒನ್ನಬಡುವೆನು ಸುಣ್ಣವಾದೆನು ।
ಪುಣ್ಯವಿಲ್ಲದೆ ಬೆಳೆದೆನು ॥ ೮ ॥

ತಾನೆ ಶತ್ರುವು ತಾನೆ ಮಿತ್ರನು ।
ಏನಿದೇನೈ ಚಿತ್ರವು! ॥
ಹೀನ ಕರ್ಮದಿ ನಾನು ಸೊರಗುವೆ, ।
ಏನು ದೈವದ ಮಾಯೆಯು! ॥ ೯ ॥

ಊರ ಸಾರೀ ಮನೆಯ ಸೇರೀ ।
ತೋರಲೆಂತೀ ಮುಖವನು ॥
ಪಾರುಗೊಳಿಸೂ ಹರಣ ತ್ಯಜಿಸೂ ।
ಸಾರಿ ಬೇಡುವೆ ದೇವನೆ! ॥ ೧೦ ॥

---

## ಕರ್ಮಫಲ.*

(ಭಾಮಿನಿ ಷಟ್ಪದಿ)

ಅರಸನಿದ್ದನು ಸ್ನಾನಮಾಡುತ ।
ಅರಸಿ ಪತಿವ್ರತೆ ಪೂಸಿ ತೈಲ್ಯವ ।
ಮೆರೆಯುತಿದ್ದಳು ಸರಸವಾಡುತ ಮಜ್ಜನಾಲಯದಿ ॥
ಹರುಷದಲಿ ಇನಿತಿರಲು ಸತಿಪತಿ ।
ಅರಸುತವಸರ ಕಾರ್ಯಕೋಸುಗ ।
ಬರುತ ಸಚಿವನು ಬೆರಗುಗೊಂಡನು ನಟನೆಯನು ಕಂಡು ॥ ೧ ॥

ಬೆರಳ ಮೂಗಿನ ಮಂತ್ರಿ ಕಾರ್ಯವ ।
ತಿರುಗಿದನು ಮುಗಿಸುತ್ತ ತನ್ನಯ ।
ಧರಿಸಿ ಆಶೆಯ ಸರಸವಾಡುವ ಮನದಿ ಮನೆಗಾಗಿ ॥
ಬರಲು ವೇಳೆಯು ಮಂತ್ರಿ ಸ್ನಾನದ ।
ಕರೆದು ಸತಿಯನು ಕೂಡಿ ಸೇರ್ದನು ।
ಪರಮ ಹರುಷದಿ ಕೊರತೆಯಿಲ್ಲದ ಮಜ್ಜನಾಲಯವ ॥ ೨ ॥

ತರತರದ ಪರಿಮಳದ ತೈಲ್ಯವ ।
ಕರದಿರಿಸಿ ಪಾತ್ರೆಗಳ ಪತ್ನಿಯ ।
'ತರುಣಿ ನೀ ಪೂಸೆ'ಂದು ಆಜ್ಞಾಪಿಸಲು ಚಾರಿಕೆಯ ॥
ಕರಿವೆನೆನೆ ಕೇಳದೆಲೆ ನೀನೇ ।
ಎರೆಯಬೇಕೆಂದೆನುವ ಹಟವನು ।
ಹರಿಸಲಾರದುಪಾಯಗಾಣದೆ ಆಜ್ಞೆ ಸಲಿಸಿದಳು ॥ ೩ ॥

ಅರಸಗೈದಿಹ ಚೇಷ್ಟೆಗಳನಾ ।
ಸರಸಿಜಾನನೆಯಲ್ಲಿ ಸಚಿವನು ।
ಪರಮ ತೋಷದಿ ಹಿರಿದು ಹಿಗ್ಗುತ ತೋರಲಾ ರಮಣಿ ॥
ತರವಿದಲ್ಲೆಂದುಸುರುತಿನಿಯನ ।
ಜರೆಯಲುಪಕ್ರಮಿಸಿದಳು ತಾ ಮಿಗೆ ।
ತಿರುಗಿ ಗೈದನು ಮಾಡಲಾಗದ ಚೇಷ್ಟೆಯೊಂದನ್ನು ॥ ೪ ॥

ಧರಿಸಿದಳು ಕೋಪವನು ಬಳಿಕಾ ।
ಕರದ ತಂಬಿಗೆಯನ್ನು ಭರದಲಿ ।
ವರನ ಮುಖಕಪ್ಪಳಿಸಿದಳು ಮನವೆಸಿತು ಬಜ್ಜರವೊ? ॥
ಹರುಷವಡಗಿತು ರದನವುದುರಲು ।
ಅರಸನಲ್ಲವೆ ಭಾಗ್ಯಶಾಲಿಯು? ।
ನಿರುತ ಬೆನ್ನನು ಬಿಡುವುದೇ ಪಾತಕಿಯ ಕರ್ಮಫಲ? ॥ ೫ ॥

**ಕಟಪಾಡಿ ಹೊನ್ನಯ ಶೆಟ್ಟಿ,** ಉಡುಪಿ.

---

[* ಶ್ರೀಸ್ವಾಮಿ ರಾಮಕೃಷ್ಣ ಪರಮಹಂಸರ ಸತ್ಕಥಾ ಕುಸುಮಮಂಜರಿಯಲ್ಲಿ ತೋರುವ ಒಂದು ಕಥೆಯ ಭಾಗವು.]

ಪುಟ 133ರಿಂದ 150ರ ವರೆಗೆ—ಸರಸ್ವತೀ ಪ್ರಿಂಟಿಂಗ್ ವರ್ಕ್ಸ್ ಲಿಮಿಟೆಡ್, ಮಂಗಳೂರು.

# ಮೂಡಬಿದರೆಯ ಹೊಸ ಬಸದಿಯ ಶಿಲಾಶಾಸನಗಳು.

ಲೇಖಕ:—ಶ್ರೀಯುತ ಪಂಜೆ ಮಂಗೇಶರಾವ್, ಬಿ. ಎ., ಎಲ್. ಟಿ.

---

ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆಯ ಹೊಸ ಬಸದಿಯ ಶಾಸನಗಳಿಗೆ ವಿಶೇಷ ತರದ ಮಹತ್ವವಿದೆ. ಇವು ಬಾರಕೂರು, ಉದಿಯಾವರ, ಕದರೆ ಮುಂತಾದ ಜಿಲ್ಲೆಯ ಇತರ ಭಾಗಗಳಲ್ಲಿಯ ಶಾಸನಗಳಷ್ಟು ಹಳೆಯವಲ್ಲದಿದ್ದರೂ, ತುಳುದೇಶದ ಚರಿತ್ರೆಗೆ ಅವುಗಳಷ್ಟೇ ಉಪಯುಕ್ತವಾಗಿವೆ; ಮತ್ತು ಕ್ರಿಸ್ತಶಕದ ೧೫ನೆಯ ಶತಮಾನದ ಕನ್ನಡ ಪದ್ಯ ಸರಣಿಯನ್ನು ತಿಳಿಯುವುದಕ್ಕೆ ಇವುಗಳಿಗಿಂತ ಉತ್ತಮವಾದ ಶಾಸನಗಳು ಜಿಲ್ಲೆಯ ಬೇರೆ ಕಡೆಗಳಲ್ಲಿ ಇದು ವರೆಗೆ ದೊರೆತಿಲ್ಲ. ಮದರಾಸಿನ ಶಾಸನ ಇಲಾಖೆಯವರು ಸುಮಾರು ಎಂಟು ವರ್ಷಗಳ ಹಿಂದೆ ಮೂಡಬಿದರೆಯಿಂದ ಇವುಗಳನ್ನು ನಕಲು ಮಾಡಿಕೊಂಡು ಹೋದರು. ಸುಮಾರು ೧೦೦ ವರ್ಷಗಳ ಹಿಂದೆಯೇ ಇವುಗಳ ಒಂದು ಪ್ರತಿಯು "ಮದರಾಸ್ ಒರಿಯಂಟಲ್ ಲೈಬ್ರೆರಿಯ ಲೋಕಲ್ ರಿಕಾರ್ಡುಗಳ ೩೨ನೆಯ ಸಂಪುಟದಲ್ಲಿ" ಅಡಕವಾಗಿರುವ ಸಂಗತಿಯು ಹಲವರಿಗೆ ಹೊಸತಲ್ಲ. ಈ ಶಾಸನಗಳ ಪ್ರತಿಗಳನ್ನು ಮದರಾಸ್ ಶಾಸನ ಇಲಾಖೆಯ ಅಧಿಕಾರಿಗಳೂ ಒರಿಯಂಟಲ್ ಲೈಬ್ರೆರಿಯ ಅಧಿಕಾರಿಗಳೂ ನನಗೆ ನೋಡುವುದಕ್ಕೆ ಬಿಟ್ಟು ಅವುಗಳಿಂದ ಅನುವಾದ ಮಾಡುವುದಕ್ಕೆ ಅನುಮತಿಯನ್ನು ಕೊಟ್ಟುದಕ್ಕಾಗಿ ಅವರ ಉಪಕಾರಸ್ಮರಣೆಯನ್ನು ಮಾಡಿ, ಈ ಶಾಸನಗಳನ್ನು ಕುರಿತು ಎರಡು ಮಾತುಗಳನ್ನು ಹೇಳಬೇಕೆಂದಿರುತ್ತೇನೆ.

ಮೂಡಬಿದರೆಯ ಹೊಸ ಬಸದಿಯ ಗದ್ದಿಗೆಯ ಮಂಟಪದ್ವಾರದ ಇಕ್ಕಡೆಗಳಲ್ಲಿ ಮತ್ತು ಭೈರಾದೇವಿ ಮಂಟಪದ ಕಂಬದ ಮುಕ್ಕಡೆಗಳಲ್ಲಿ ಲಿಖಿತವಾಗಿರುವ ಈ ಶಾಸನಗಳಲ್ಲಿ ಪ್ರತಿ ಒಂದು ಇತರ ಜಿನಶಾಸನಗಳಂತೆಯೇ ಕೆಳಗಿನ ಶ್ಲೋಕದಿಂದ ಪ್ರಾರಂಭವಾಗುತ್ತದೆ:—

ಶ್ರೀಮತ್ಪರಮ ಗಂಭೀರಸ್ಯಾದ್ವಾದಾಮೋಘ ಲಾಂಛನಂ ।
ಜೀಯಾ ತ್ತ್ರೈಲೋಕನಾಥಸ್ಯ ಶಾಸನಂ ಜಿನಶಾಸನಂ ॥

ಅನಂತರ ಚಂದ್ರನಾಥಪರವಾದ ಮಂಗಲಾಚರಣ, ಜಂಬೂದ್ವೀಪ ಮೇರುಶೈಲ ಆರ್ಯಾಖಂಡ ತುಳುದೇಶ ಇತ್ಯಾದಿಗಳ ಉಲ್ಲೇಖ, ಶಾಸನಕಾಲದಲ್ಲಿದ್ದ ವಿಜಯನಗರದ ನರಪತಿಗಳ ಪ್ರಸ್ತಾಪ, ಬಸದಿಗೆ ದತ್ತಿಯನ್ನು ಬಿಟ್ಟವರ ವಂಶಾವಳಿ, ರಾಜರ ಪ್ರತಾಪವರ್ಣನ ಮೊದಲಾದ ವಿಷಯಗಳು ಗದ್ಯಪದ್ಯ ಸರಣಿಯಲ್ಲಿ ನಾಲ್ಕು ಶಾಸನಗಳಲ್ಲಿ ವರ್ಣಿತವಾಗಿವೆ. ಚಿಕ್ಕ ಚಂಪೂಗ್ರಂಥಗಳಂತಿರುವ ಆ ನಾಲ್ಕು ಶಾಸನಗಳ ಒಟ್ಟು ಪದ್ಯ ಸಂಖ್ಯೆ ೮೫. ಆದರೆ ಪದ್ಯಗಳನ್ನು ಕಟ್ಟಿದ ಕವಿಗಳ ನಾಮಾಂಕಿತಗಳಾಗಲಿ ಅವನ್ನು ಕಲ್ಲಿನಲ್ಲಿ ಕೆತ್ತಿದ ಶಿಲ್ಪಿಗಳ ಹೆಸರುಗಳಾಗಲಿ (ಒಂದರಲ್ಲಿ ಹೊರತು) ಶಾಸನಗಳಿಂದ ವ್ಯಕ್ತವಾಗುವುದಿಲ್ಲ. ಪದ್ಯಗಳಲ್ಲಿ ಱಕಾರ ವಿಚಾರವನ್ನು ಮಾಡಿಲ್ಲ: ಱಕಾರವು ಬಹು ಮಟ್ಟಿಗೆ ಪ್ರಾಸನಿಯಮದಲ್ಲಿ ಲಕ್ಷಿಸಲ್ಪಟ್ಟಿದೆ. ಶಾಸನಗಳ ಕಾಲಾವಧಿಯು ಕ್ರಿಸ್ತಶಕದ 1429ರಿಂದ 1539ರ ವರೆಗಿನ ಸುಮಾರು ನೂರು ವರ್ಷ. ಈ ಲೇಖನದಲ್ಲಿ ಆ ಶಾಸನಗಳನ್ನು ಸಮಗ್ರವಾಗಿ ನಕಲುಮಾಡುವುದು ಅನಾವಶ್ಯಕವಾದುದರಿಂದ, ತುಳುನಾಡಿನ ಚರಿತ್ರೆಗೂ ಕನ್ನಡ ಕವಿತಾಕ್ರಮದ ಅವಗಾಹನೆಗೂ ಸಂಬಂಧವಾದ ಪದ್ಯಗಳನ್ನು ಮಾತ್ರ ಅನುವಾದ ಮಾಡಿ, ಒಂದೊಂದೇ ಶಾಸನವನ್ನು ಕುರಿತು ವಿಚಾರ ಮಾಡುತ್ತೇನೆ. ಹಾಗೆ ಮಾಡುವ ಮೊದಲು ನಾನು ಒಂದು ಸಂಗತಿಯನ್ನು ವಾಚಕರಿಗೆ ಹೇಳಬೇಕಾಗಿದೆ. ಶಾಸನಕವಿಗಳು ಮೂಡಬಿದರೆಯನ್ನು ವೇಣುಪುರ ವಂಶಪುರ ಎಂಬೀ ಹೆಸರುಗಳಿಂದ ಕರೆಯುವರೆಂಬದನ್ನೂ, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಿಂದ ೧೮ ಮೈಲು ಪೂರ್ವಕ್ಕೆ ಇರುವ ಗೇರುಸೊಪ್ಪೆಗೆ ಸಂಗೀತಪುರ ಭಲ್ಲಾತಕೀಪುರ ಎಂಬ ನಾಮಾಂತರಗಳಿವೆಯೆಂಬದನ್ನೂ, ನಗಿರರಾಜ್ಯದ ರಾಜಧಾನಿಯಾಗಿದ್ದ ಈ ಗೇರುಸೊಪ್ಪೆಯಲ್ಲಿ ಜೈನರಾಜರು ವಿಜಯನಗರದ ನರಪತಿಗಳ ಮಾಂಡಳಿಕರಾಗಿದ್ದು, ಕಾಲಾನಂತರ ಸ್ವತಂತ್ರರಾಗಿ ಆಳಿ ಕೆಳದಿ ನಾಯಕರ ಕಾಲದಲ್ಲಿ ಹೆಸರಡಗಿಹೋದರೆಂಬದನ್ನೂ ಲಕ್ಷ್ಯದಲ್ಲಿಟ್ಟರೆ, ಈ ಶಾಸನಪದ್ಯಗಳಿಗೆ ಬೇರೆ ಟಿಪ್ಪಣಿಗಳನ್ನು ಕೊಡುವ ಆವಶ್ಯಕತೆ ಇರಲಾರದು.

**Iನೆಯ ಶಾಸನ.** ಇದು ಬಸದಿಯ ಗದ್ದಿಗೆಮಂಟಪದ್ವಾರದ ಬಡಗುಗೋಡೆಯಲ್ಲಿ ಬಲಗಡೆ ಇದೆ. ಚಂದ್ರಪ್ರಭಪರವಾದ ನಾಂದಿಶ್ಲೋಕದನಂತರ ಅದರಲ್ಲಿ ಹೇಳಿದ ತುಳುನಾಡಿನ ವರ್ಣನೆ ಹೀಗಿದೆ:—

